# ಕಮ್ಮಾರರ ಬದುಕಿನ ಸ್ಥಿತ್ಯಂತರಗಳು

(ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕರು :

ಶುಭಕರಾಚಾರಿ

ಮಾರ್ಗದರ್ಶಕರು

ಡಾ. ಗಂಗಾಧರ ದೈವಜ್ಞ

ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ, ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ–೫೮೩ ೨೭೬

೨೦೧೦

# ಕಮ್ಮಾರರ ಬದುಕಿನ ಸ್ಥಿತ್ಯಂತರಗಳು

(ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ
ಮಹಾಪ್ರಬಂಧ


ಸಂಶೋಧಕ
**ಶುಭಕರಾಚಾರಿ**





ಮಾರ್ಗದರ್ಶಕರು
**ಡಾ. ಗಂಗಾಧರ ದೈವಜ್ಞ**
ಎಂ.ಎ, ಎಂ.ಫಿಲ್, ಪಿಎಚ್.ಡಿ
ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೦

# ದೃಢೀಕರಣ ಪತ್ರ

ಶ್ರೀ ಶುಭಕರಾಚಾರಿ ಅವರು ಕಮ್ಮಾರರ ಬದುಕಿನ ಸ್ಥಿತ್ಯಂತರಗಳು (ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಗಿರಿಸೀಮೆ
ದಿನಾಂಕ: ೨೮.೦೮.೨೦೧೦

ಡಾ. ಗಂಗಾಧರ ದೈವಜ್ಞ
ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಬುಡಕಟ್ಟು ಅಧ್ಯಯನ ವಿಭಾಗ

# ಪ್ರಮಾಣ ಪತ್ರ

**ಕಮ್ಮಾರರ ಬದುಕಿನ ಸ್ಥಿತ್ಯಂತರಗಳು** (ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಗಂಗಾಧರ ದೈವಜ್ಞ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಗಿರಿಸೀಮೆ
ದಿನಾಂಕ: ೨೮.೦೮.೨೦೧೦

Subhacharya
**ಶುಭಕರಾಚಾರಿ**
ಸಂಶೋಧಕ

# ಅರಿಕೆ

ಕಮ್ಮಾರರ ಸಮುದಾಯವು ವೇದಕಾಲಕ್ಕಿಂತಲೂ ಪೂರ್ವದ ಇತಿಹಾಸವನ್ನು ಹೊಂದಿರುವಂತಹದ್ದು. ಇವರು ಜಗತ್ ಸೃಷ್ಟಿಕರ್ತನಾದ ವಿಶ್ವಕರ್ಮನ ವಂಶದವರು. ಇವರ ಮೂಲ ವೃತ್ತಿ ಕಬ್ಬಿಣ ಕೆಲಸ. ಈ ಸಮುದಾಯದವರು ವೈವಿಧ್ಯತೆಯಲ್ಲಿ ನೈಪುಣ್ಯತೆಯನ್ನು ಸಾಧಿಸಿದವರು. ಸಮಾಜದಲ್ಲಿನ ವಿವಿಧ ಸ್ಥರಗಳ ಸಮುದಾಯಗಳಿಗೆ ಒಂದು ಕಾಲಕ್ಕೆ ಅನಿವಾರ್ಯವಾಗಿ ಬೇಕಾದವರು. ಇವರ ಅವಶ್ಯಕತೆ ಸಾಮಾನ್ಯ ಜನರಿಂದ ರಾಜ-ಮಹಾರಾಜರುಗಳವರೆಗೆ ಬೇಕಾಗಿತ್ತು. ಭೂಮಿಯಲ್ಲಿಯ ಕೃಷಿ ಕಾರ್ಯಗಳಿಂದ ಹಿಡಿದು ಯುದ್ಧಕ್ಕೆ ಬೇಕಾಗುವ ಶಸ್ತ್ರಾಸ್ತ್ರಗಳನ್ನು ತಯಾರಿಸುವವರೆಗೆ ಈ ಜನಾಂಗದ ಅವಶ್ಯಕತೆ ಒಂದು ಕಾಲಕ್ಕೆ ಬೇಕಾಗಿತ್ತು. ಕಮ್ಮಾರರು, ಬಡಿಗೇರರು ಇಲ್ಲದ ಊರನ್ನು ಅದು ಒಂದು ಊರೇ ಎಂದು ಹೀಯಾಳಿಸುತ್ತಿದ್ದರು. ಸಮಾಜದ ಪ್ರತಿಯೊಂದು ಕಾರ್ಯಕ್ಕೆ ಈ ಕುಶಲಕರ್ಮಿಗಳ ಅವಶ್ಯಕತೆ ಇತ್ತು. ಇಂತಹ ಕುಶಲಕರ್ಮಿಗಳನ್ನು ಜನತೆ ಗೌರವದಿಂದ ಕಾಣುತ್ತಿದ್ದರು. ಒಂದು ಕಾಲಕ್ಕೆ ಜನಪ್ರಿಯರಾಗಿದ್ದ ಈ ಸಮುದಾಯ ಆಧುನಿಕತೆಯ ಮುಂದೆ ತನ್ನ ಅಸ್ಥಿತ್ವ ಉಳಿಸಿಕೊಳ್ಳಲು ಇಂದು ಪರದಾಡುತ್ತಿದೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಂಡು ಸ್ಥಳೀಯ ಸಂಪನ್ಮೂಲಗಳನ್ನು ಮತ್ತು ತಂತ್ರಜ್ಞಾನಗಳನ್ನು ಬಳಸಿಕೊಂಡು ಆ ಮೂಲಕ ಕೃಷಿಕ ವೃತ್ತಿಗೆ ಬೇಕಾದ ವಸ್ತುಗಳನ್ನು ಹಾಗೂ ಕಮ್ಮಾರರು ತಯಾರಿಸುತ್ತಿದ್ದ ಇತರೆ ವಸ್ತುಗಳನ್ನು ಕಾರ್ಖಾನೆಗಳ ಮೂಲಕ ಸಿದ್ಧಪಡಿಸುವ ಕೆಲಸಕ್ಕೆ ಕೈ ಹಾಕಿದಾಗ ಕಮ್ಮಾರರ ಪಾರಂಪರಿಕ ವೃತ್ತಿಗಳು ಮೂಲೆಗುಂಪಾಗಲಿಕ್ಕೆ ಪ್ರಾರಂಭವಾಯಿತು. ಕೈಗಾರಿಕೀಕರಣ, ವೈಜ್ಞಾನೀಕರಣ ಬೆಳೆದಂತೆಲ್ಲ ಮತ್ತು ಕಬ್ಬಿಣದಲ್ಲಿ ಹೊಸ ಹೊಸ ಉಪಕರಣಗಳ ಸಂಶೋಧನೆ ಆಗುತ್ತಿದ್ದಂತೆಲ್ಲ ಕಮ್ಮಾರರ ವೃತ್ತಿಗಳು ಹಂತ ಹಂತವಾಗಿ ಮೂಲೆಗುಂಪಾಗತೊಡಗಿದವು.

ಪಾರಂಪರಿಕ ಜ್ಞಾನದ ಹಿನ್ನೆಲೆಯಲ್ಲಿಯೇ ಕಮ್ಮಾರಿಕೆಯನ್ನು ಮಾಡುತ್ತಿದ್ದ ಅನೇಕ ಕಮ್ಮಾರರು ತಮ್ಮ ವೃತ್ತಿಯನ್ನು ಇಂದು ನಿಲ್ಲಿಸಿದ್ದಾರೆ. ಒಂದು ಘಟ್ಟದಲ್ಲಿ ಕೃಷಿಯ ಉತ್ಪಾದನಾ ವ್ಯವಸ್ಥೆಗೆ ಅದ್ಭುತವಾದ ಕೊಡುಗೆಯನ್ನು ನೀಡಿ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದ ಕಮ್ಮಾರರು ಇಂದು ಅಸಡ್ಡೆಗೆ ಒಳಗಾಗಿದ್ದಾರೆ. ಆಧುನಿಕ ಯುಗದಲ್ಲಿ ಕಮ್ಮಾರರು ಸಿದ್ಧಪಡಿಸುವ ವಸ್ತುಗಳು ನಿರುಪಯುಕ್ತವಾದವುಗಳಾಗಿವೆ ಎಂದು ಆಧುನಿಕ ಸಮಾಜ ಹೇಳುತ್ತಿದೆ. ಇಂದು ಕೇವಲ ಕೊಡ್ಲಿ, ಕುಡುಗೋಲು, ಇವುಗಳನ್ನು ಹರಿತ ಮಾಡುವ ಕೆಲಸಕ್ಕೆ ಮಾತ್ರ ಕಮ್ಮಾರರು ಉಳಿದುಕೊಳ್ಳುವಂತಾಗಿದೆ. ಕಮ್ಮಾರರ ಯುವ ಪೀಳಿಗೆ ಕಮ್ಮಾರಿಕೆ ವೃತ್ತಿಯಿಂದ ಅಸ್ಥಿತ್ವ ಇಲ್ಲ ಎಂಬುದನ್ನು ಕಂಡುಕೊಂಡಿದೆ. ಹೀಗಾಗಿ ಅವರು ಸಹ ವಿವಿಧ ಉದ್ಯೋಗಗಳನ್ನು ಹುಡಿಕಿಕೊಂಡು ನಗರ ಪ್ರದೇಶಗಳಿಗೆ ಹೋಗುತ್ತಿದ್ದಾರೆ.

ಆಧುನೀಕರಣ, ನಗರೀಕರಣ, ವೈಜ್ಞಾನೀಕರಣಕ್ಕೆ ಅನಿವಾರ್ಯವಾಗಿ ಕಮ್ಮಾರರು ಇಂದು ಮುಖಾ ಮುಖಿಯಾಗಬೇಕಾದ ಅನಿವಾರ್ಯತೆ ಉಂಟಾಗಿದೆ. ಬೆರಳೆಣಿಕೆಯ ಕಮ್ಮಾರರು ಅಕ್ಷರ ಜ್ಞಾನ ಉಳ್ಳವರು ಆಧುನಿಕ ತಂತ್ರಜ್ಞಾನಗಳನ್ನು ತಮ್ಮ ವೃತ್ತಿಯಲ್ಲಿ ಬಳಸಿಕೊಂಡು ಬದುಕುವುದನ್ನು ಕಲಿತಿದ್ದಾರೆ. ಆಧುನಿಕತೆಯ ಬರಾಟೆಯಲ್ಲಿ ಕಮ್ಮಾರರ ವೃತ್ತಿಗಳು ಅವರ ಸಂಸ್ಕೃತಿ, ಆಚಾರ ವಿಚಾರ, ಪಾರಂಪರಿಕ ಜ್ಞಾನ, ವಿದ್ಯೆ, ಸಂಪ್ರದಾಯ, ಆಚರಣೆಗಳು ಹೀಗೆ ಬದುಕಿನ ಎಲ್ಲ ಹಂತಗಳಲ್ಲೂ ಅನೇಕ ಬದಲಾವಣೆಗಳು ಉಂಟಾಗಿವೆ. ಇವುಗಳನ್ನೆಲ್ಲವನ್ನು ಗಮನದಲ್ಲಿಟ್ಟುಕೊಂಡು "ಕಮ್ಮಾರರ ಬದುಕಿನ ಸ್ಥಿತ್ಯಂತರಗಳು" ಎಂಬ ವಿಷಯದ ಮೇಲೆ ಸಂಶೋಧನೆಯನ್ನು ಕೈಗೊಳ್ಳಬೇಕೆಂಬ ಆಶೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದೆ. ಕಮ್ಮಾರರ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ, ಬದುಕಿನಲ್ಲಾದ ಬದಲಾವಣೆಗಳನ್ನು ಅರ್ಥೈಸಿಕೊಂಡು ಅಧ್ಯಯನ ಮಾಡುವ ಪ್ರಯತ್ನವನ್ನು ಇಲ್ಲಿ ನಾನು ಮಾಡಿದ್ದೇನೆ. ಸ್ಥಿತ್ಯಂತರಗಳೆಂದರೆ ವರ್ತನೆಯಲ್ಲಾದ ಬದಲಾವಣೆ, ಸಾಮಾಜಿಕ

ರಚನೆ, ಸಾಂಸ್ಕೃತಿಕ ಮೌಲ್ಯಗಳಲ್ಲಿ ಕಂಡು ಬರುವ ಏರಿಳಿತಗಳೇ ಆಗಿರುತ್ತವೆ. ಆಧುನಿಕತೆಯಿಂದ ಒಟ್ಟು ಸಮುದಾಯದ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆಯಂತೂ ಸಂಭವಿಸಿರುತ್ತದೆ. ಅದು ಧನಾತ್ಮಕ ಅಥವಾ ಋಣಾತ್ಮಕ ರೀತಿಗಳಲ್ಲಿ ಬದಲಾವಣೆಗಳಾಗಿರಬಹುದು. ಅವುಗಳನ್ನೆಲ್ಲ ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿ ಈ ಅಧ್ಯಯನದಲ್ಲಿ ದಾಖಲಿಸುವ ಪ್ರಯತ್ನವನ್ನು ಮಾಡಿದ್ದೇನೆ. ನಾನು ವಾಸಿಸುವ ಪ್ರದೇಶದಲ್ಲಿ ಈ ಕಮ್ಮಾರರು ಜೀವನ ಸಾಗಿಸುತ್ತಿದ್ದುದನ್ನು ನಾನು ಕಂಡಿದ್ದೇನೆ. ಕಮ್ಮಾರರ ಜೀವನ, ಸಂಸ್ಕೃತಿ, ಕಲೆ, ವೃತ್ತಿ, ಉಪವೃತ್ತಿಯಲ್ಲಿ ಅವರು ಅನುಭವಿಸುತ್ತಿರುವ ಶೋಷಣೆಯ ಬದುಕನ್ನು ತುಂಬಾ ಹತ್ತಿರದಿಂದ ಬಲ್ಲವನಾಗಿದ್ದು ಅವರ ಬದುಕಿನ ಸ್ಥಿತ್ಯಂತರಗಳ ಕುರಿತು ಬರೆಯಬೇಕು, ಸಂಶೋಧಿಸಬೇಕು ಎಂಬ ಹಂಬಲದಿಂದ ಈ ಅಧ್ಯಯನವನ್ನು ಕೈಗೊಂಡಿದ್ದೇನೆ.

ಮಾನವ ಸಂಸ್ಕೃತಿಯನ್ನು ಅದರ ಸಮಗ್ರ ಹಿನ್ನೆಲೆಯಲ್ಲಿ ಅರಿಯುವ ದೃಷ್ಟಿಯಿಂದ ಒಂದೊಂದು ಗುಂಪನ್ನು ಬಿಡಿ ಬಿಡಿಯಾಗಿ ಅಧ್ಯಯನ ಮಾಡುವ ಅಗತ್ಯ ಈಗ ಬಹಳ ಇದೆ. ಮನುಷ್ಯ ಮತ್ತು ಅವನ ಸಂಸ್ಕೃತಿಯನ್ನು ಕುರಿತು ಅಭ್ಯಸಿಸುವ ಎಲ್ಲಾ ಮಾನವಿಕ ವಿಷಯಗಳು (hummanities). ಇಂದು ತಮ್ಮ ತಮ್ಮ ದೃಷ್ಟಿಕೋನದಿಂದ ಬೇರೆ ಬೇರೆ ಸಮಾಜಗಳ ಜೀವನ ಮತ್ತು ಸಂಸ್ಕೃತಿಯ ಅಧ್ಯಯನವನ್ನು ಕೈಗೆತ್ತಿಕೊಂಡು ಅವು ರೂಢಿಸಿಕೊಂಡಿರುವ ಸಾಮಾಜಿಕ ವ್ಯವಸ್ಥೆಗಳನ್ನು, ವೈಶಿಷ್ಟ್ಯಗಳನ್ನು ಗುರುತಿಸುತ್ತಿವೆ. ಬೇರೆ ಬೇರೆ ಸಮುದಾಯಗಳ ನಡುವಿನ ಸಂಬಂಧ, ಸಂಘಟನಾ ವ್ಯವಸ್ಥೆ, ವಿವಿಧ ಬಗೆಯ ಜೀವನ ಕ್ರಮದ ಮಹತ್ವವನ್ನು ತಿಳಿಸಿಕೊಡುವುದರ ಜೊತೆಗೆ, ಈ ಸಮುದಾಯಗಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಸೂಕ್ತವಾದ ಪರಿಹಾರಗಳನ್ನು ಸೂಚಿಸುತ್ತಿವೆ.

ಮೇಲು ನೋಟಕ್ಕೆ ವಿವಿಧ ಸಮುದಾಯಗಳ ಸಂಸ್ಕೃತಿ ಒಟ್ಟಾರೆಯಾಗಿ ಒಂದೇ ಬಗೆಯಾಗಿ ಕಂಡರೂ ಸಾಂಸ್ಕೃತಿಕ ಜೀವನದಲ್ಲಿ ಅವು ವಹಿಸುವ ಪಾತ್ರದ ದೃಷ್ಟಿಯಿಂದ ನೋಡಿದಾಗ ಅವುಗಳ ಕಾರ್ಯ ಚಟುವಟಿಕೆಗಳ ವೈವಿಧ್ಯತೆಯ ಅರಿವು ನಮಗಾಗುತ್ತದೆ. ಈ ಹಿನ್ನೆಲೆಯಲ್ಲಿ ಜನಸಾಮಾನ್ಯರ ಗಮನಕ್ಕೆ ಬಾರದೇ ಉಳಿದಿರುವ ಕಮ್ಮಾರರ ಬಗ್ಗೆ ಅಧ್ಯಯನ ಕೈಗೊಳ್ಳಬೇಕೆಂಬ ಹಂಬಲಕ್ಕೆ ಮಾರ್ಗದರ್ಶನ ನೀಡಿದಂತಹ ಹಾಗೂ ವಿಭಾಗದ ಮುಖ್ಯಸ್ಥರೂ ಆದ ಡಾ. ಗಂಗಾಧರ ದೈವಜ್ಞ ಅವರನ್ನು ಸ್ಮರಿಸದೇ ಇರಲಾರೆ. ಸಮಾಜ ವಿಜ್ಞಾನದ ವಿದ್ಯಾರ್ಥಿಯಾದ ನನಗೆ ಈ ಸಮುದಾಯದ ಬಗ್ಗೆ ಅಧ್ಯಯನ ಮಾಡಬೇಕೆಂಬ ಉತ್ಕಟ ಬಯಕೆಯು ಈ ಮಹಾಪ್ರಬಂಧದ ಸಿದ್ಧತೆಗೆ ಕಾರಣವಾಯಿತು.

ನನ್ನ ಈ ಅಭಿಲಾಷೆಯನ್ನು ಈಡೇರಿಸಿಕೊಳ್ಳಲು ಕನ್ನಡ ವಿಶ್ವವಿದ್ಯಾಲಯವು ಒಂದು ಮಹತ್ತರವಾದಂತಹ ಅವಕಾಶವನ್ನು ನೀಡಿತು. ಈ ವಿದ್ಯಾದೇಗುಲಕ್ಕೆ ಹೃತ್ಪೂರ್ವಕವಾದಂತಹ ಕೃತಜ್ಞತೆಗಳು. ನನ್ನನ್ನು ಹಂಪೆಗೆ ಕರೆದುಕೊಂಡು ಬಂದು ವಿಶ್ವವಿದ್ಯಾಲಯವನ್ನು ಪರಿಚಯಿಸುವುದರ ಮೂಲಕ ನನಗೆ ಸಹಾಯ ಮಾಡಿರುವ ಡಾ. ಕಲವೀರ ಮಾನ್ವಾಚಾರ್ ರವರನ್ನು ನಾನು ಸದಾಕಾಲ ನೆನೆಯುತ್ತೇನೆ. ನನ್ನ ಸಂಶೋಧನಾ ಅವಧಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾಗಿದ್ದ ಡಾ. ಬಿ.ಎ. ವಿವೇಕ್. ರೈ ಡಾ. ಕೆ.ವಿ. ನಾರಾಯಣ, ಡಾ. ಹಿ.ಚಿ. ಬೋರಲಿಂಗಯ್ಯ ಹಾಗೂ ಹಾಲಿ ಕುಲಪತಿಗಳಾಗಿರುವ ಡಾ. ಎ ಮುರುಗೆಪ್ಪ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಮಾನ್ಯ ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿ ಮತ್ತು ಅಧ್ಯಯನಾಂಗದ ನಿರ್ದೇಶಕರಾಗಿರುವ ಡಾ.ವೀರೇಶ ಬಡಿಗೇರ ಅವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನ ಈ ಪ್ರಬಂಧಕ್ಕೆ ಮಾರ್ಗದರ್ಶಕರಾದ ಡಾ. ಗಂಗಾಧರ ದೈವಜ್ಞರವರು ನನ್ನಲ್ಲಿದ್ದ ಪ್ರತಿಭೆಯನ್ನು ಗುರುತಿಸಿ ಅದಕ್ಕೆ ಸಾಣೆ ಹಿಡಿದು ತಿದ್ದಿ ತೀಡಿ, ಅಂದಗೊಳಿಸಿದ ಶ್ರೇಯಸ್ಸು ಅವರದೇ. ನನ್ನ ಮಾರ್ಗದರ್ಶಕರು ನನ್ನ ಸ್ಮರಣೆಯಿಂದ ಎಂದು ಅಳಿಸಿ ಹೋಗದ ವ್ಯಕ್ತಿಗಳಲ್ಲೊಬ್ಬರಾಗಿದ್ದಾರೆ. ಅವರ ಪತ್ನಿ ಹಾಗೂ ಪುಟಾಣಿ ಭಾಗೀರಥಿಗೂ ನನ್ನ ಅಭಿನಂದನೆಗಳು. ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ. ಕೆ.ಎಂ. ಮೈತ್ರಿ, ಡಾ. ಕೇಶವನ್‌ಪ್ರಸಾದ್, ಡಾ. ಚಲುವರಾಜು,

ಡಾ. ಎ.ಎಸ್. ಪ್ರಭಾಕರ, ದೇವಪ್ಪ ಬಡಿಗೇರ, ನಾಯಕ್ ಹಾಗೂ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಸಹ ಪ್ರಾಧ್ಯಾಪಕರಾದ ಡಾ. ವಾಸುದೇವ ಬಡಿಗೇರ ಅವರಿಗೂ, ಅಂದವಾಗಿ ವಿನ್ಯಾಸ ಗೊಳಿಸಿದ ಶ್ರೀ.ಶಿವಕುಮಾರ್ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನ ವಿದ್ಯಾಭ್ಯಾಸಕ್ಕೆ ಸದಾ ಪ್ರೋತ್ಸಾಹ ಕೊಡುತ್ತಾ ಬಂದಿರುವ ತಂದೆ ಶ್ರೀ ಸೀತಾರಾಮ ಆಚಾರ್ಯ ಮತ್ತು ಶ್ರೀಮತಿ ಇಂದಿರಾ ಹಾಗೂ ನನ್ನ ಪತ್ನಿಯಾದ ಶ್ರೀಮತಿ ಸುಲೋಚನ, ಪುತ್ರಿಯರಾದ ಕಮಾರಿ ಸ್ಮಿತಾ ಮತ್ತು ಕುಮಾರಿ ಸ್ಪೂರ್ತಿ, ಹಾಗೂ ನನ್ನ ಪ್ರೀತಿಯ ತಂಗಿ ಶ್ರೀಮತಿ ಚಿತ್ರ, ಭಾವ ದಿನೇಶ್ ಮತ್ತು ತಮ್ಮನಾದ ಉದಯಕುಮಾರ್, ನಾದಿನಿ ರೂಪ ಅವರನ್ನು ಸದಾ ನೆನೆಯುತ್ತೇನೆ.

ಈ ಅಧ್ಯಯನದ ಸಂದರ್ಭದಲ್ಲಿ ನನ್ನನ್ನು ಸದಾ ಪ್ರೋತ್ಸಾಹಿಸುತ್ತಾ ಎಲ್ಲ ರೀತಿಯ ಸಹಕಾರವನ್ನು ನೀಡಿದ ಕಾರ್ಕಳ ಶ್ರೀ ಭುವನೇಂದ್ರ ಕಾಲೇಜಿನ ಗೌರವಾನ್ವಿತ ಪ್ರಾಚಾರ್ರರಾದ ಪ್ರೊ. ಪದ್ಮನಾಭ ಗೌಡ ಅವರನ್ನು ಮರೆಯಲು ಸಾಧ್ಯವೇ ಇಲ್ಲ. ಮತ್ತು ಆಡಳಿತ ಮಂಡಳಿಯ ಎಲ್ಲಾ ಸದಸ್ಯರನ್ನು ಹಾಗು ಹಿರಿಯ ಮತ್ತು ಕಿರಿಯ ಉಪನ್ಯಾಸಕರನ್ನು, ಗ್ರಂಥಪಾಲಕರನ್ನು ಕಾಲೇಜಿನ ಎಲ್ಲಾ ಸಿಬ್ಬಂದಿ ವರ್ಗವನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ಈ ಅಧ್ಯಯನಕ್ಕೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯ ಮಾಡಿದವರಿಗೆ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿಯನ್ನು ನೀಡಿದ ಎಲ್ಲ ಮಾಹಿತಿದಾರರಿಗೆ ವಂದನೆಗಳು

**ಶುಭಕರಾಚಾರಿ**
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ

ದಿನಾಂಕ: ೨೮.೦೮.೨೦೧೦
ಸ್ಥಳ: ವಿದ್ಯಾರಣ್ಯ

## ಪರಿವಿಡಿ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

## ೧.೧. ಪ್ರಸ್ತಾವನೆ:

ಕ್ರಿ. ಪೂ. ಯುಗದಿಂದ ಇಡೀ ವಿಶ್ವಕ್ಕೆ ಉತ್ಪಾದನಾ ವ್ಯವಸ್ಥೆಗೆ ತಮ್ಮದೇ ಆದ ಕೊಡುಗೆಗಳನ್ನು ಕಮ್ಮಾರರ ಸಮುದಾಯ ನೀಡುತ್ತಲೇ ಬಂದಿದೆ. ಮೂಲ ಮಾನವ ಕೃಷಿಯ ಮೂಲಕ ಆಹಾರ ಉತ್ಪಾದನೆ ಪ್ರಾರಂಭಿಸಿದ ಮೇಲೆ ಅವನ ಉತ್ಪಾದನೆಗೆ ಬೇಕಾಗುವಂತಹ ಅನೇಕ ಕೃಷಿ ಉಪಕರಣಗಳನ್ನು ಸೃಷ್ಟಿಸುವ ಮೂಲಕ ತಮ್ಮ ಅಸ್ಥಿತ್ವವನ್ನು ಕಮ್ಮಾರರು ಗುರುತಿಸಿಕೊಳ್ಳತೊಡಗಿದರು. ಪ್ರಕೃತಿಯ ಕೊಡುಗೆಯಾದ ಬೆಂಕಿಯನ್ನು ಬಳಸಿಕೊಂಡು ಸಾವಿರಾರು ವರ್ಷಗಳ ವರೆಗೆ ಅನೇಕ ನಿಕ್ಷೇಪಗಳನ್ನು ಪತ್ತೆ ಹಚ್ಚಿ ಅದನ್ನು ಸಂಸ್ಕರಿಸುವಲ್ಲಿ ಯಶಸ್ವಿಯಾದರು. ಕಮ್ಮಾರರು ಕಬ್ಬಿಣದ ಶೋಧನೆ ಮತ್ತು ಸಂಸ್ಕರಣೆಯನ್ನು ಕಂಡುಕೊಂಡ ಮೇಲೆ ಉತ್ಪಾದನಾ ವ್ಯವಸ್ಥೆ ಮತ್ತು ಕಮ್ಮಾರರ ಘನತೆ ಗೌರವಗಳು ಅಭಿವೃದ್ಧಿ ಹೊಂದತೊಡಗಿದವು.

ಕಮ್ಮಾರಿಕೆಯಂತಹ ವೃತ್ತಿಯನ್ನು ಅನುಸರಿಸುತ್ತಿದ್ದ ಸಮುದಾಯ ವೇದಕಾಲಕ್ಕಿಂತ ಪೂರ್ವದಲ್ಲಿಯೇ ಇತ್ತು. ಇವರು ವೇದಕಾಲಕ್ಕಿಂತಲೂ ಪೂರ್ವದಲ್ಲಿಯೇ, ಬೇಟೆಯಾಡಲು, ಆತ್ಮರಕ್ಷಣೆ ಮಾಡಿಕೊಳ್ಳಲು ಬೇಕಾದ ಅನೇಕ ಆಯುಧಗಳನ್ನು ಸಿದ್ಧಪಡಿಸಿ ಪೂರೈಸುತ್ತಿದ್ದರು. ಬೇಟೆ ಸಂಸ್ಕೃತಿಯ ಎರಡನೆಯ ಹಂತದಲ್ಲಿ ದುಷ್ಟ ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಆಯುಧಗಳನ್ನು ಸಿದ್ಧಪಡಿಸುತ್ತಿದ್ದರು. ಮೂಲ ಮಾನವ, ಬೇಟೆಯಿಂದ ಕೃಷಿಯನ್ನು ಕಂಡುಕೊಂಡ ಮೇಲೆ ಕೃಷಿಗೆ ಬೇಕಾದ ಅನೇಕ ಉಪಯುಕ್ತ ವಸ್ತುಗಳನ್ನು ಸೃಷ್ಟಿಸಿಕೊಡುವಲ್ಲಿ ಕಮ್ಮಾರರು ನಿರತರಾದರು ಎಂದು ಹೇಳಬಹುದು. ದಕ್ಷಿಣ ಭಾರತದಲ್ಲಿ ನೆಲೆಸಿರುವ ಕಮ್ಮಾರರು ದ್ರಾವಿಡ ಸಂಸ್ಕೃತಿಯಲ್ಲೇ ಗುರುತಿಸಿಕೊಂಡವರು. ಬೆಂಕಿಯ ಮೂಲಕ ಕಬ್ಬಿಣ ಕರಗಿಸಿಕೊಂಡು ಅದರಿಂದ ಅನೇಕ ವಸ್ತುಗಳನ್ನು ತಯಾರಿಸಿಕೊಳ್ಳಲು ಸಾಧ್ಯ ಎಂಬುದನ್ನರಿತ ಮಾನವ ಆ ಬೆಂಕಿಯನ್ನು "ಕಾಳಿ" ಎಂದು ಆರಾಧಿಸುತ್ತಿರುವುದನ್ನು ಕಾಣುತ್ತೇವೆ. ಉಡುಪಿ, ಮಂಗಳೂರು ಚಾಮರಾಜನಗರ ಜಿಲ್ಲೆ ಕೊಳ್ಳೆಗಾಲ ತಾಲೂಕಿನ ಕಮ್ಮಾರ ಸಮುದಾಯದವರಲ್ಲದೇ ಇಡೀ ಕರ್ನಾಟಕದ ಕಮ್ಮಾರರು ಬೆಂಕಿಯನ್ನು

ಮತ್ತು ತಮ್ಮ ಕುಲುಮೆಯನ್ನು 'ಕಾಳಿ' ಎಂದು ಆರಾಧಿಸುವುದು ಕಂಡು ಬರುತ್ತದೆ. ಕಮ್ಮಾರರು ಮಾತೃದೇವತಾ ಆರಾಧಕರು. ಪ್ರತಿನಿತ್ಯ ತಮ್ಮ ವೃತ್ತಿಯನ್ನು ಪ್ರಾರಂಭಿಸುವುದಕ್ಕಿಂತ ಮೊದಲು ಕುಲುಮೆಯನ್ನು ಪೂಜಿಸಿ ನಂತರ ತಮ್ಮ ವೃತ್ತಿಯನ್ನು ಪ್ರಾರಂಭಿಸುವುದು ಕಂಡು ಬರುತ್ತದೆ.

ಕೃಷಿ ಉತ್ಪಾದನೆ ಹೆಚ್ಚಾಗುತ್ತಾ ನಡೆದಂತೆಲ್ಲಾ ಕಮ್ಮಾರರ ವೃತ್ತಿಗಳು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯತೊಡಗಿದವು. ರಾಜ-ಮಹಾರಾಜರಿಗೆ ಯುದ್ಧಕ್ಕೆ ಬೇಕಾಗುವ ಈಟಿ, ಬರ್ಚಿ, ಖಡ್ಗ, ಡಾಲು, ಕೋವಿ ಮುಂತಾದ ಆಯುಧಗಳನ್ನು ಈ ಕಮ್ಮಾರರು ಸಿದ್ಧಪಡಿಸಿ ಕೊಡತೊಡಗಿದರು. ಇದರಿಂದ ಕಮ್ಮಾರಿಕೆ ವೃತ್ತಿ ಒಂದು ಕಾಲಕ್ಕೆ ಅತ್ಯಂತ ಶ್ರೇಷ್ಠವಾದ ವೃತ್ತಿಯಾಗಿ ಹೊರಹೊಮ್ಮಿತು. ಈ ಎಲ್ಲಾ ಕಾರಣಗಳಿಂದ ಕಮ್ಮಾರರು ನಾಡಿನ ಜನರ ಅವಶ್ಯಕತೆಗಳನ್ನು ಪೂರೈಸುವಲ್ಲಿ ಪ್ರಮುಖ ಪಾತ್ರ ವಹಿಸಿದವರಾಗಿದ್ದರು. ಶಿಲ್ಪಿಗಳಿಗೆ ಶಿಲೆಗಳನ್ನು ಕೆತ್ತಲು ಕಬ್ಬಿಣದ ಚಿಕ್ಕ ಚಿಕ್ಕ ಆಯುಧಗಳನ್ನು ಇವರೇ ಪೂರೈಸುತ್ತಿದ್ದರು. ಕಮ್ಮಾರರ ಸಮುದಾಯ ಎಲೆಯ ಮರೆಯ ಕಾಯಿಯಂತೆ ಇದ್ದುಕೊಂಡರೂ ಅವರು ಈ ನಾಡಿಗೆ ನೀಡಿದ ಕೊಡುಗೆ ಅಪಾರವಾದಂತದ್ದು. ಇಂತಹ ಕಮ್ಮಾರರ ಸಮುದಾಯದ ಅಧ್ಯಯನ ಕರ್ನಾಟಕದಲ್ಲಿ ಅಲ್ಪ ಪ್ರಮಾಣದಲ್ಲಿ ನಡೆದಿದೆ.

(ಆದಿವಾಸಿ ಸಮುದಾಯವಾದ ಕಮ್ಮಾರರು ಇಂದು ಆಧುನಿಕತೆ ನಗರೀಕರಣ ಜಾಗತೀಕರಣ ವೈಜ್ಞಾನೀಕರಣಗಳ ನಡುವೆ ತಮ್ಮ ಮೂಲ ವೃತ್ತಿಗಳ ಮೂಲಕವೇ ಬದುಕುತ್ತಿವೆ. ವೈಜ್ಞಾನೀಕರಣದ ಪ್ರಭಾವದಿಂದ ಕಮ್ಮಾರರ ವೃತ್ತಿಗಳು ನಿರ್ಲಕ್ಷ್ಯಕ್ಕೊಳಪಟ್ಟಿವೆ. ಕೃಷಿಗೆ ಬೇಕಾಗಿರುವ ಉಪಕರಣಗಳನ್ನು ಕಮ್ಮಾರರು ಮಾತ್ರ ಸಿದ್ಧಪಡಿಸಬಲ್ಲರು ಎಂಬ ಮಾತು ಇಂದು ಮಾಯವಾಗಿದೆ. ಅನೇಕ ಕಾರ್ಖಾನೆಗಳು ಇಂದು ಕೃಷಿ ಉಪಕರಣಗಳನ್ನು ಸಿದ್ಧಪಡಿಸಿ ಮಾರುತ್ತಿವೆ. ಕಮ್ಮಾರರು ಸಿದ್ಧಪಡಿಸುವ ಕೃಷಿ ಉಪಕರಣಗಳಿಗಿಂತ ಉತ್ತಮವಾದ ಉಪಕರಣಗಳು ಮಾರುಕಟ್ಟೆಗಳಲ್ಲಿ ದೊರೆಯುತ್ತಿರುವುದರಿಂದ ಕೃಷಿಕರು ಕಮ್ಮಾರರನ್ನು ಬಿಟ್ಟು ನೇರವಾಗಿ ನಗರ ಪ್ರದೇಶಗಳಿಂದ ಕೃಷಿ ಉಪಕರಣಗಳನ್ನು ಖರೀದಿಸುತ್ತಿದ್ದಾರೆ. ವೈಜ್ಞಾನೀಕರಣದ ಮುಂದೆ ಕಮ್ಮಾರರ ಪಾರಂಪರಿಕ ವೃತ್ತಿಗಳು ನಿಲ್ಲಲಾರದೆ ಮಾಯವಾಗುತ್ತಿವೆ. ಕಮ್ಮಾರರ ಅನೇಕ ಕುಟುಂಬಗಳು ಹಣೆಗೆ ಕೈ ಹಚ್ಚಿಕೊಂಡು ತುತ್ತು ಕೂಳಿಗೂ ಗತಿ ಇಲ್ಲದಂತಾಗಿವೆ. ಕೆಲ ಕಮ್ಮಾರರ ಕುಟುಂಬಗಳು ತಮ್ಮ ವೃತ್ತಿಯಲ್ಲಿ ಅಲ್ಪ ಪ್ರಮಾಣದ ಆಧುನಿಕತೆಯನ್ನು ಬಳಸಿಕೊಂಡು ಸಾಗುತ್ತಿವೆ. ಪ್ರತಿ ದಿನವು ಬೆಳಿಗ್ಗೆ ೫ ಗಂಟೆಯಿಂದ ಸಾಯಂಕಾಲ ೭-೮ ಗಂಟೆಯವರೆಗೆ ಬೆಂಕಿಯ ಮುಂದೆ ಕುಳಿತು ಸದಾ ಬೆವರು ಸುರಿಸಿ ದುಡಿಯುತ್ತಿದ್ದ ಕಮ್ಮಾರನ ಬದುಕು ಇಂದು ಬರಡಾಗುತ್ತಿದೆ. ಅಹಾರ ಉತ್ಪಾದನೆ, ಮಾನವ ರಕ್ಷಣೆಗೆ ಬೇಕಾದ, ಕೃಷಿ ಉಪಕರಣ ಹಾಗೂ ಆಯುಧಗಳನ್ನು ಸಿದ್ಧಪಡಿಸಿ ಕೊಡುತ್ತಿದ್ದ ಕಮ್ಮಾರರು ಇಂದು ತಮ್ಮನ್ನು ತಾವು ರಕ್ಷಿಸಿಕೊಳ್ಳಲಾಗದ ಸ್ಥಿತಿಯಲ್ಲಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರತಿದಿನವೂ ಕಮ್ಮಾರರ ಮನೆಯ ಮುಂದೆ ಕೃಷಿಕರು ಸಾಲು ಸಾಲಾಗಿ ಕುಳಿತು ತಮ್ಮ ಉಪಕರಣಗಳನ್ನು ಸಿದ್ಧಪಡಿಕೊಳ್ಳುತ್ತಿದ್ದರು. ಇಂದು ಕಮ್ಮಾರರು ತಮ್ಮ ಮನೆಯ ಕುಲುಮೆಯ ಮುಂದೆ ಹಣೆಗೆ ಕೈ ಹಚ್ಚಿಕೊಂಡು ಕುಳಿತು

ನನ್ನ ಕಡೆ ಯಾರಾದರೂ ಬರುತ್ತಾರೆಯೇ? ಎಂದು ಕಾದು ನೋಡುತ್ತಿರುವ ಪರಿಸ್ಥಿತಿ ಎದುರಾಗಿದೆ. ಇಂತಹ ಶೋಚನೀಯ ಸ್ಥಿತಿಯಲ್ಲಿರುವ ಕಮ್ಮಾರರ ಸಮುದಾಯದ ಅಧ್ಯಯನ ಮಾಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಕರ್ನಾಟಕದಲ್ಲಿ ವಾಸಿಸುತ್ತಿರುವ ಎಲ್ಲಾ ಕಮ್ಮಾರರ ಬದುಕು ಅತಂತ್ರ ಸ್ಥಿತಿಯಲ್ಲಿದೆ ಎಂದು ಹೇಳಬಹುದು. ಕರ್ನಾಟಕ ಸರ್ಕಾರ ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನಲ್ಲಿ ವಾಸಿಸುತ್ತಿರುವ ಕಮ್ಮಾರರನ್ನು ಮಾತ್ರ ಪರಿಶಿಷ್ಟ ಪಂಗಡಕ್ಕೆ ಸೇರಿಸಿದೆ. ಆದರೆ ಈ ಪ್ರದೇಶಗಳಲ್ಲಿ ವಾಸಿಸುತ್ತಿರುವ ಅನೇಕ ಕಮ್ಮಾರರಿಗೆ ಪರಿಶಿಷ್ಟ ಪಂಗಡದ ಸೌಲಭ್ಯಗಳು ದೊರೆತಿಲ್ಲ ಎಂಬುವುದನ್ನು ನಾನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಗಮನಿಸಿದ್ದೇನೆ.

ಸಾಮಾನ್ಯವಾಗಿ ಕಮ್ಮಾರಿಕೆ ವೃತ್ತಿಯನ್ನು ಮಾಡುತ್ತಿರುವವರೆಲ್ಲ ವಿಶ್ವಕರ್ಮರೇ ಆಗಿದ್ದಾರೆ. ಕಮ್ಮಾರಿಕೆ ವೃತ್ತಿ ವಿಶ್ವಕರ್ಮ ಸಮುದಾಯದ ಮೂಲ ವೃತ್ತಿಯಾಗಿದೆ. ಒಂದು ಕಾಲಕ್ಕೆ ಕಮ್ಮಾರಿಕೆ ವೃತ್ತಿ ಕೈಗೊಂಡವರನ್ನು ವಿಶ್ವಕರ್ಮರ ಇತರೆ ಗುಂಪಿನವರು ಅವರನ್ನು ಕೀಳಾಗಿ ಕಾಣುತ್ತಿದ್ದ ಘಟನೆಗಳನ್ನು ಮಾಹಿತಿದಾರರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವ್ಯಕ್ತಪಡಿಸಿದರು. ಮಂಗಳೂರು ಮತ್ತು ಉಡುಪಿ ಜಿಲ್ಲೆಯಲ್ಲಿ ವಾಸಿಸುತ್ತಿದ್ದ ವಿಶ್ವಕರ್ಮರು ಸಾಮಾನ್ಯವಾಗಿ ವೈದಿಕ ಧರ್ಮದ ಜೊತೆಗೆ ಗುರುತಿಸಿಕೊಳ್ಳುತ್ತಿರುವುದು ಕಂಡು ಬರುತ್ತದೆ. ಕಮ್ಮಾರರು ವಿಶ್ವಕರ್ಮರೆ ಆಗಿರುವುದರಿಂದ ಅವರನ್ನು ವೈದಿಕ ಧರ್ಮದತ್ತ ಸೆಳೆಯುತ್ತಿದ್ದಾರೆ. ಇದರಿಂದ ಕಮ್ಮಾರರು ಸರ್ಕಾರ ಪರಿಶಿಷ್ಟ ಪಂಗಡಕ್ಕೆ ನೀಡುತ್ತಿರುವ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿಲ್ಲ. ನಾವು ಈ ಸೌಲಭ್ಯಗಳನ್ನು ಪಡೆದುಕೊಂಡರೆ ವಿಶ್ವಕರ್ಮ ಸಮುದಾಯದಿಂದ ದೂರ ಉಳಿಯಬೇಕಾಗುತ್ತಿದೆ. ನಮ್ಮ ಸಾಮಾಜಿಕ ಸ್ಥಾನ ಮಾನಗಳಿಗೆ ದಕ್ಕೆ ಉಂಟಾಗುತ್ತದೆ ಎಂಬ ಭಯ ಆತಂಕ ಇಲ್ಲಿಯ ಕಮ್ಮಾರರಲ್ಲಿದೆ. ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಅನೇಕ ಕಮ್ಮಾರರ ಕುಟುಂಬಗಳು ಸರಕಾರದ ಸೌಲಭ್ಯಗಳನ್ನು ಪಡೆದುಕೊಂಡು ಆಧುನಿಕ ಜಗತ್ತಿನಲ್ಲಿ ಬದುಕಲು ಪ್ರಯತ್ನಿಸುತ್ತಿರುವುದನ್ನು ಕಾಣುತ್ತೇವೆ.

ಕಮ್ಮಾರರು ಒಂದು ಕಾಲಕ್ಕೆ ಅಲೆಮಾರಿಗಳಾಗಿ ಜೀವನ ಸಾಗಿಸುತ್ತಿದ್ದರು. ಇತ್ತಿತ್ತಲಾಗಿ ಕೆಲ ಕುಟುಂಬಗಳು ಅಲೆಮಾರಿತನದಿಂದ ಮುಕ್ತಿ ಪಡೆದುಕೊಂಡಿವೆ. ಆಧುನಿಕತೆಯ ಯಂತ್ರೋಪಕರಣಗಳು ಅಸ್ಥಿತ್ವಕ್ಕೆ ಬಂದ ಮೇಲೆ ನಿರಂತರವಾಗಿ ದುಡಿಯುತ್ತಿರುವ ಕಮ್ಮಾರರ ಕೈಗಳ ಕೆಲಸಗಳನ್ನು ಕಿತ್ತುಕೊಂಡಿದ್ದರೂ ಪಾರಂಪರಿಕ ಜ್ಞಾನ ಮತ್ತು ಸಂಸ್ಕೃತಿಯಲ್ಲಿ ಹೊಸ ರೂಪ ಪಡೆದುಕೊಳ್ಳಲು ಅನುಕೂಲ ಮಾಡಿಕೊಟ್ಟಿದೆ. ಆಧುನಿಕ ಜಗತ್ತಿನ ಜೊತೆಗೆ ಮುಖಾಮುಖಿಯಾಗುತ್ತ ಅವರು ತಮ್ಮ ಬದುಕಿನಲ್ಲಿ ಸಾಮಾಜಿಕವಾಗಿ ಶೈಕ್ಷಣಿವಾಗಿ ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಹೀಗೆ ಸ್ಥಿತ್ಯಂತರಗಳನ್ನು ಕಾಣುತ್ತಿದ್ದಾರೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ವರ್ತಮಾನಕಾಲದಲ್ಲಿ ಕಮ್ಮಾರರ ಸ್ಥಿತಿಗತಿಗಳು ಹೇಗಿವೆ? ಆಧುನಿಕತೆ ಮತ್ತು ನಿತ್ಯ ಪರಿವರ್ತನಾಶಿಲವಾದ ಪರಿಸರದಲ್ಲಿ ಬದುಕುತ್ತಿರುವ ಈ ಸಮುದಾಯ ವರ್ತಮಾನದಲ್ಲಿ ತನ್ನ ಅಸ್ಥಿತ್ವ ಕಂಡುಕೊಳ್ಳಲು ಯಾವ ಯಾವ ಸವಾಲುಗಳನ್ನು ಎದುರಿಸುತ್ತಿದೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ಹಾಗು ಮಂಗಳೂರಿನಲ್ಲಿ ವಾಸಿಸುತ್ತಿರುವ ಅನೇಕ ಕಮ್ಮಾರರ ಕುಟುಂಬಗಳು ತಮಿಳುನಾಡು ಮತ್ತು ಕೇರಳದಿಂದ ವಲಸೆ ಬಂದಿರುವುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

ಕೆಲ ಕಮ್ಮಾರರ ಕುಟುಂಬಗಳು ಹಂತ ಹಂತವಾಗಿ ತಮ್ಮ ಮೂಲ ವೃತ್ತಿಯನ್ನು ಕೈ ಬಿಡುತ್ತಿವೆ ಮತ್ತೆ ಕೆಲವರು ತಮ್ಮ ಮೂಲ ವೃತ್ತಿಯಲ್ಲಿ ಆಧುನಿಕತೆಯನ್ನು ಸೇರಿಸಿ ಬದುಕುತ್ತಿವೆ. ಹೀಗಾಗಿ ಕಮ್ಮಾರರ ಕುಟುಂಬಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಸಂಪೂರ್ಣವಾಗಿ ಬದಲಾವಣೆ ಹೊಂದಿದ್ದಾರೆ ಎಂದು ಹೇಳುವುದಕ್ಕಿಂತ ಬದಲಾವಣೆಯ ಹಂತದಲ್ಲಿದ್ದಾರೆ ಎಂದು ಹೇಳಬಹುದು. ಕಮ್ಮಾರರ ಜೀವನ ಶೈಲಿ, ಸಂಸ್ಕೃತಿಯ ಮೇಲೆ ಅನೇಕ ಬದಲಾವಣೆಗಳಾಗಿವೆ. ಯುವ ಪೀಳಿಗೆ ತನ್ನ ಮೂಲ ವೃತ್ತಿಯಿಂದ ಹೇಗೆ ಬಹಳ ದೂರ ಸರಿಯುತ್ತಿದೆ ಎಂಬುದನ್ನು ಈ ಅಧ್ಯಯನದಲ್ಲಿ ವ್ಯಕ್ತಪಡಿಸಲಾಗಿದೆ.

ಸಾಮಾನ್ಯವಾಗಿ ಉಡುಪಿ, ಮಂಗಳೂರು ಮತ್ತು ಕೊಳ್ಳೆಗಾಲ ತಾಲೂಕಿನ ಕಮ್ಮಾರರ ಎಲ್ಲಾ ಕುಟುಂಬಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಸ್ಥಿತ್ಯಂತರಗೊಳ್ಳುತ್ತಿರುವ ಈ ಸಮುದಾಯವನ್ನು ಸೂಕ್ಷ್ಮವಾಗಿ ಗಮನಿಸಿ ಸಮುದಾಯದ ಹಿರಿ-ಕಿರಿಯರ ಜೊತೆಗೆ ಸಂದರ್ಶನ ಕೈಗೊಂಡು ಅಧ್ಯಯನ ಕೈಗೊಳ್ಳಲಾಗಿದೆ.

**೧.೨ ಅಧ್ಯಯನದ ಉದ್ದೇಶ:**

ಒಂದು ಕಾಲಘಟ್ಟದಲ್ಲಿ ಸಮಾಜದ ಎಲ್ಲ ವರ್ಗಕ್ಕೂ ಬೇಕಾಗಿದ್ದ ಕಮ್ಮಾರರ ಸಮುದಾಯವನ್ನು ಇಂದು ಕೇಳುವವರೆ ಇಲ್ಲದಂತಾಗಿದೆ. ಆಧುನಿಕತೆಯ ಸಂದರ್ಭದಲ್ಲಿ ಅವರ ಮೂಲವೃತ್ತಿಗಳು ನಿರುಪಯುಕ್ತವಾದವುಗಳು ಎಂದು ಸಮಾಜ ಪರಿಗಣಿಸುತ್ತಿದೆ. ಕೆಲ ಬೆರಳೆಣಿಕೆಯಷ್ಟು ಕಮ್ಮಾರರ ಕುಟುಂಬಗಳು ಆಧುನಿಕತೆಯ ತಂತ್ರಜ್ಞಾನವನ್ನು ರೂಢಿಸಿಕೊಂಡು ಬದುಕನ್ನು ಸಾಗಿಸುತ್ತಿದ್ದಾರೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿಯ ಸ್ಥಿತಿಗತಿಗಳು ಬಹಳ ಶೋಚನೀಯ ಸ್ಥಿತಿಯಲ್ಲಿವೆ. ಕಮ್ಮಾರರ ಯುವ ಪೀಳಿಗೆ ಕಮ್ಮಾರಿಕೆ ವೃತ್ತಿಯನ್ನು ಬಿಟ್ಟು ಇತರೆ ವೃತ್ತಿಗಳನ್ನು ಅನುಸರಿಸುತ್ತಿರುವುದು ಕಂಡು ಬರುತ್ತಿದೆ. ಇಂದು ಕಮ್ಮಾರರು ಅನಿವಾರ್ಯವಾಗಿ ಕಾಲಮಾನಕ್ಕೆ ತಕ್ಕಂತೆ ಬದುಕನ್ನು ರೂಪಿಸಿಕೊಳ್ಳುವುದು ಅನಿವಾರ್ಯವಾಗಿದೆ ಮತ್ತು ಈ ಸಮುದಾಯದ ಸಾಮಾಜಿಕ, ಆರ್ಥಿಕ. ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಧಾರ್ಮಿಕ ಬದುಕಿನಲ್ಲಿ ಅನೇಕ ಸ್ಥಿತ್ಯಂತರಗಳಾಗಿವೆ. ಈ ಎಲ್ಲ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಈ ಪ್ರಬಂಧದಲ್ಲಿ ಅಧ್ಯಯಯನ ಕೈಕೊಳ್ಳಲಾಗಿದೆ.

ಕಮ್ಮಾರರು ಒಂದು ಕಾಲಕ್ಕೆ ತಮ್ಮ ವೃತ್ತಿಯ ಮೂಲಕ ಎಲ್ಲ ಸಮುದಾಯಗಳ ಜನಮನವನ್ನು ಸೆಳೆದವರಾಗಿದ್ದರು.ಆದರೆ ಇಂದು ಅವರ ಬದುಕಿನಲ್ಲಿ ಉಂಟಾದ ಅಸ್ಥಿರತೆಯ ಬಗ್ಗೆ ಯಾರೂ ವಿಚಾರಿಸುತ್ತಿಲ್ಲ. ಈ ಅಧ್ಯಯನದ ಮೂಲಕ ಅವರ ಬದುಕಿನಲ್ಲಿ ಉಂಟಾದ ತುಡಿತ–ಮಿಡಿತ ಅವರ ಸಂವೇದನೆಗಳನ್ನು ಅರ್ಥ ಮಾಡಿಕೊಂಡು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ಉಡುಪಿ, ಮಂಗಳೂರು ಮತ್ತು ಕೊಳ್ಳೆಗಾಲ ತಾಲೂಕಿನ ಕಮ್ಮಾರರನ್ನು ಕುರಿತು ಸಮಗ್ರವಾದ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಆಧುನಿಕ ಯಂತ್ರಗಳ ಹಾವಳಿಯಲ್ಲಿ ಕಮ್ಮಾರಿಕೆ ವೃತ್ತಿಯನ್ನು ಹಂತ ಹಂತವಾಗಿ ಕಳೆದುಕೊಳ್ಳುತ್ತಿರುವ ಈ ಸಮುದಾಯ ಆರ್ಥಿಕವಾಗಿ ಕುಗ್ಗುತ್ತ ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಿದೆ. ಒಂದು ಹಂತದಲ್ಲಿ ಉತ್ಪಾದನೆ ಮತ್ತು ಆರ್ಥಿಕತೆಯಲ್ಲಿ ಅತ್ಯಂತ ಪ್ರಭಲವಾಗಿದ್ದ ಈ ಸಮುದಾಯ ಇಂದು ವೈಜ್ಞಾನೀಕರಣದ ಬರಾಟೆಯಲ್ಲಿ ಎಲ್ಲವನ್ನು ಕಳೆದುಕೊಳ್ಳುತ್ತಿದೆ. ಆರ್ಥಿಕವಾಗಿ ಕ್ಷೀಣಿಸುತ್ತಾ ಹೋದಂತೆ ಮತ್ತು ಆಧುನಿಕತೆಗೆ ತಕ್ಕೆ ಬಿದ್ದಂತೆ ಅವರ ಪಾರಂಪರಿಕ ಸಂಸ್ಕೃತಿ, ಆಚಾರ–ವಿಚಾರ, ಪಾರಂಪರಿಕ ಜ್ಞಾನ, ವೃತ್ತಿ, ಉಡುಗೆ–ತೊಡುಗೆ, ಆಚರಣೆ, ಆರಾಧನೆ ಮುಂತಾದವುಗಳನ್ನು ಸಮಗ್ರವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ ಮತ್ತು ಅವುಗಳಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ವಿವರಿಸಲಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ:**

ಕರ್ನಾಟಕದ ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನಲ್ಲಿಯ ಪ್ರತಿಯೊಂದು ಗ್ರಾಮದಲ್ಲಿ ಸಾಮಾನ್ಯವಾಗಿ ಕಂಡುಬರುವ ಕಮ್ಮಾರರ ಕುಟುಂಬಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ನಾನು ಕಮ್ಮಾರರ ಬದುಕಿನ ಸ್ಥಿತ್ಯಂತರಗಳು ಈ ಅಧ್ಯಯನಕ್ಕಾಗಿ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಕುಂದಲೂರು, ಶಿರೂರು, ಕಮಲಶ್ಯೆಲಿ ಬಸರೂರು, ಬೈಂದೂರು, ಪಡುಬಿದ್ರೆ, ಹಬ್ರಿ, ಸಾಣೂರು, ನಾಯಕವಾಡಿ, ತಾಸಿ, ಬೈಂದೂರು, ಪಡುವರಿ, ಹೆಮ್ಮಂಜೆ, ನಡಾ, ಗ್ರಡ್ಡಯ್ಯನ ಗಾದಿ, ಶಿವನಾಗರ, ಸೇನಾಪುರ, ಕಂದಲೂರು, ಬಸರೂರು, ನೆಲ್ಲಿಕಟ್ಟೆ, ಚಿತ್ರಮಕ್ಕಿ, ಶಂಕರ ನಾರಾಯಣ, ಆನೆಸಾಲಿ, ಹಲಡಿ, ಬೆನಗೇರೆ, ಗುಜ್ಜಾಡಿ, ನಾಡುಬೆಟ್ಟ, ನಾಚಿಯ್ಯವಾಡಿ, ವಡೇರಹೊಬ್ಬಿ, ಸಲ್ವಾಡಿ, ಹುಣುಸೇಮಕ್ಕಿ, ಬಿಡಲಕಟ್ಟೆ, ನೆರಂಬಳ್ಳಿ, ಕೋನಿ, ಕೋಟೇಶ್ವರ, ನಾಗೂರು, ಕಿರು ಮಂಜೇಶ್ವರ, ಹೋಲಿಕ್ರಾಸ್, ತ್ರಾಸಿ, ಮರವಂತ, ಸಚಿತಕಟ್ಟೆ, ಆಲೂರು, ಪಡುಕೋಣೆ, ಬಡಕೇರಿ, ಕುಂದ ಬರನಾಡಿ, ಹಕ್ಲಾಡಿ, ಹಲ್ಲೂರು, ನೀರ್ಕುರೆ, ಗಂಗೆಬಯಲು, ಆರ್ತೆ, ಗ್ರಾಸಿ, ಗಿಲ್ಲೂರು, ಬಿಜಾಡಿ, ಕೋಟೇಶ್ವರ, ಗೋಪಾಡಿ, ಗಿಕ್ಕಟ್ಟೆ, ಸಂತೆಕಟ್ಟೆ, ಗುಡ್ಡಯಂಗಡಿ, ಬಿದ್ಕಲ್ ಕಟ್ಟೆ, ನೇರಂಬಳ್ಳಿ, ಕೋಣೆ, ಗೋಪಾಡಿ, ಈ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ಕಮ್ಮಾರರ ೭೭ ಕುಟುಂಬಗಳು ಕಂಡುಬಂದಿವೆ.

ಉಡುಪಿ ತಾಲೂಕಿನ ಮಾರಪಲ್ಲಿ, ಯರಮಲ, ಬಡಾ, ಹುಳುವಳ್ಳಿ, ಕಜೆಗಿ, ಕಳ್ತೂರು, ಸಂತೆಕಟ್ಟೆ, ಬಾರ್ಕೂರು, ಅದಮಾರು, ಹೆಜಮಾಡಿ, ಮಾರ್ಪಳ್ಳು, ಮತ್ತು ಎರ್ಮಾಳು ಈ ಊರುಗಳಲ್ಲಿ ಒಟ್ಟು ೧೫ ಕುಟುಂಬಗಳಿವೆ.

ಕಾರ್ಕಳ ತಾಲೂಕಿನ ಮುದಾರ, ನಲ್ಲೂರು, ಆತುರು, ಬೊಬ್ಬಲಾ, ಮಿಚಿಯಾರ್, ಹೆಬ್ರಿ, ರಾಗಿಹಾಕ್ಲು, ಮುದ್ರಾಡಿ, ಮನಿಯಾಲ, ಬೆಲ್ಲಗುಡ್ಡಿ, ಈಡ್ತು ನಕ್ರೆ, ಹೊಕ್ಕಲು ಮನೆ, ಮುಳ್ಳುಗಡ್ಡೆ, ಮಾವಿನ ಕಟ್ಟೆ, ಶಿವಪುರ, ಎಲ್ಲಾರೆ, ಹೊನ್ನೆಕಟ್ಟೆ, ಬಿಜಗೊಳಿ, ಮತ್ತು ಪಲ್ಲಿ ಈ ಗ್ರಾಮಗಳಲ್ಲಿ ೨೯ ಕುಟುಂಬಗಳಿವೆ.

ಬೆಳ್ತಂಗಡಿ ತಾಲೂಕಿನ ನಿಡಿಗಲ್ಲು, ಮುಂಡಾಜೆ, ಉಜರೆಯಲ್ಲಿ ೫ ಕುಟುಂಬಗಳು, ಸುಳ್ಯ ತಾಲೂಕಿನ ಸುಬ್ರಮಣ್ಯ ಜಲಸೂರು, ಕುಕ್ಕಂದೂರು ಮತ್ತು ದೇವರಗದ್ದೆಯಲ್ಲಿ,ಒಟ್ಟು ೯ ಕುಟುಂಬಗಳು, ಪುತ್ತೂರು ತಾಲೂಕಿನ ಕೊಕ್ಕಡ, ಕುಂಟ್ಯಾನ, ಈಶ್ವರ ಮಂಗಳ, ಕೆಮ್ಮಾಯಿ, ಸೇಡಿಯಾಪು ಮತ್ತು ನಿಡ್ಯದಲ್ಲಿ ೧೩ ಕುಟುಂಬಗಳು ಮಂಗಳೂರು ತಾಲೂಕಿನ ಕೋಟೆ, ಸಂಪಿಗೆ, ಸೂರಿಂಜೆ, ತೆಕ್ಕೊಟ್ಟು ಮತ್ತು ಕಾರ್ನಾಡು ಈ ಪ್ರದೇಶದಲ್ಲಿ ಕಮ್ಮಾರರ ೭ ಕುಟುಂಬಗಳು ಕಂಡು ಬಂದಿವೆ.

ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಕೊಳ್ಳೆಗಾಲ, ಬಾಪೂಜಿನಗರ, ಹಾನಾಪುರ, ಕಣ್ಣೂರು, ದೊಡ್ಡಹಿಂದವಾಡಿ, ಕಾಮಗೆರೆ, ಹನೂರು, ನರಸೀಪುರ, ಸತ್ಯಗಾಲ, ಪಾಳ್ಯ, ಹುಗ್ಯ, ಅಣಗಳ್ಳಿ, ಚಿಕ್ಕಲೂರು, ಅಣಗಳ್ಳಿ, ಪ್ರಕಾಶನ ಪಾಳ್ಯ, ಪಾಳ್ಯ, ತೆಳ್ಳನೂರು, ಭೈರನಹಳ್ಳಿ, ಕೊತ್ತನಹಳ್ಳಿ, ತಿಮ್ಮರಜ್ಜಿಪುರ, ಸುರಪುರ, ಹಿಂದವಾಡಿ, ಕುತ್ತನೂರು, ಲೊಕ್ಕನಹಳ್ಳಿ, ಆರ್.ಎಸ್. ದೊಡ್ಡಿ, ಬೆಲ್ತೂರು, ಚೆನ್ನಲಿಂಗನಹಳ್ಳಿ ಮತ್ತು ಗೆಜ್ಜಲನತ್ತಿಯಲ್ಲಿ ಕಮ್ಮಾರ ಸಮುದಾಯದ ೪೭ ಕುಟುಂಬಗಳು ವಾಸಿಸುತ್ತಿರುವುದು ಕಂಡು ಬರುತ್ತವೆ.ಈ ಎಲ್ಲ ಕುಟುಂಬಗಳನ್ನು ಈ ಅಧ್ಯಯನಕ್ಕೆ ಅಳವಡಿಸಲಾಗಿದೆ.

**೧.೪ ಅಧ್ಯಯನ ವಿಧಾನಗಳು:**

ಪ್ರಸ್ತುತ ಅಧ್ಯಯನಕ್ಕೆ ಮಂಗಳೂರು, ಉಡುಪಿ ಮತ್ತು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನಲ್ಲಿ ವಾಸಿಸುತ್ತಿರುವ ಕಮ್ಮಾರ ಸಮುದಾಯವನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನ ಪೂರ್ಣವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿರುವಂತಹದ್ದು. ಕಮ್ಮಾರರನ್ನು ಕುರಿತಾದ ಅಧ್ಯಯನಗಳು ಕಡಿಮೆ ಪ್ರಮಾಣದಲ್ಲಿ ನಡೆದಿವೆ. ಉತ್ತರ ಕರ್ನಾಟಕದ ಮುದ್ದೆ ಕಮ್ಮಾರರನ್ನು ಕುರಿತು ಅಧ್ಯಯನ ಮಾಡಲಾಗಿದೆ. ಆದರೆ ಪರಿಶಿಷ್ಟ ಪಂಗಡದ ಸಮುದಾಯವೆಂದು ಭಾರತ ಸರಕಾರ ಗುರುತಿಸಿದ ಉಡುಪಿ, ಮಂಗಳೂರು ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಕಮ್ಮಾರರನ್ನು ಕುರಿತು ಅಧ್ಯಯನಗಳು ನಡೆದಿಲ್ಲವೆಂದು ಹೇಳಬಹುದು. ಈಗಾಗಲೇ ನಡೆದ ಅಧ್ಯಯನಗಳನ್ನು ಗಮನದಲ್ಲಿ ಇಟ್ಟುಕೊಂಡು ಕಮ್ಮಾರರ ಬದುಕಿನ ಸ್ಥಿತ್ಯಂತರಗಳು ಎಂಬ ವಿಷಯದಲ್ಲಿ ಅಧ್ಯಯನ ಕೈಕೊಳ್ಳಲಾಯಿತು. ಈ ಅಧ್ಯಯನಕ್ಕೆ ಈ ಕೆಳಗೆ ಸೂಚಿಸಿರುವ ವಿಧಾನಗಳನ್ನು ಅಳವಡಿಸಿಕೊಂಡು ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

೧. ಇಲ್ಲಿಯವರೆಗೆ ನಡೆದ ಅಧ್ಯಯನಗಳ ಆಕರಗಳು.

೨. ಚಾರಿತ್ರಿಕ ವಿಧಾನ

೩. ಪ್ರಶ್ನಾವಳಿ ವಿಧಾನ

೪. ಸಂದರ್ಶನ ವಿಧಾನ

೫. ಮಾದರಿಗಳ ಆಯ್ಕೆ

೬. ಸಹಭಾಗಿತ್ವ ವಿಧಾನ

೭. ಗುಂಪುಚರ್ಚೆ

೮. ಸಂಖ್ಯಾಶಾಸ್ತ್ರೀಯ ವಿಧಾನ

೯. ಅವಲೋಕನ ವಿಧಾನ

**೧.೪.೧. ಇಲ್ಲಿಯವರೆಗೆ ನಡೆದ ಅಧ್ಯಯನಗಳ ಆಕರಗಳ ಬಳಕೆ:**

ಕಮ್ಮಾರರನ್ನು ಕುರಿತು ಕೆಲ ಅಧ್ಯಯನಗಳನ್ನು ಸ್ವದೇಸಿ ಹಾಗೂ ವಿದೇಶಿ ಸಮಾಜಶಾಸ್ತ್ರಜ್ಞರು ಕೈಕೊಂಡಿದ್ದಾರೆ. ಅವರು ಕಮ್ಮಾರಿಕೆಯ ವೃತ್ತಿ, ಕಮ್ಮಾರರು ತಯಾರಿಸುತ್ತಿರುವ ವಸ್ತುಗಳು ಹಾಗೂ ಅಲ್ಪ ಪ್ರಮಾಣದಲ್ಲಿ ಅವರ ಬದುಕಿನ ಸ್ಥಿತಿಗತಿಗಳನ್ನು ಹೇಳಿದ್ದಾರೆ. ಅವುಗಳನ್ನೆಲ್ಲ ಈ ಅಧ್ಯಯನಲ್ಲಿ ಗಮನಿಸಲಾಗಿದೆ.

**೧.೪.೨. ಚಾರಿತ್ರಿಕ ವಿಧಾನ:**

ಕಮ್ಮಾರರ ಸಮುದಾಯದಲ್ಲಿಯ ಚರಿತ್ರೆ, ಪುರಾಣಗಳು ವೇದಕಾಲಕ್ಕಿಂತ ಹಿಂದಿನಿಂದಲೇ ಗುರುತಿಸುವುದನ್ನು ಕಾಣುತ್ತೇವೆ. ಈ ಸಮುದಾಯದ ಮೇಲೆ ನಡೆದ ಅಧ್ಯಯನಗಳಲ್ಲಿ ಕಮ್ಮಾರರ ಚರಿತ್ರೆ, ಪೌರಾಣಿಕ ಹಿನ್ನೆಲೆ, ಇವು ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ಕಂಡುಕೊಂಡು ಅಧ್ಯಯನ ಕೈಕೊಳ್ಳಲಾಗಿದೆ.

**೧.೪.೩. ಪ್ರಶ್ನಾವಳಿ ವಿಧಾನ:**

ಈ ಅಧ್ಯಯನಕ್ಕೆ ವಿಸ್ತೃತವಾದ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಆ ಪ್ರಶ್ನಾವಳಿಯನ್ನು ಕ್ಷೇತ್ರ ಕಾರ್ಯದಲ್ಲಿ ಬಳಸಿಕೊಳ್ಳಲಾಗಿದೆ. ಸಮರ್ಥ ಮಾಹಿತಿದಾರರಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಕಮ್ಮಾರರ ಪ್ರತಿಯೊಂದು ಕುಟುಂಬದ ( House hold survey )ಮಾಹಿತಿ ಪಡೆಯಲಾಗಿದೆ. ಈ ಅಧ್ಯಯನಕ್ಕೆ ಅನ್ಯ ಸಮುದಾಯದ ಮಾಹಿತಿದಾರರಿಂದಲೂ ಮಾಹಿತಿ ಪಡೆಯಲಾಗಿದೆ. ವೈಜ್ಞಾನಿಕ ಅಧ್ಯಯನಕ್ಕಾಗಿ ಆಡಿಯೋ, ವಿಡಿಯೋ ಹಾಗೂ ಛಾಯಾ ಚಿತ್ರಗಳನ್ನು ತೆಗೆಯಲಾಗಿದೆ. ಒಂದು ಕ್ರಮಬದ್ಧವಾದ ಅಧ್ಯಯನ ಶಿಸ್ತಗೆ ಒಳಪಟ್ಟು ಸಂಗ್ರಹಿಸಿದ ಮಾಹಿತಿಯನ್ನಿ ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**೧.೪.೪. ಸಂದರ್ಶನ ವಿಧಾನ:**

ಉಡುಪಿ, ಮಂಗಳೂರು ಹಾಗೂ ಕೊಳ್ಳೆಗಾಲದ ಕಮ್ಮಾರರಲ್ಲಿ ಕೆಲವರನ್ನು ಆಯ್ಕೆಮಾಡಿಕೊಂಡು ಅವರೊಂದಿಗೆ ಮುಕ್ತವಾಗಿ ಚರ್ಚಿಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಕಮ್ಮಾರ ಸಮುದಾಯದ ಯುವಕರನ್ನು ಪ್ರತ್ಯೇಕವಾಗಿ ಕೂಡಿಸಿಕೊಂಡು ಆಧುನಿಕತೆಯ ಪರಿಸರದಲ್ಲಿ ಕಮ್ಮಾರಿಕೆಯ ವೃತ್ತಿಯ

ಅಳಿವು ಉಳಿವಿನ ಬಗ್ಗೆ ಚರ್ಚಿಸಲಾಗಿದೆ. ಕಮ್ಮಾರ ಸಮುದಾಯದಲ್ಲಿನ ಹಿರಿಯರ, ಮಧ್ಯಮ ವಯಸ್ಕರ ಹಾಗೂ ಯುವಕರು ಹೇಳಿದ ಹೇಳಿಕೆಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

**೧.೪.೫. ಮಾದರಿಗಳ ಆಯ್ಕೆ:**

ಕಮ್ಮಾರರಲ್ಲಿಯ ಕೆಲ ಕುಟುಂಬಗಳನ್ನು ಅಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಉದಾಹರಣೆಗೆ ನಗರಪ್ರದೇಶಗಳಲ್ಲಿ ಕಮ್ಮಾರಿಕೆಯ ವೃತ್ತಿಯಲ್ಲಿ ತೊಡಗಿಕೊಂಡವರಿಗೂ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಕಮ್ಮಾರಿಕೆ ವೃತ್ತಿ ನಿರ್ವಹಿಸುವವರಿಗೂ ಅನೇಕ ವ್ಯತ್ಯಾಸಗಳಿವೆ. ಇವರಿಬ್ಬರ ಸಮಸ್ಯೆಗಳು ಬೇರೆ ಬೇರೆಯಾಗಿರುತ್ತವೆ. ಹೀಗಾಗಿ ನಗರ ಪ್ರದೇಶಗಳಲ್ಲಿಯ ಕಮ್ಮಾರರ ಕೆಲ ಕುಟುಂಬಗಳನ್ನು ಗ್ರಾಮೀಣ ಪ್ರದೇಶದ ಕೆಲ ಕಮ್ಮಾರರ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಅವರ ಆಚಾರ ವಿಚಾರ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಚಾರಗಳಲ್ಲಿ ಭಿನ್ನತೆಇರುವುದನ್ನು ಗುರುತಿಸಲಾಗಿದೆ. ಈ ಕಾರಣಗಳಿಂದ ಕೆಲ ನಿರ್ಧಿಷ್ಟಪಡಿಸಿದ ಕುಟುಂಬಗಳನ್ನು ಆಯ್ಕೆಮಾಡಿಕೊಂಡು ಮಾಹಿತಿ ಸಂಗ್ರಹಿಸಿ ಅದನ್ನು ಈ ಅಧ್ಯಯನದಲ್ಲಿ ಬಳಸಲಾಗಿದೆ.

**೧.೪.೬. ಸಹಭಾಗಿತ್ವ ವಿಧಾನ:**

ಕಮ್ಮಾರರ ಸಮುದಾಯದ ಆಚರಣೆಗಳಲ್ಲಿ, ಕೆಲ ಸಂಸ್ಕಾರಗಳಲ್ಲಿ ಖುದ್ದಾಗಿ ಭಾಗವಹಿಸಿ ನೋಡಿ ವಿಶ್ಲೇಷಣೆ ಮಾಡಬೇಕಾಗುತ್ತದೆ ಮತ್ತು ಅವುಗಳನ್ನು ಅರ್ಥೈಸಿಕೊಳ್ಳಬೇಕಾದರೆ ನಾವು ಅವುಗಳಲ್ಲಿ ಭಾಗವಹಿಸಲೇಬೇಕಾಗುತ್ತದೆ. ಈ ಕಾರಣಗಳಿಂದ ನಾವು ಅವರ ಜೊತೆಗೆ ಕೆಲ ದಿನಗಳನ್ನು ಕಳೆಯಬೇಕು. ಅಂದರೆ ಮಾತ್ರ ಸಮುದಾಯದ ಸೂಕ್ಷ್ಮತೆಗಳನ್ನು ಅರಿಯಲು ಸಾಧ್ಯವಾಗುತ್ತದೆ. ಈ ವಿಧಾನದಲ್ಲಿ ಮಾಹಿತಿ ಸಂಗ್ರಹಿಸಿ ಆ ಮಾಹಿತಿಯನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**೧.೪.೭. ಗುಂಪು ಚರ್ಚೆ:**

ಭಾರತ ಸರಕಾರ ಉಡುಪಿ, ಮಂಗಳೂರು ಹಾಗೂ ಕೊಳ್ಳೆಗಾಲ ಪರಿಸರದ ಕಮ್ಮಾರರನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿದೆ. ಆದರೆ ಇದರ ಉಪಯೋಗವನ್ನು ಬೆರಳೆಣಿಕೆಯಷ್ಟು ಜನರು ಮಾತ್ರ ಪಡೆಯುತ್ತಿದ್ದಾರೆ. ಉಳಿದವರು ತಮ್ಮ ಸಾಮಾಜಿಕ ಸ್ಥಾನ ಮಾನಗಳಿಗೆ ಅಂಜಿ ಸರಕಾರದ ಸೌಲಭ್ಯಗಳನ್ನು ಪಡೆಯುವುದಕ್ಕೆ ಹಿಂದೇಟು ಹಾಕುತ್ತಿದ್ದಾರೆ. ಮತ್ತು ಜನಗಣತಿಯ ಸಂದರ್ಭದಲ್ಲಿ ಜಾತಿ ಕಾಲೂಮಿನಲ್ಲಿ ಕಮ್ಮಾರ ಎಂದು ನಮೂದಿಸದೇ ಇರುವುದಕ್ಕೆ ಕಾರಣಗಳೇನು ಎಂಬುದನ್ನು ಅರಿತುಕೊಳ್ಳಲು ಈ ಸಮುದಾಯದ ಹಿರಿಯರನ್ನು ಯುವಕರನ್ನು ಒಟ್ಟಿಗೆ ಸೇರಿಸಿ ಚರ್ಚಿಸಲಾಯಿತು. ಒಟ್ಟಾರೆಯಾಗಿ ಸಮುದಾಯದಿಂದ ಹೊರ ಬಂದ ಮಾಹಿತಿಯನ್ನು ಈ ಅಧ್ಯಯನದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

೧.೪.೮. ಸಂಖ್ಯಾಶಾಸ್ತ್ರೀಯ ವಿಧಾನ:

ಕಮ್ಮಾರರ ಬದುಕಿನ ಸ್ಥಿತ್ಯಂತರಗಳು ಈ ಅಧ್ಯಯನಕ್ಕಾಗಿ ಉಡುಪಿ, ಮಂಗಳೂರು ಹಾಗೂ ಕೊಳ್ಳೆಗಾಲ ಪರಿಸರದಲ್ಲಿ ವಾಸಿಸುವ ಕಮ್ಮಾರರ ಕುಟುಂಬಗಳನ್ನು ನಿಗದಿಪಡಿಸಿದ ಒಂದು ಪ್ರಶ್ನಾವಳಿಯ ಮೂಲಕ ಪ್ರತಿಯೊಂದು ಕುಟುಂಬದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅದನ್ನು ಈ ಅಧ್ಯಯನದಲ್ಲಿ ಅಂಕಿ ಸಂಖ್ಯೆಗಳ ಮೂಲಕ ನೀಡಲಾಗಿದೆ.

೧.೪.೯.ಅವಲೋಕನ ವಿಧಾನ:

ಕಮ್ಮಾರರ ಸಮುದಾಯದಲ್ಲಿ ನಡೆಯುವ ಮದುವೆ, ಮುಂಜಿವೆ, ಶವಸಂಸ್ಕಾರ, ಜಾತ್ರೆ ಉತ್ಸವಗಳಲ್ಲಿ ಭಾಗವಹಿಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ವಿಧಾನದಲ್ಲಿ ನೋಡುವುದು, ಸೂಕ್ಷ್ಮವಾಗಿ ಗಮನಿಸುವುದರ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿ ಸಂಗ್ರಹಿಸಿದ ಮಾಹಿತಿಯನ್ನು ಮಾಹಿತಿದಾರರ ಮುಂದೆ ಚರ್ಚಿಸಿ ನಂತರ ಅಧ್ಯಯನಕ್ಕೊಳಪಡಿಸಬೇಕಾಗುತ್ತದೆ. ಈ ವಿಧಾನದಿಂದ ಸಂಗ್ರಹಿಸಿದ ಮಾಹಿತಿಯನ್ನು ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

೧.೫. ಅಧ್ಯಯನದ ಮಹತ್ವ:

ಈ ಅಧ್ಯಯನದ ಮೂಲಕ ಕುಶಲ ಕರ್ಮಿಗಳಾದ ಕಮ್ಮಾರರು ತಮ್ಮ ವೃತ್ತಿಯ ಮೂಲಕ ಒಂದು ಕಾಲಘಟ್ಟದಲ್ಲಿ ಸಮಾಜಕ್ಕೆ, ಕೃಷಿ ಉತ್ಪಾದನಾ ವ್ಯವಸ್ಥೆಗೆ, ರಾಜ–ಮಹಾರಾಜರಿಗೆ ನೀಡಿದ ಅತ್ಯಮೂಲ್ಯವಾದ ಕೊಡುಗೆಗಳು ಹೇಗಿದ್ದವು, ಅವರು ಅಂದು ಹೇಗೆ ಬದುಕುತ್ತಿದ್ದರು ಎಂದು ತಿಳಿದುಕೊಳ್ಳಲು ಸಹಾಯವಾಗುತ್ತದೆ ಮತ್ತು ಆಧುನೀಕರಣ, ನಗರೀಕರಣ, ವೈಜ್ಞಾನೀಕರಣದ ಪ್ರಭಾವದಿಂದ ಈ ಕಮ್ಮಾರರ ಪಾರಂಪರಿಕ ವೃತ್ತಿಗಳ ಸ್ಥಿತಿಗತಿಗಳೇನಾಗಿವೆ. ಇಂದು ಅವರು ಆಧುನಿಕತೆಗೆ

ಮುಖಾಮುಖಿಯಾಗುತ್ತಿರುವ ಸಂದರ್ಭದಲ್ಲಿ ಅವರ ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಹೀಗೆ ಅವರ ಒಟ್ಟು ಬದುಕಿನಲ್ಲಾಗಿರುವ ಸ್ಥಿತ್ಯಂತರಗಳನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಆಧುನಿಕತೆಯ ಮತ್ತು ವೈದಿಕ ಧರ್ಮದ ಪ್ರಭಾವದಿಂದ ಅವರ ಪಾರಂಪರಿಕ ಆಚರಣೆ, ಸಂಪ್ರದಾಯಗಳು ಹೇಗೆ ರೂಪ ಪಡೆಯುತ್ತಿವೆ ಎಂಬುದನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಭಾರತ ಸರಕಾರ ಈ ಪ್ರದೇಶದ ಕಮ್ಮಾರರಿಗೆ ಪರಿಶಿಷ್ಟ ಪಂಗಡದ ಸೌಲಭ್ಯವನ್ನು ನೀಡಿದ್ದರೂ ಅದನ್ನು ಇವರಿಗೆ ಉಪಯೋಗಿಸಿಕೊಳ್ಳಲಿಕ್ಕೆ ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣಗಳೇನು ಎಂಬುದನ್ನು ಕಂಡುಕೊಳ್ಳಲು ಸಾಧ್ಯವಾಗಿದೆ

೧.೬ ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ:

ಕಮ್ಮಾರ ಹಾಗು ವಿಶ್ವಕರ್ಮರನ್ನು ಕುರಿತಾದ ಅಧ್ಯಯನಗಳು ಕಡಿಮೆ ಪ್ರಮಾಣದಲ್ಲಿ ನಡೆದಿವೆ. ಕೆಲ ಸಮಾಜಶಾಸ್ತ್ರ ಅಧ್ಯಯನಕಾರರು ವಿಶ್ವಕರ್ಮರ ವೃತ್ತಿಗಳ ಬಗೆಗೆ ವಿವರಿಸಲು ಪ್ರಯತ್ನಿಸಿದ್ದಾರೆ.

ಜಾನ್ ಬ್ರೋವರ್ ಎಂಬ ವಿದ್ವಾಂಸ ವಿಶ್ವಕರ್ಮರ ವೃತ್ತಿಗಳನ್ನೇ ಮುಖ್ಯವಾಗಿಟ್ಟು ಅಧ್ಯಯನ ಕೈಗೊಂಡಿದ್ದಾನೆ.

**1. Jan Brouwer , The Makers Of The World**

ಹಾಲಂಡ ಮೂಲದ ಮಾನವ ಶಾಸ್ತ್ರಜ್ಞ ಜಾನ್ ಬ್ರೋವರ್ ಎಂಬ ಪಾಶ್ಚಾತ್ಯ ವಿದ್ವಾಂಸ ದಕ್ಷಿಣ ಭಾರತದಲ್ಲಿಯ ವಿಶ್ವಕರ್ಮರ ಐದು ವೃತ್ತಿಗಳಾದ ಕಮ್ಮಾರ, ಬಡಿಗ, ಕಂಚುಗಾರ, ಶಿಲಾಶಿಲ್ಪ, ಹಾಗೂ ಸುವರ್ಣ ಶಿಲ್ಪಿಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ೧೯೮೫ ರಿಂದಲೇ ಕ್ಷೇತ್ರಕಾರ್ಯ ಪ್ರಾರಂಭಿಸಿ ಸುಮಾರು ಹತ್ತು ವರ್ಷಗಳವರೆಗೆ ವಿಶ್ವಕರ್ಮರಲ್ಲಿರುವ ಉಪಪಂಗಡಗಳು ಅನೇಕ ವೃತ್ತಿಗಳು, ವೃತ್ತಿಗೆ ಸಂಬಂಧಿಸಿದ ಆಚಾರ ವಿಚಾರ ಸಂಪ್ರದಾಯಗಳನ್ನು ವಿವರಿಸಿದ್ದಾರೆ. ಇವರು ಕರಾವಳಿ ಪ್ರದೇಶದ ವಿಶ್ವಕರ್ಮರನ್ನು ಕುರಿತು ಅಧ್ಯಯನ ಕೈಕೊಂಡಿಲ್ಲ.

ಜಾನ್ ಬ್ರೋವರ್ ಕಮ್ಮಾರಿಕೆಯನ್ನು ಕುರಿತು ತಮ್ಮ ಗ್ರಂಥದಲ್ಲಿ ಈ ಕೆಳಗಿನಂತೆ ವಿವರಿಸಿದ್ದಾರೆ.[ಪುಟ ಸಂಖ್ಯೆ ೫೫ ರಿಂದ ೭೦ ರವರೆಗೆ]

ಕಮ್ಮಾರರು ಕಬ್ಬಿಣ ಎನ್ನುವ ಪದವನ್ನು ಬಳಸುತ್ತಾರೆ. ಇದರ ಅಂಗ್ಲಪದ Iron ಇದನ್ನು ಕಾರ್ಬುನ್,ಕಬ್ ಪೂನಾ, ಗಿರಿಜಾ ಎಂದು ಕರೆಯುತ್ತಾರೆ. ಇದರ ಶಬ್ದಾರ್ಥ ಬೆಟ್ಟಗುಡ್ಡಗಳಲ್ಲಿ ಹುಟ್ಟಿದವನು ಎಂದೂ ಘಾನ (Ghana) ಎಂದರೆ ಮೋಡ ಎಂಬ ಅರ್ಥಕೊಡುತ್ತದೆ. ವಿಶ್ವಕರ್ಮರ ಪ್ರಕಾರ ಕಬ್ಬಿಣದ ಅದಿರು ಎಂದರೆ ಮಹಾಕಾಳಿಯ ಪ್ರತಿರೂಪ. ಕಬ್ಬಿಣವು ಒಂದು ಕಚ್ಚಾವಸ್ತು ಇದರ ಪ್ರತಿರೂಪವೆ ಕಾಳಿದೇವತೆ. ಕಮ್ಮಾರರು ಈ ದೇವತೆಯನ್ನು ಸದಾ ಅರಾಧಿಸುತ್ತಾ ಕಬ್ಬಣದ ಅದಿರನ್ನು ಶೋಧಿಸುತ್ತಾ ಜೀವನ ಸಾಗಿಸುತ್ತಿದ್ದಾರೆ.

**ಕಬ್ಬಿಣ ತಯಾರಿಸುವುದು:**

ಇಂದಿನ ಪರಿಸ್ಥಿತಿಯಲ್ಲಿ ಕಮ್ಮಾರರು ಕಬ್ಬಿಣದ ಅದಿರಿನಿಂದ ಕಬ್ಬಿಣವನ್ನು ಶೋಧಿಸುವುದಿಲ್ಲ ಆದರೆ ಇದರ ಪರಿಚಯ ಮತ್ತು ಜ್ಞಾನ ಇವರಿಗೆ ತಿಳಿದಿರುತ್ತದೆ. ಈ ಜ್ಞಾನವನ್ನು ಇವರು ತಮ್ಮ ಪೂರ್ವಿಕರಿಂದ ತಿಳಿದುಕೊಂಡಿರುತ್ತಾರೆ. ಮಧ್ಯ ಕರ್ನಾಟಕದ ಕಮ್ಮಾರರಿಗೆ ಇದರ ಬಗ್ಗೆ ಹರಿವು ಹೆಚ್ಚಾಗಿರುತ್ತದೆ. ಇವರು ಕಬ್ಬಿಣದ ಅದಿರನ್ನು ಅದಿರುಕಲ್ಲು ಎನ್ನುತ್ತಾರೆ. ಇದು ಒಂದು ರೀತಿಯ ಮಣ್ಣು ಮತ್ತು ಮರಳು ಮಿಶ್ರವಾಗಿರುವಂತಹ ಕಲ್ಲು. ಈ ಅದಿರನ್ನು ಗುಡ್ಡ ಬೆಟ್ಟಗಳಿಂದ ಶೇಖರಿಸಿ ತಂದು ಪುಡಿಮಾಡಿ ನೀರಿನಿಂದ ಶೋಧಿಸಲಾಗುತ್ತದೆ. ನಂತರ ಊರಿಯವ ಬೆಂಕಿಗೆ ಇದನ್ನು ಹಾಕಿ ಆ ಮೂಲಕ ಕಬ್ಬಿಣವನ್ನು ಶೋಧಿಸುತ್ತಾರೆ.

ದಕ್ಷಿಣ ಕರ್ನಾಟಕದಲ್ಲಿ ಕಪ್ಪು ಮರಳು ಹಾಗೂ ಮಣ್ಣಿನಿಂದ ಕೂಡಿದ ಕಬ್ಬಿಣದ ಅದಿರು ದೊರೆಯುತ್ತಿತ್ತು. ಇದು ಮಳೆಗಾಲದಲ್ಲಿ ಮಳೆಯ ಹೊಡೆತಕ್ಕೆ ಸಿಕ್ಕಿ ಸ್ಥಳೀಯ ಚರಂಡಿ ಹಾಗು ಕಂದಕ ಪ್ರದೇಶದಲ್ಲಿ ಬಂದು ಸೇರುತ್ತಿತ್ತು. ಅವುಗಳನ್ನು ಸಂಸ್ಕರಿಸಿ ಊದು ಕುಲುಮೆಗಳಲ್ಲಿ ವಿವಿಧ ಆಕಾರಗಳಿಗೆ ಬಡಿದು ನಂತರ ಉಪಯೋಗಿಸಲಾಗುತ್ತದೆ, ಎಂಬ ವಿಷಯವನ್ನು ಬುಕಾನನ್

ತಿಳಿಸುತ್ತಾನೆ. ಈ ಅದಿರು ಆಯಸ್ಕಾಂತದ ಗುಣ ಹೊಂದಿದ್ದು ೧೫೨೮'ಡಿಗ್ರಿ ಸೆಂಟಿಗ್ರೇಡ್ ನಲ್ಲಿ ಕರಗುತ್ತದೆ. ಈ ರೀತಿಯ ವಿಧಾನಗಳನ್ನು ಅಳವಡಿಸಲು ಮಸಿ(Charcoal) ನ್ನು ಬಿದಿರಿನಿಂದ ತಯಾರಿಸುತ್ತಿದ್ದರು. ಈ ಮಸಿ ಕಮ್ಮಾರರ ಎಲ್ಲ ಕೆಲಸಗಳನ್ನು ನಿರ್ವಹಿಸಲು ಬೇಕಾಗುವಂತಹ ಅತೀ ಮುಖ್ಯವಾದಂತಹ ಕಚ್ಚಾ ವಸ್ತುವಾಗಿದೆ.

ಕಮ್ಮಾರರು ತುಂಬಾ ತ್ಯಾಗಿಗಳು. ಇವರು ತಮ್ಮ ಅರಾಧ್ಯ ದೈವವಾದಂತಹ ಕಾಳಿದೇವತೆಯನ್ನು ಸಂತೃಪ್ತಿಪಡಿಸಲು ಪ್ರಾಣಿಗಳನ್ನು ಬಲಿಕೊಡುತ್ತಿದ್ದರು. ಇದರಿಂದಾಗಿ ಕಮ್ಮಾರರು ದೇವರೊಂದಿಗೆ ಉತ್ತಮ ಸಂಬಂಧಗಳನ್ನು ಹೊಂದಿದ್ದರು ಎಂಬುದು ತಿಳಿದು ಬರುತ್ತದೆ. ಇವರು ತಯಾರಿಸಿದಂತಹ ವಸ್ತಗಳು ಎರಡು ಈ ರೀತಿಯದ್ದಾಗಿರುತ್ತಿದ್ದವು. ಅ) ಆಯುಧಗಳು ಆ) ಎತ್ತಿನ ಬಂಡಿ,ಕೃಷಿಗೆ ಬೇಕಾಗುವಂತಹ ವಸ್ತುಗಳು

**ಅ. ಆಯುಧಗಳು:**

ಇವರು ತಯಾರಿಸುವ ವಸ್ತುಗಳಲ್ಲಿ ಆಯುಧಗಳು ತುಂಬಾ ಪ್ರಮುಖವಾಗಿರುತ್ತಿದ್ದವು. ಅವುಗಳಲ್ಲಿ ಖಡ್ಗಗಳು ತುಂಬಾ ಪ್ರಸಿದ್ಧವಾದವುಗಳು. ಕೆಲವು ಖಡ್ಗಗಳನ್ನು ಸಂಪೂರ್ಣವಾಗಿ ಕಬ್ಬಿಣದಿಂದಲೇ ತಯಾರಿಸುತ್ತಾರೆ. ಇನ್ನು ಕೆಲವು ಖಡ್ಗಗಳನ್ನು ಕಬ್ಬಿಣದಿಂದ ತಯಾರಿಸಿ ಅದಕ್ಕೆ ಮರದಿಂದ ಹಿಡಿಗಳನ್ನು ಜೊಡಿಸಿ ತಯಾರಿಸುತ್ತಿದ್ದರು. ಈ ಖಡ್ಗಗಳು ದೇವರ ಆಯುಧವಾಗಿರುತ್ತವೆ. ಇದು ದುಷ್ಟ ಸಂಹಾರದ ಪ್ರತಿರೂಪಗಳಾಗಿವೆ. ಆದ್ದರಿಂದ ಕಮ್ಮಾರರು ಜೀವಗಳನ್ನು ತೆಗೆಯಲೂ ಕೂಡ ಸಹಾಯಕರಾಗಿದ್ದರು ಎಂಬ ಕಲ್ಪನೆಯನ್ನು ಹೊಂದಿದ್ದಾರೆ. ಈ ರೀತಿಯ ಖಡ್ಗಗಳನ್ನು ತಯಾರಿಸುವಲ್ಲಿ ಕಮ್ಮಾರರು ಸಿದ್ಧಹಸ್ತರು.

**ಆ. ಎತ್ತಿನ ಬಂಡಿಗೆ ಬೇಕಾಗುವಂತಹ ವಸ್ತುಗಳು:**

ಮಾನವನು ನಾಗರಿಕತೆಯನ್ನು ಹೊಂದಲು ಬಹಳ ಮುಖ್ಯವಾಗಿ ಇರುವ ಆಧಾರ ಸ್ಥಂಬಗಳು ಎಂದರೆ ಚಕ್ರಗಳು. ಈ ಚಕ್ರಗಳು ಅವಿಷ್ಕಾರವಾದೊಡನೆ ನಾಗರಿಕತೆಯ ತನ್ನ ವಿರಾಟ್ ರೂಪವನ್ನು ತೋರಿಸಲು ಪ್ರಾರಂಭಿಸಿತು ಎನ್ನಬಹುದು. ಆದ್ದರಿಂದಲೇ ವಿಶ್ವಕರ್ಮರನ್ನು ರಥಕಾರರು ಎಂದು ಕರೆಯುತ್ತಾರೆ.

ಎತ್ತನ ಬಂಡಿಗೆ ಸಂಬಂಧಿಸಿದ ಚಕ್ರ, ಪಟ್ಟಿ, ಕೀಲು, ಕೊಂಚಟ್ಟು, ಗಡ್ಡೆಕಟ್ಟು(ಗುಮ್ಮದಕಟ್ಟು) ಬಳೆ, ದೂರಿ, ಭೀಮಮೊಳೆ, ಮೊಳೆ, ಪರುದಸಾಲಿಕೆ, ತಬಗಟ್ಟಿನಮೊಳೆ, ಚೌಕದಕಟ್ಟು ಇನ್ನು ಮುಂತಾದವುಗಳನ್ನು ಕಮ್ಮಾರರು ಮಾಡಿಕೊಡುತ್ತಾರೆ.

ಕಮ್ಮಾರರು ಪಟ್ಟಿ (ಹಳಿ)(Hoop)ಯನ್ನು ಕಬ್ಬಿಣದ ಅಂಗಡಿಯಿಂದ ಕೊಂಡು ತರುತ್ತಾರೆ. ಇದು ಸುಮಾರು ೧೫ ಅಡಿ ಉದ್ದ ಇರುತ್ತದೆ. ಇದರ ತುದಿಯನ್ನು ಸುತ್ತಿಗೆಯಿಂದ ಬಡಿದು ಸುಮಾರು ೨೫ ಡಿಗ್ರಿ ಬಗ್ಗಿಸುತ್ತಾರೆ. ನಂತರ ಒಂದು ಹಳಿಯ ಗಾಡಿ ಚಕ್ರವನ್ನು ಅದರ ಮೇಲಿಟ್ಟು ಹಗ್ಗದಿಂದ ಬಿಗಿಯಾಗಿ ಕಟ್ಟಿ ಇನ್ನು ಬಿಗಿಗೊಳಿಸಲು ಕಟ್ಟಿರುವ ಹಗ್ಗದ ಎಡೆಯಲ್ಲಿ ಮರದ

ಚೆಕ್ಕೆಗಳನ್ನು ತೂರಿಸಿ ಕಟ್ಟನ್ನು ಬಿಗಿಗೊಳಿಸುತ್ತಾರೆ. ನಂತರ ನಾಲ್ಕೈದು ಜನ ಕಮ್ಮಾರರು ಸೇರಿ ಚಕ್ರವನ್ನು ಹಳಿಯ ಮೇಲೆ ಬಡಿಸುತ್ತಾರೆ. ಆಗ ಹಳಿ ಚಕ್ರಕಾರದ ರೂಪಕ್ಕೆ ಬರುತ್ತದೆ. ನಂತರ ತಯಾರಾಗಿರುವ ಚಕ್ರದ ಸುತ್ತಳತೆಯನ್ನು ತೆಗೆದು ಅದಕ್ಕೆ ಹೊಂದುವಂತೆ ಅಳತೆಮಾಡಿ ಪಟ್ಟಿಯನ್ನು ಕತ್ತರಿಸಿ ಅಂತರ ಅದನ್ನು ಇನ್ನೂ ಹತ್ತಿರ ತರಲು ಸುತ್ತಿಗೆಯಿಂದ ಒಳಭಾಗಕ್ಕೆ ಹೊಡೆದು ಹತ್ತಿರ ತರುತ್ತಾರೆ. ನಂತರ ಒಂದು ತುದಿಯ ಮೇಲೆ ಇನ್ನೊಂದು ತುದಿಯನ್ನು ಇಟ್ಟು ಕುಲುಮೆಯ ಒಲೆಯ ಮೇಲಿಟ್ಟು ತಿದಿಯನ್ನು ಊದಿ ಪಟ್ಟಿಯು ಕರಗಲು ಪ್ರಾರಂಭಿಸುವ ಸಂದರ್ಭದಲ್ಲಿ ಹಳಿಯನ್ನು ಒಲೆಯಿಂದ ತೆಗೆದು ಅಡಿಗಲ್ಲಿನ ಮೇಲೆ ಇಟ್ಟು ಸುತ್ತಿಗೆಯಿಂದ ಬಡಿದು ಎರಡು ತುದಿಗಳು ಸರಿಯಾದ ಪ್ರಮಾಣದಲ್ಲಿ ಕರಗಿ ಒಂದಕ್ಕೊಂದು ಸೇರಿ ಬೆಸಿಗೆಯಾಗುತ್ತದೆ. ನಂತರ ಇದನ್ನು ಚಕ್ರದ ಸುತ್ತಳತೆಗಿಂತ ಸುಮಾರು ಒಂದು ಅಂಗುಲದಷ್ಟು ಕಡಿಮೆ ಸುತ್ತಳತೆಯನ್ನು ಇಟ್ಟು ಬೆಸುಗೆ ಹಾಕಿ ಸಿದ್ಧಗೊಳಿಸುತ್ತಾರೆ.

ಇದಾದನಂತರ ಒಂದು ಸಮತಟ್ಟಾದ ಜಾಗದಲ್ಲಿ ಎರಡು ಹಳಿಗಳನ್ನು ಒಂದರಮೇಲೊಂದು ಜೋಡಿಸಿ ಕಟ್ಟಿಗೆ ಅಥವಾ ಸಗಣಿ ಬೆರಣಿಯನ್ನು ಹಳಿಯ ಮೇಲೆ ಮುಚ್ಚಿ ಬೆಂಕಿ ಹಚ್ಚುತ್ತಾರೆ. ಬೆಂಕಿಯ ಶಾಖಕ್ಕೆ ಹಳಿಯು ಕೆಂಪಗಾಗಿ ಕಾಯುತ್ತದೆ. ಆ ಸಂದರ್ಭದಲ್ಲಿ ಇಬ್ಬರು ಕಮ್ಮಾರರು ಇಕ್ಕಳದ ಸಹಾಯದಿಂದ ಬಿಸಿಯಾಗಿರುವ ಹಳಿಯನ್ನು ತಂದು ಚಕ್ರದ ಮೇಲೆ ಇಡುತ್ತಾರೆ. ಕೂಡಲೇ ಕೊಕ್ಕೆಗಳ ಸಹಾಯದಿಂದ ಹಳಿಯನ್ನು ಚಕ್ರದ ಮೇಲೆ ಇಳಿಸುತ್ತಾರೆ. ನಂತರ ಕಾದ ಹಳಿ ಚಕ್ರವನ್ನು ಸುಡದಂತೆ ಎಚ್ಚರವಹಿಸಲು ಇನ್ನೊಬ್ಬ ಕಮ್ಮಾರನು ನೀರನ್ನು ಕ್ರಮವಾಗಿ ಸುರಿಯುತ್ತಾನೆ. ಆಗ ಬಿಸಿಯಾದ ಹಳಿಯು ನಿಧಾನವಾಗಿ ತಣ್ಣಗಾಗುತ್ತಾ ಬರುತ್ತದೆ. ಅದು ಸಂಪೂರ್ಣ ತಣ್ಣಗಾಗುವ ಮೊದಲೇ ಚಕ್ರವನ್ನು ಅಲ್ಲಿಂದ ತೆಗೆದು ಬೇರೆ ಸ್ಥಳಕ್ಕೆ ಕೊಂಡೊಯ್ದು ಹಳಿ ಮತ್ತು ಚಕ್ರ ಸಮಪ್ರಮಾಣದಲ್ಲಿ ಜೋಡಣೆಯಾಗುವಂತೆ ಮಾಡುತ್ತಾರೆ. ನಂತರ ಪೂರ್ಣ ತಣ್ಣಗಾದ ನಂತರ ಹಳಿಯು ಚಕ್ರವನ್ನು ಗಟ್ಟಿಯಾಗಿ ಹಿಡಿದಿಟ್ಟಿರುತ್ತದೆ. ಏನೇ ಮಾಡಿದರು ಕೂಡ ಹಳಿ ಚಕ್ರವನ್ನು ಬಿಡಲಾರದು. ಈ ವಿಧಾನವು ಸಂಪೂರ್ಣ ವೈಜ್ಞಾನಿಕ ವಿಧಾನವಾಗಿದ್ದು ಶಾಖದಿಂದ ಘನ ವಸ್ತುಗಳು ಹಿಗ್ಗುತ್ತವೆ ಮತ್ತು ತಣ್ಣಗಾದಾಗ ಕುಗ್ಗುತ್ತವೆ ಎಂಬ ವೈಜ್ಞಾನಿಕ ಸತ್ಯವನ್ನು ಕಮ್ಮಾರರು ಮೊದಲೇ ಕಂಡುಕೊಂಡಿದ್ದರು ಎಂಬುದು ನಮಗೆ ತಿಳಿಯುತ್ತದೆ. ಆದ್ದರಿಂದ ವಿಶ್ವಕರ್ಮರು ಮಾಡುವ ಪಂಚಕಸಾಲುಗಳು ಸಂಪೂರ್ಣವಾಗಿ ವೈಜ್ಞಾನಿಕವಾಗಿವೆ ಎಂಬುದಂತು ಸತ್ಯ

ನಂತರ ಗಾಡಿಗೆ ಬೇಕಾಗುವ ಇನ್ನೊಂದು ವಸ್ತು ಸಬ್ಬಲೆ. (Axle) ಈ ವಸ್ತುವನ್ನು ಕಬ್ಬಿಣದ ಅಂಗಡಿಯಿಂದ ತರುತ್ತಾರೆ. ಇದರ ಉದ್ದ ೪ಅಡಿ ೬ ಅಂಗುಲ ಮತ್ತು ೩ ಅಂಗುಲ ದಪ್ಪ ಇರುತ್ತದೆ. ಚೌಕಾಕೃತಿಯಲ್ಲಿರುತ್ತದೆ. ಈ ಚೌಕಾಕಾರದ ಕಬ್ಬಿಣವನ್ನು ಕಮ್ಮಾರರು ಒಲೆಗೆ ಇಟ್ಟು ಇದ್ದಿಲನ್ನು ಹಾಕಿ ನಂತರ ತಿದಿಯಿಂದ ಗಾಳಿನೊತ್ತಿ ಬಿಸಿ ಮಾಡುತ್ತಾರೆ. ನಂತರ ಕೆಂಪಗಾದ ಸಬ್ಬಲನ್ನು ಅಡಿಗಲ್ಲಿನ ಮೇಲೆ ತಂದು ಕಮ್ಮಾರನು ಇಡುತ್ತಾನೆ. ಇನ್ನುಳಿದ ಇಬ್ಬರು ವ್ಯಕ್ತಿಗಳು

ಸುಮಾರು ಹತ್ತು ಪೌಂಡ ತೂಕದ ಸುತ್ತಿಗೆಯನ್ನು ಹಿಡಿದು ಬಡಿಯಾಲಾಂಭಿಸುತ್ತಾರೆ. ಈ ರೀತಿ ನಿರಂತರವಾಗಿ ಈ ಕ್ರಿಯೆಯು ನಡೆಯುತ್ತದೆ. ಆಗ ಸಬ್ಬಲ್ ಗೋಲಾಕೃತಿಗೆ ಬರುತ್ತದೆ. ಹಾಗೂ ಚೂಪಾಗುತ್ತದೆ. ಈ ರೀತಿ ಎರಡೂ ಕಡೆ ಮಾಡಿದ ನಂತರ ಮಧ್ಯ ಭಾಗಕ್ಕೆ ಚೇಣ (Linchpin)ದ ಸಹಾಯದಿಂದ ರಂಧ್ರ ಕೊರೆಯುತ್ತಾರೆ. ಇದೇ ರೀತಿ ಎರಡು ತುದಿಗಳಿಗೂ ಕೊನೆಯಿಂದ ನಾಲ್ಕು ಅಂಗುಲ ಬಿಟ್ಟು ರಂಧ್ರ ಕೊರೆದು ಕೀಲು ಹಾಕಲು ಅನುಕೂಲವಾಗುವ ಹಾಗೆ ಮಾಡುತ್ತಾರೆ. ನಂತರ ಇದನ್ನು ಮರ ಕೆಲಸ ಮಾಡುವವರಿಗೆ ಹಸ್ತಾಂತರಿಸುತ್ತಾರೆ. ಕೆಲವೊಂದು ಕಡೆಗಳಲ್ಲಿ ಕಮ್ಮಾರರೇ ಈ ಎರಡು ರೀತಿಯ ಕೆಲಸಗಳನ್ನು ನಿರ್ವಹಿಸುವುದನ್ನು ನಾವು ಕಾಣಬಹುದು.

ಕಾಡಿನಿಂದ ಜಾಲಿಯ ಮರದ ತುಂಡನ್ನು ತೆಗೆದುಕೊಂಡು ಬಂದು ಗುಮ್ಮ(ಗುಂಬ) ತಯಾರಿಸುತ್ತಾರೆ. ಇದಕ್ಕೆ ಕಾಡಾವು ಹಿಡಿಯುವುದು ಎನ್ನುತ್ತಾರೆ. (Turning work)ನಂತರ ಅದ್ದಕ್ಕೆ ೧೨ ರಂಧ್ರಗಳನ್ನು ಆಯಾತಾಕಾರದಲ್ಲಿ ತೆಗೆದು ಅದಕ್ಕೆ ಕಬ್ಬಿಣದ ಕಟ್ಟುಗಳನ್ನು ಜೋಡಿಸಿ ಸಾಗವಾನಿ ಮರದಿಂದ ತಯಾರಿಸಿದ ೧೨ಕಾಲು(Spokes) ಜೋಡಿಸುತ್ತಾರೆ. ನಂತರ ಆರು ಪುಟಿ(Felloe)ಗಳನ್ನು ಜೋಡಿಸುತ್ತಾರೆ. ನಂತರ ಹಳಿ ಜೋಡಿಸಿ ಗುಮ್ಮದ ಮಧ್ಯದಲ್ಲಿ ರಂಧ್ರ ತೆಗೆದು ಅದಕ್ಕೆ ಬಳೆ (ಕೌಳಿಗ)(Iron Bush)ಜೋಡಿಸುತ್ತಾರೆ. ನಂತರ ಮೇಲ್ಭಾಗದ ಅಟ್ಟನ್ನು ತಯಾರಿಸುತ್ತಾರೆ. ನಂತರ ಎತ್ತುಗಳನ್ನು ಕಟ್ಟಲು ನೊಗ ಜೋಡಿಸುತ್ತಾರೆ. ಇಲ್ಲಿಗೆ ಗಾಡಿ ಸಂಪೂರ್ಣವಾಗಿ ಸಿದ್ಧವಾಗುತ್ತದೆ.

೨. Anantha Krishna Iyer ಅವರು ತಮ್ಮ The Mysore Tribes and Castes (volums. 5) ಎಂಬ ಗ್ರಂಥದಲ್ಲಿ ವಿಶ್ವ ಕರ್ಮರನ್ನು ಕುರಿತು ಉಲ್ಲೇಖಿಸಿದ್ದಾರೆ. ವಿಶ್ವಕರ್ಮರು ಅಥವಾ ಪಂಚಾಳರ ವೃತ್ತಿಗಳನ್ನು ಕುರಿತು ವಿವರಣೆ ನೀಡಿದ್ದಾರೆ. ವಿಶ್ವ ಕರ್ಮರರಲ್ಲಿ ಉಪಜಾತಿಗಳಿವೆ. ಅವರು ತಮ್ಮ ಪಂಗಡಕ್ಕೆ ಮೀಸಲಾದ ವೃತ್ತಿಯ ಜೊತೆಗೆ ಇತರೆ ಪಂಗಡದವರು ನಿರ್ವಹಿಸುತ್ತಿರುವ ವೃತ್ತಿಗಳನ್ನು ಇವರು ನಿರ್ವಹಿಸುತ್ತಾರೆ ಎಂದು ತಿಳಿಸಿದ್ದಾರೆ. ಮತ್ತು ವಿಶ್ವಕರ್ಮರು ನಾವು ಬ್ರಾಹ್ಮಣರಿಗಿಂತಲು ಹೆಚ್ಚಿನ ಸ್ಥಾನ-ಮಾನಗಳನ್ನು ಉಳ್ಳವರು ಎಂದು ತಿಳಿಸುತ್ತಾ ನಾವು ಸಾವು ಇರದ ಬ್ರಹ್ಮನಿಂದ ನೇರವಾಗಿ ಸೃಷ್ಟಿಗೊಂಡವರು, ಆದರೆ ಬ್ರಾಹ್ಮಣರು ಸಾವಿಗೀಡಾದ ಋಷಿಗಳ ವಂಶದಿಂದ ಬಂದವರು. ಅದ್ದರಿಂದ ನಾವು ಬ್ರಾಹ್ಮಣರಿಗಿಂತ ಹೆಚ್ಚಿನ ಮಾನ್ಯತೆಯನ್ನು ಪಡೆದುಕೊಂಡವರು ಎಂದು ವಿಶ್ವಕರ್ಮರರ ಮಾಹಿತಿದಾರರು ಹೇಳಿದ್ದನ್ನು Iyer ಅವರು ತಮ್ಮ ಗ್ರಂಥದ ೪ನೇ ಸಂಪುಟದ ೪೩೩ನೇ ಪುಟದಲ್ಲಿ ಹೇಳಿದ್ದಾರೆ.

೩. Anand K.Koomaraswamy ಅವರ Arts and Crafts of India, Celon ಎಂಬ ಪುಸ್ತಕದಲ್ಲಿ ವಿಶ್ವಕರ್ಮರ ವೃತ್ತಿಗೆ ಸಂಬಂಧಿಸಿದ ಮಾಹಿತಿಗಳನ್ನು ನೀಡಿದ್ದಾರೆ. ಕುಮಾರಸ್ವಾಮಿ ಅವರ ಅಭಿಪ್ರಾಯದ ಪ್ರಕಾರ ದಕ್ಷಿಣ ಏಷಿಯಾಕ್ಕೆ ಸಂಬಂಧಿಸಿದಂತೆ

ಪಾಂಚಾಲರನ್ನು (Smiths) ಕುರಿತಾದ ಮಾಹಿತಿಯನ್ನು ನೀಡುವ ಪುಸ್ತಕ "ನಾಕ್ಸ್" (Knoxs) ರವರ Historical Relation of the I Land Seylon ಎಂಬ ಈ ಕೃತಿಯಲ್ಲಿ ೧೭ನೇ ಶತಮಾನದಲ್ಲಿ ಸಿಲೋನಿನಲ್ಲಿ ವಾಸಿಸುತ್ತಿದ್ದ ಕಮ್ಮಾರ, ಬಡಿಗ, ಹಾಗು ಅಕ್ಕಸಾಲಿಗರ ಸಾಮಾಜಿಕ, ಆರ್ಥಿಕ, ಜೀವನದ ಕ್ರಮಗಳು, ಹೇಗಿದ್ದವು ಎಂಬ ಮಾಹಿತಿಯನ್ನು ದಾಖಲಿಸಲಾಗಿದೆ ಎಂದು ಕುಮಾರಸ್ವಾಮಿಯವರು ತಮ್ಮ ಗ್ರಂಥದಲ್ಲಿ ವ್ಯಕ್ತ ಪಡಿಸಿದ್ದಾರೆ. ಭೂಗರ್ಭ ಶಾಸ್ತ್ರಜ್ಞರಾಗಿರುವ ಕುಮಾರಸ್ವಾಮಿಯರು ವಿಲಿಯಮ್ ಮೋರಿಸ್ ಎಂಬ ಮಾನವಶಾಸ್ತ್ರಜ್ಞರ ಪ್ರಭಾವದಿಂದ ಸಿಲೋನಿನಲ್ಲಿರುವ ಸಾಂಪ್ರದಾಯಿಕ ಕಲೆ ಹಾಗು ವೃತ್ತಿಗಳ ಅಧ್ಯಯನ ಮಾಡಿದ್ದಾರೆ.

೪. Anand K.Koomaraswamy ಅವರ Arts and Crafts of India ಕೃತಿಯಲ್ಲಿ ಕುಶಲಕರ್ಮಿಗಳ ವೃತ್ತಿಯ ಬಗೆಗೆ ಚರ್ಚಿಸಿದ್ದಾರೆ. ಪಂಚಾಳರಲ್ಲದ ಇತರೆ ಸಮುದಾಯದ ಕುಶಲಕರ್ಮಿಗಳಿಗೆ ಪಂಚಾಲರು ಹೇಗೆ ಆಶ್ರಯಧಾತರಾಗಿದ್ದರು ಮತ್ತು ಪ್ರಭಾವಿತರಾಗಿದ್ದರು ಎಂಬುದರ ಬಗ್ಗೆ ಈ ಕೃತಿಯಲ್ಲಿ ಚರ್ಚಿಸಿದ್ದಾರೆ ಮತ್ತು ಪಂಚಾಲರ ಸಾಮಾಜಿಕ, ಆರ್ಥಿಕ ಬದುಕನ್ನು ಕುರಿತು ವಿಶ್ಲೇಸಿದ್ದಾರೆ .

೫. Dubois Abbe ಅವರ Eisenschmiede and Damonen ಎಂಬ ಕೃತಿಯಲ್ಲಿ ಭಾರತದ ಕವ್ಮಾರರನ್ನು ಕುರಿತು ಮನೋಗ್ರಾಫ್ ಬರೆದಿದ್ದಾರೆ. ಕವ್ಮಾರರ ಸಮುದಾಯದಲ್ಲಿರುವ ಮೌಖಿಕ ಮತ್ತು ಗ್ರಾಂಥಿಕ ಆಕರಸಾಮಗ್ರಿಗಳನ್ನು ಕಲೆ ಹಾಕಿ ಅಧ್ಯಯನ ಕೈಕೊಂಡು ಮೌಖಿಕ ಮತ್ತು ಗ್ರಾಂಥಿಕ್ ಆಕರಗಳನ್ನು ಜೊಡಿಸುವ ಪತ್ಯ ಮತ್ತು ಕ್ಷೇತ್ರಕಾರ್ಯದಿಂದ ಸಂಪಾದಿಸಿದ ಮಾಹಿತಿಯನ್ನು ಒಟ್ಟುಗೂಡಿಸುವ ಪ್ರಯತ್ನ ಮಾಡಿದ್ದಾರೆ. ಈ ಕಾರಣದಿಂದ ಈ ಕೃತಿ ಕಮ್ಮಾರರ ಬದುಕನ್ನು ಚಿತ್ರಿಸುವಲ್ಲಿ ಮತ್ತು ಶ್ರೇಣಿಕೃತ ಸಮಾಜದಲ್ಲಿ ಕಮ್ಮಾರರ ಸ್ಥಾನ-ಮಾನಗಳೇನು, ಅವರ ಸ್ಥಿತಿಗಳು ಹೇಗಿದ್ದವು ಎಂದು ತಿಳಿಸುವಲ್ಲಿ ಅನೇಕ ಗೊಂದಲದ ಚಿತ್ರಣಗಳನ್ನು ನೀಡಿದ್ದಾರೆ.

೬ Dubois Abbe ಅವರ Hindu Manuers Customs and Cermoies ಎಂಬ ಕೃತಿಯಲ್ಲಿ ವಿಶ್ವಕರ್ಮರನ್ನು ಶೂದ್ರರಲ್ಲಿಯೇ ಕೆಳವರ್ಗದವರೆಂದು ಪರಿಗಣಿಸಿ ಅವರನ್ನು ತಿರಸ್ಕರಿಸಿದ್ದರೂ ಸಹ ಕೆಲವು ಜಿಲ್ಲೆಗಳಲ್ಲಿ ಪಾಂಚಾಳರು ಬ್ರಾಹ್ಮಣರ ಪ್ರಾಧಾನ್ಯತೆಯನ್ನು ಒಪ್ಪಿಕೊಳ್ಳದೆ ತಿರಸ್ಕರಿಸಿದ್ದನ್ನು ಈ ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. ಜನಿವಾರದ ಉಪಯೊಗ, ಜನಿವಾರ ಧರಿಸದೇ ಇರುವ ಪಂಚಾಳರ ಬಗೆಗೆ ತಿಳಿಸುತ್ತಾರೆ. ಜೈನ, ಕ್ಷತ್ರೀಯ, ವೈಶ್ಯ ಮತ್ತು ಪಾಂಚಾಳರು ಜನಿವಾರ ಧರಿಸುವುದರ ಮೂಲಕ ಬ್ರಾಹ್ಮಣಿಕೆಯನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ. ಎಂದು ತಿಳಿಸುತ್ತಾರೆ.

೭. Buchanan F A ಅವರ A Journey from Madras through the Countries of Mysore ಎಂಬ ಕೃತಿಯಲ್ಲಿ ಪಾಂಚಾಳರನ್ನು ಕುರಿತು ಮಾಹಿತಿ ನೀಡಿದ್ದಾರೆ. ಪಂಚಾಳರು ಶೂದ್ರರಲ್ಲಿಯೇ ಕೆಳವರ್ಗದವರೆಂದು ಬ್ರಾಹ್ಮಣರಿಂದ ಪರಿಗಣಿಸಲ್ಪಟ್ಟಿದ್ದರು ಎಂದು ತಿಳಿಸಿದ್ದಾರೆ. ಪಂಚಾಳರು ನಾವು ವಿಶ್ವಕರ್ಮ, ಕಮಾಚಮ್ಮ, ಕಾಳಿಮಾರರ ಮೂಲದವರೆಂದು ಕರೆದುಕೊಳ್ಳುತ್ತಾರೆಂದು ಬುಕನಾನ್ ಅವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಪಂಚಾಳರಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸುವಾಗ ತುಂಬಾ ಕಷ್ಟಪಡಬೇಕಾಯಿತು. ಇದಕ್ಕೆ ಕಾರಣ ಅವರು ವಾಸಿಸುತ್ತಿರುವ ಪ್ರದೇಶಗಳು ಎಂದು ಹೇಳುತ್ತಾ, ಕಮ್ಮಾರರು ಕರ್ನಾಟಕದಲ್ಲಿ ಕಬ್ಬಿಣವನ್ನು ಹೇಗೆ ತಯಾರಿಸುತ್ತಾರೆ ಎಂಬುದರ ಮಾಹಿತಿಯನ್ನು ನೀಡುತ್ತಾರೆ ಆದರೆ ಈ ಸಮುದಾಯಗಳ ಸಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗು ಸಾಂಸ್ಕೃತಿಕ ಬದುಕಿನ ಬಗೆಗೆ ಹೆಚ್ಚಿನ ಗಮನ ನೀಡದೇ ಇರುವುದು ಕಂಡುಬರುತ್ತದೆ.

ದುಬೆ ಮತ್ತು ಬುಕನಾನ್ ಇವರು ದಕ್ಷಿಣ ಭಾರತದ ಜಾತಿ ಪದ್ಧತಿಯಲ್ಲಿ "ಎಡಗೈ ಮತ್ತು ಬಲಗೈ ಜಾತಿವಿಂಗಡನೆಯ ಬಗ್ಗೆ ಚರ್ಚಿಸುತ್ತಾ ಪಂಚಾಳರು ಎಡಗೈ ಸಮುದಾಯಗಳ ಮುಂದಾಳತ್ವವನ್ನು ವಹಿಸಿದ್ದರು ಎಂದು ಅಭಿಪ್ರಾಯ ಪಡುತ್ತಾರೆ.

೮. ಪಿ. ವಿ ಕುಮಾರಸ್ವಾಮಿ ಅವರ ಕೃತಿ "ಮಧ್ಯಕಾಲಿನ ಕರ್ನಾಟಕದ ಶಾಸನಗಳಲ್ಲಿ ಶಿಲ್ಪಾಚಾರಿಗಳು" ಎಂಬ ಈ ಕೃತಿಯಲ್ಲಿ ಶಾಸನಗಳಲ್ಲಿ ದೊರೆಯುವ ಪಂಚಾಳರನ್ನು ಕುರಿತಾದ ಉಲ್ಲೇಖಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಿದ್ದಾರೆ ಮತ್ತು ಕರ್ನಾಟಕದ ಮಧ್ಯಕಾಲಿನ ಚರಿತ್ರೆಯಲ್ಲಿ ಪಾಂಚಾಳರ ಐದು ವರ್ಗಗಳ ಸ್ಥಿತಿಗತಿಗಳೇನಾಗಿದ್ದವು ಎಂಬುದನ್ನು ಪ್ರಕಟಪಡಿಸಿದ್ದಾರೆ.

೯. Edgar Thurston and Rangachar K ಅವರ Caste and Tribes of South India ಎಂಬ ಕೃತಿಗಳ ಸಂಪುಟಗಳಲ್ಲಿ ವಿಶ್ವಕರ್ಮರ ಬಗೆಗೆ ಉಲ್ಲೇಖಿಸಿದ್ದಾರೆ. "ಪಂಚಾಳ ಅಥವಾ ಕಮ್ಮಾಲಸ"ರೆಂದು ಐದು ವರ್ಗದ ವೃತ್ತಿ ಮೂಲ ಸಮುದಾಯಗಳನ್ನು ವಿಶ್ವಕರ್ಮರೆಂದು ಕರೆಯುತ್ತಾರೆ. ವಿಶ್ವಬ್ರಹ್ಮ, ವಿಶ್ವಕರ್ಮ ಈ ಪದಗಳು "ಕಮ್ಮಾಲನ" ಪದಕ್ಕೆ ಸಮಾನ ಪದಗಳೆಂದು ಹೇಳುತ್ತಾ ಕಮ್ಮಲಾನರೆಂದರೆ ಶಿಲ್ಪಿಗಳ ದೈವವಾದ ವಿಶ್ವಕರ್ಮನ ಐದು ಮುಖಗಳಿಂದ ಹುಟ್ಟಿದ ಐದು ವರ್ಗವರೆಂದು ಪರಿಗಣಿಸಲ್ಪಟ್ಟಿದ್ದಾರೆ ಎಂದು ಹೇಳಿದ್ದಾರೆ. ವಿಶ್ವಕರ್ಮರು ಬ್ರಾಹ್ಮಣರಿಗಿಂತಲೂ ಶ್ರೇಷ್ಠರು ಹಾಗು ವಿಶ್ವ ಬ್ರಾಹ್ಮಣರೆಂದು ಕರೆಯುತ್ತಾರೆಂದು ಉಲ್ಲೇಖಿಸಿದ್ದಾರೆ.

೧೦. Russell and Hiralal ಅವರ The Tribes and Caste of The Central Provines of India ಎಂಬ ಸಂಪುಟಗಳಲ್ಲಿ ಪಾಂಚಾಳರಿಗೆ ಸಂಬಂಧಿಸಿದ ಮಾಹಿತಿ ದೊರೆಯುತ್ತದೆ. ಶ್ರೇಣಿಕೃತ ವ್ಯವಸ್ಥೆಯಲ್ಲಿ ಪಂಚಾಳರಿಗೆ ಇರುವ ಸ್ಥಾನ ಮಾನಗಳ ಬಗ್ಗೆ ಇವರು ಚರ್ಚಿಸಿದ್ದಾರೆ. ಪಾಂಚಾಳರು ನಾವು ಬ್ರಾಹ್ಮಣರಿಗೆ ಸಮಾನರೆಂದು ಹೇಳುತ್ತಿರುವುದನ್ನು

ಮತ್ತು ತಮ್ಮನ್ನು ವಿಶ್ವಬ್ರಾಹ್ಮಣರೆಂದು ಕರೆದುಕೊಂಡಿದ್ದನ್ನು ಗಮನಿಸಿ ಸುಮಾರು ೧೦೩೩ರ ಶಾಸನವೊಂದನ್ನು ಆಧರಿಸಿ ಪಾಂಚಾಳರು ಅತೀ ಕೆಳವರ್ಗದವರಾಗಿದ್ದರು ಹಾಗೂ ಕೇವಲ ಹಳ್ಳಿಗಳಲ್ಲಿ ವಾಸಿಸುತ್ತಿದ್ದರು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಸೈನ್ಯಗಳ ಅವನತಿಯೊಂದಿಗೆ ವ್ಯವಸ್ಥೆಗೆ ಉಪಯುಕ್ತವಾದ ಕೆಲಸಗಳನ್ನು ನಿರ್ವಹಿಸುತ್ತಿದ್ದ 'ಕಮ್ಮಲಾನ್' ಸಮುದಾಯ ಸುಧಾರಣೆಗೆ ಒಳಗಾಗಬಹುದಾಗಿತ್ತು. ಆದರೆ ಮೇಲ್ವರ್ಗದವರಿಂದ ನಿರಂತರವಾಗಿ ಶೋಷಣೆಗೆ ಒಳಗಾದ ಪರಿಣಾಮವಾಗಿಯೇನೋ ಅವರು ತಮ್ಮನ್ನು ತಾವೇ ಅತಿರೇಖವಾಗಿ ವರ್ಣಿಸಿಕೊಳ್ಳುತ್ತಾ ಬ್ರಾಹ್ಮಣಿಕೆಗೆ ಏರಲು ಪ್ರಯತ್ನಿಸಿದರು. ಈ ಕಾರಣಕ್ಕಾಗಿಯೇ ಮೇಲ್ವರ್ಗ ಹಾಗೂ ಕೆಳವರ್ಗಗಳೆರಡರಿಂದಲೂ ತುಂಬಾ ಕುಹಕಕ್ಕೆ ಒಳಗಾಗುವಂತಾಯಿತು ಎಂದು ರೆಸೆಲ್ ತಿಳಿಸುತ್ತಾರೆ.

೧೧. Enthoven R E ಅವರ The Tribes and Caste of Bombay ಎಂಬ ಗ್ರಂಥದಲ್ಲಿ ಬಾಂಬೆ ಪ್ರಾಂತ್ಯದ ವಿಶ್ವಕರ್ಮರು ಆರ್ಥಿಕವಾಗಿ ಹೇಗೆ ಇದ್ದಾರೆ ಎಂಬುದನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ಪಾಂಚಾಳರು ಲೋಹಗಳ ಕೆಲಸಗಾರಿಕೆಯಿಂದ ಸಾಮಾನ್ಯವಾಗಿ ಉತ್ತಮ ಸ್ಥಿತಿವಂತರಾಗಿದ್ದ ಇವರು ಸಹಜವಾಗಿಯೇ ತಮ್ಮನ್ನು ಬ್ರಾಹ್ಮಣರಿಗೆ ಸಮಾನ ಎಂದು ಕರೆದುಕೊಳ್ಳಲು ಪ್ರಯತ್ನಿಸಿರಬೇಕು. ಆ ಕಾಲಕ್ಕೆ ಬ್ರಾಹ್ಮಣರ ಸಾಂಕೇತಿಕ ಉಡುಪುಗಳನ್ನು ಬ್ರಾಹ್ಮಣೇತರರು ಧರಿಸುವುದನ್ನು ಪುರೋಹಿತಶಾಹಿ ವರ್ಗ ವಿರೋಧಿಸುತ್ತಿತ್ತು. ಇದು ಪೇಶ್ವೆಯವರ ಕಾಲದಲ್ಲಿಯೂ ಮುಂದುವರೆಯಿತು. ಆದರೆ ಆರ್ಥಿಕ ಸಫಲತೆಯ ಕಾರಣದಿಂದಾಗಿ ಪುರೋಹಿತಶಾಹಿಗಳ ವಿರೋಧಗಳನ್ನು ಪಾಂಚಾಳರು ನಿರ್ಲಕ್ಷಿಸಿದರು ಎಂದು ತಿಳಿಸುತ್ತಾರೆ. ೧೯೦೯ರಲ್ಲಿ ಧಾರವಾಡದಲ್ಲಿ ಪಾಂಚಾಳನೊಬ್ಬ ಬ್ರಾಹ್ಮಣರಂತಹ ಉಡುಪನ್ನು ಧರಿಸಿದ್ದರ ಕಾರಣದಿಂದ ನರಗುಂದದ ಪ್ರಮುಖನೊಬ್ಬ ಆ ವ್ಯಕ್ತಿಯ ವೃಷ್ಣದ ಮೇಲೆ ಸಲಾಕೆಯಿಂದ ಬರೆ ಹಾಕಿದ್ದನ್ನು ನಾನು ಕಣ್ಣಾರೆ ನೋಡಿದ್ದಾಗಿ ಆ ಪ್ರಾಂತದ ವೃದ್ಧನೊಬ್ಬ ನನ್ನ ಎದುರಿಗೆ ನಡೆದ ಘಟನೆಯನ್ನು ಹೇಳಿದ ಎಂದು ಎಂಥೋವನ್ನರು ಈ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

೧೨. ರಾಜಶೇಖರ ಬಡಿಗೇರ ಅವರ " ಸತ್ಯಾನ್ವೇಷಣೆ" ಎಂಬ ಗ್ರಂಥದಲ್ಲಿ ಒಟ್ಟು ೧೮ ಲೇಖನಗಳಿದ್ದು ಇದರಲ್ಲಿ "ಕಮ್ಮೆಕುಲ ಮತ್ತು ಬಸವಣ್ಣ ವಾಜಿವಂಶ ಮತ್ತು ಕನ್ನಡ ಸಾಹಿತ್ಯ, ಕಮ್ಮೆಕುಲ ಒಂದು ವಿಶ್ಲೇಷಣೆ "ಈ ಲೇಖನ ಪ್ರಮುಖವಾಗಿದೆ. ವಿಶ್ವಕರ್ಮರು ಮತ್ತು ಅವರ ವೃತ್ತಿಗಳಿಗೆ ಸಂಬಂಧಿಸಿದ ಮಾಹಿತಿ ಈ ಕೃತಿಯಲ್ಲಿ ದೊರೆಯುತ್ತದೆ.

೧೩. ಡಾ. ಅರ್.ಬಿ.ಕುಮಾರ್ ಅವರ "ಮುದ್ದೆಕಂಬಾರರು" ಎಂಬ ಗ್ರಂಥ ಉತ್ತರ ಕರ್ನಾಟಕದಲ್ಲಿ ವಾಸಿಸುತ್ತಿರುವ ಮುದ್ದೆ ಕಂಬಾರರ ಸಂಪೂರ್ಣ ವಿವರಗಳನ್ನೊಳಗೊಂಡ ಮಾಹಿತಿಯನ್ನು ನೀಡುತ್ತದೆ. ಈ ಗ್ರಂಥವು ಪಿಎಚ್.ಡಿ. ಪ್ರಬಂಧವಾಗಿದ್ದು ಡಾ. ಅರ್.ಬಿ.ಕುಮಾರ್ ಅವರು

ವ್ಯಾಪಕವಾಗಿ ಕ್ಷೇತ್ರಕಾರ್ಯ ಮಾಡಿ ಮುದ್ದೆಕಂಬಾರರ ಮೂಲ, ಜೀವನ, ಕುಲ, ಬಳಿ, ಜನಸಂಖ್ಯೆ ಆಚರಣೆಗಳು, ಮೌಖಿಕ ಸಾಹಿತ್ಯ, ಆರ್ಥಿಕ ಜೀವನ, ಸಮಸ್ಯೆಗಳು ಮುಂತಾದ ಎಲ್ಲಾ ವಿಷಯಗಳನ್ನು ವಿಶ್ಲೇಷಣೆ ಮಾಡಿದ್ದಾರೆ.

೧೪. ಡಾ.ಗಂಗಾಧರ ದೈವಜ್ಞ ಅವರ "ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ" (ಆರಾಧನಾ ಪರಂಪರೆ)ಎಂಬ ಗ್ರಂಥದಲ್ಲಿ ಶಿರಸಂಗಿ ಕಾಳಮ್ಮನನ್ನು ವಿಶ್ವಕರ್ಮರು ತಮ್ಮ ಕುಲ ದೈವವಾಗಿ ಪಡೆಯಲಿಕ್ಕೆ ಕಾರಣಗಳೇನು. ಯುಗಾದಿಯಲ್ಲಿ ಶಿರಸಂಗಿ ಕಾಳಮ್ಮನ ಉತ್ಸವ, ವಿಶ್ವಕರ್ಮರು ಭಾರತೀಯ ಸಂಸ್ಕೃತಿಗೆ ನೀಡಿದ ಕೊಡುಗೆ ಕುರಿತು ವಿಶ್ಲೇಷಣೆ ಮಾಡಿದ್ದಾರೆ.

೧೫. ಡಾ.ವಾಸುದೇವ ಬಡಿಗೇರ ಅವರ "ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ"(ಚಾರಿತ್ರಿಕ ಅಧ್ಯಯನ) ಎಂಬ ಗ್ರಂಥದಲ್ಲಿ ಶಿರಸಂಗಿಯ ಪ್ರಾಚೀನತೆ, ಕಾಳಮ್ಮ ಈ ಪ್ರದೇಶದಲ್ಲಿ ನೆಲೆಗೊಳ್ಳಲಿಕ್ಕೆ ಆದ ಕಾರಣಗಳು, ಈ ಪ್ರದೇಶದಲ್ಲಿರುವ ಆದಿಮಾನವನ ನೆಲೆಗಳು, ಕಬ್ಬಿಣ ತಯಾರಿಕೆ ಈ ಪರಿಸರದಲ್ಲಿ ಹೇಗಿತ್ತು ಮುಂತಾದ ವಿಷಯಗಳನ್ನು ಪ್ರಸ್ಥಾಪಿಸಿ ವಿಶ್ಲೇಸಿದ್ದಾರೆ.

೧೬. ಡಾ. ವಾಸುದೇವ ಬಡಿಗೇರ ಅವರ "ಸಂಡೂರು ಪರಿಸರದ ಕಾರ್ತಿಕೇಯ ತಪೋವನ " ಎಂಬ ಗ್ರಂಥದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿಯ ಆದಿಮಾನವನ ನೆಲೆಗಳು, ಕಬ್ಬಿಣ ತಯಾರಿಕೆ ಸಂಬಂಧಿಸಿದ ಕುರುಹುಗಳು ಮತ್ತು ಕಾರ್ತಿಕೇಯ ತಪೋವನದ ಬಗ್ಗೆ ವಿವರವಾದ ಮಾಹಿತಿಗಳನ್ನು ನೀಡಿದ್ದಾರೆ.

ಈ ಸಂಶೋಧನಾ ಪ್ರಬಂಧದಲ್ಲಿ ಒಟ್ಟು ಆರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಕಮ್ಮಾರರ ಮೂಲವನ್ನು ಕುರಿತು ಚರ್ಚಿಸಲಾಗಿದೆ. ಕಮ್ಮಾರರು ಮೂಲತಃ ಕರ್ನಾಟಕದರು. ಕೊಳ್ಳೆಗಾಲ ಹಾಗೂ ಮಂಗಳೂರು ಜಿಲ್ಲೆಯಲ್ಲಿಯ ಕೆಲ ಬೆರಳೆಣಿಕೆ ಕಮ್ಮಾರರ ಕುಟುಂಬಗಳು ತಮಿಳುನಾಡು ಮತ್ತು ಕೇರಳದಿಂದ ವೃತ್ತಿಯನ್ನಾರಿಸಿಕೊಂಡು ಈ ಪ್ರದೇಶಗಳಿಗೆ ವಲಸೆ ಬಂದಿವೆ. ಈ ಕಮ್ಮಾರು ಮಾತೃದೇವತಾ ಆರಾಧಕರು ಮತ್ತು ದ್ರಾವಿಡ ಸಂಸ್ಕೃತಿಯವರು. ಕಮ್ಮಾರರ ಮೂಲವನ್ನು ಕುರಿತು ಅವರಲ್ಲಿ ಪ್ರಚಲಿತವಿರುವ ಪುರಾಣ, ಕಥೆ ಮತ್ತು ಐತಿಹ್ಯಗಳ ಮೂಲಕ ಇಲ್ಲಿ ಚರ್ಚಿಸಲಾಗಿದೆ.

ಭೌಗೋಳಿಕ ಪರಿಸರ ಎಂಬ ಉಪಶೀರ್ಷಿಕೆಯಲ್ಲಿ ಕಮ್ಮಾರರ ಭೌಗೋಳಿಕ ನೆಲೆಗಳ ಬಗ್ಗೆ ವಿವರಿಸಲಾಗಿದೆ. ಸಾಮಾನ್ಯವಾಗಿ ಕಮ್ಮಾರರು ಪ್ರತಿಯೊಂದು ಗ್ರಾಮದಲ್ಲಿ ವಾಸಿಸುತ್ತಿರುವುದು ಕಂಡು ಬರುತ್ತದೆ. ಕೆಲ ಪ್ರದೇಶಗಳಲ್ಲಿ ಕಮ್ಮಾರರು ಊರ ಹೊರಗೆ ತಮ್ಮ ಮನೆಗಳನ್ನು ಮತ್ತು ವೃತ್ತಿಗೆ ಸಂಬಂಧಿಸಿದ ಗುಡಿಸಲುಗಳನ್ನು ರಚಿಸಿಕೊಂಡಿದ್ದಾರೆ ಮತ್ತೆ ಕೆಲವರು ಊರಿನ ಒಳಗೆಯೇ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

ಜನಸಂಖ್ಯೆ ಎಂಬ ಉಪಶೀರ್ಷಿಕೆಯಲ್ಲಿ ಕಮ್ಮಾರರ ಜನಸಂಖ್ಯೆಯ ವಿವರ ನೀಡಲಾಗಿದೆ. ೧೯೯೧ ರ ಜನಗಣತಿಯಲ್ಲಿ ಮಂಗಳೂರು, ಉಡುಪಿ ಮತ್ತು ಕೊಳ್ಳೆಗಾಲದಲ್ಲಿ ಕಮ್ಮಾರರ ಜನಸಂಖ್ಯ ಒಟ್ಟು ೬೫೯ ಇದರಲ್ಲಿ ೩೨೧ ಪುರುಷರು ಹಾಗೂ ೩೦೮ ಮಹಿಳೆಯರು ಎಂದು ದಾಖಲಿಸಲಾಗಿದೆ.

ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೪೪೩ ಜನಸಂಖ್ಯೆ ಇದ್ದು, ಇದರಲ್ಲಿ ೨೨೦ ಪುರುಷರು, ೨೨೩ ಮಹಿಳೆಯರಿರುವುದು ದಾಖಲಾಗಿದೆ. ನಗರ ಪ್ರದೇಶದಲ್ಲಿ ಒಟ್ಟು ೧೮೬ ಜನಸಂಖ್ಯ ಇದ್ದು ಇದರಲ್ಲಿ ೧೦೧ ಪುರುಷರು, ೮೫ ಮಹಿಳೆಯರಿರುವ ಬಗ್ಗೆ ಮಾಹಿತಿ ದೊರೆಯುತ್ತಿದೆ.

೨೦೦೧ರ ಜನಗಣತಿಯ ಪ್ರಕಾರ ಕಮ್ಮಾರರ ಒಟ್ಟು ಜನಸಂಖ್ಯೆ ೩೮ ಎಂದು ದಾಖಲಿಸಲಾಗಿದೆ. ಇದರಲ್ಲಿ ೨೦ ಪುರುಷರು ೧೮ ಮಹಿಳೆಯರಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೩೧ ಜನಸಂಖ್ಯೆ ಇದ್ದು, ಇದರಲ್ಲಿ ೧೩ ಪುರುಷರು ಹಾಗೂ ೧೮ ಮಹಿಳೆಯರು ದಾಖಲಾಗಿರುವ ಬಗ್ಗೆ ಮಾಹಿತಿ ದೊರೆಯುತ್ತದೆ.

ಜನಗಣತಿಯ ಸಂದರ್ಭದಲ್ಲಿ ಉಡುಪಿ, ಮಂಗಳೂರು ಹಾಗೂ ಕೊಳ್ಳೆಗಾಲದ ಕಮ್ಮಾರರ ಕುಟುಂಬಗಳ ಬಗ್ಗೆ ಸರಿಯಾದ ದಾಖಲೆ ಮಾಡಿಲ್ಲ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದಿದೆ. ಕೇವಲ 'ಕಮ್ಮಾರ' ಎಂದು ಹೇಳಿದವರನ್ನು ಮಾತ್ರ ಪರಿಶಿಷ್ಟ ಪಂಗಡದಲ್ಲಿ ಸೇರಿಸಿ 'ವಿಶ್ವಕರ್ಮ ಕಮ್ಮಾರ' ಎಂದು ಹೇಳಿದವರನ್ನು ಇತರೆ ಹಿಂದುಳಿದ ವರ್ಗದಲ್ಲಿ ಸೇರಿಸಿದ್ದಾರೆ. ನಾನು ಈ ಅಧ್ಯಯನಕ್ಕೆ ಕೊಳ್ಳೆಗಾಲ ತಾಲೂಕಿನ ೪೭ ಕುಟುಂಬಗಳ ಕ್ಷೇತ್ರಕಾರ್ಯ ಮಾಡಿದಾಗ ಅಲ್ಲಿ ಒಟ್ಟು ೧೯೭ ಜನಸಂಖ್ಯೆ ಇದ್ದು, ಇದರಲ್ಲಿ ೧೦೩ ಪುರುಷರು ಹಾಗೂ ೯೪ ಮಹಿಳೆಯರು ಇರುವುದು ಕಂಡು ಬರುತ್ತದೆ. ಉಡುಪಿ ಹಾಗೂ ಮಂಗಳೂರು ಜಿಲ್ಲೆಯ ೧೦೦ ಕುಟುಂಬಗಳಲ್ಲಿ ಒಟ್ಟು ೪೪೧ ಜನಸಂಖ್ಯೆ ಇದ್ದು ಇದರಲ್ಲಿ ೨೫೯ ಪುರುಷರು ಹಾಗೂ ೧೮೨ ಮಹಿಳೆಯರು ಇರುವ ಬಗ್ಗೆ ಮಾಹಿತಿ ದೊರೆಯುತ್ತದೆ.

ಆರಾಧನಾ ಕೇಂದ್ರಗಳು ಎಂಬ ಉಪಶೀಷಿಕೆಯಲ್ಲಿ ಕಮ್ಮಾರರು ಆರಾಧಿಸುತ್ತಿರುವ ದೈವಗಳ ಬಗೆಗೆ ಮಾಹಿತಿಯನ್ನು ನೀಡಲಾಗಿದೆ. ಕಮ್ಮಾರರು ಮಾತೃದೇವತಾ ಆರಾಧಕರು. ಇವರು ಬೆಂಕಿಯನ್ನೇ ಮಾತೃದೇವತೆಯಾಗಿ ಕಾಳಿಯಾಗಿ ಆರಾಧಿಸುತ್ತಾರೆ. ಇವರ ಆರಾಧನಾ ಕೇಂದ್ರಗಳನ್ನು ಕುರಿತು ವಿವರವಾದ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

ಪೌರಾಣಿಕ ಹಿನ್ನೆಲೆ ಎಂಬ ಈ ಉಪಶೀರ್ಷಿಕೆಯಲ್ಲಿ ಕಮ್ಮಾರ ಪದದ ನಿಷ್ಪತ್ತಿಯಿಂದ ಕಮ್ಮಾರರ ಪೌರಾಣಿಕ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗಿದೆ.

ಸಾಮಾಜಿಕ ಜೀವನ ಎಂಬ ಮೂರನೆಯ ಅಧ್ಯಾಯದಲ್ಲಿ ಕಮ್ಮಾರರ ಸಾಮಾಜಿಕ ಜೀವನ, ಹುಟ್ಟು, ನಾಮಕರಣ, ಚೌಲ, ಪ್ರೌಢ ಸಂಸ್ಕಾರ, ಋತುಮತಿ, ಮದುವೆ, ಸಾವು, ಸಾವಿನ ನಂತರದ ಆಚರಣೆಗಳು, ಕೌಟುಂಬಿಕ ಪದ್ಧತಿ, ಬೆಡಗುಗಳು, ರಕ್ತಸಂಬಂಧ, ಶಾರೀರಿಕ ಲಕ್ಷಣಗಳು, ಅಹಾರ ಪದ್ಧತಿ, ಸಾಮಾಜಿಕ ಸಮಸ್ಯೆಗಳು, ನ್ಯಾಯಪದ್ದತಿ, ಒಳಾಡಳಿತ ವ್ಯವಸ್ಥೆಯಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಕಮ್ಮಾರರ ಆಚರಣೆಗಳು ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಕಮ್ಮಾರರ ಸಮುದಾಯದಲ್ಲಿ ಕಂಡು ಬರುವ ವಾಷಿಕಾವರ್ತನ ಆಚರಣೆಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಮೂಲ

ಮಾನವ ಪ್ರಕೃತಿಯನ್ನು ಎಂದಿನಿಂದ ಆರಾಧಿಸಲು ಪ್ರಾರಂಭಿಸಿದನೋ ಅಂದಿನಿಂದಲೇ ಅನೇಕ ಆಚರಣೆಗಳು ಹುಟ್ಟಿಕೊಂಡವು. ಈ ಆಚರಣೆಗಳೆಲ್ಲವೂ ಮನುಷ್ಯನ ಸಂತೋಷಕ್ಕಾಗಿ ಮತ್ತು ಭಯ ನಿವಾರಣೆಗಾಗಿ. ಮತ್ತು ಅವನು ಆರಾಧಿಸುವ ದೈವವನ್ನು ಒಲಿಸಿಕೊಳ್ಳುವುದಕ್ಕಾಗಿ. ಇಂತಹ ಅನೇಕ ಆಚಣೆಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಕಮ್ಮಾರರು ತಮ್ಮ ಸಮುದಾಯದಲ್ಲಿ ಆಚರಿಸುವ ಆಚರಣೆಗಳನ್ನು ಅಲಿಖಿತ ಶಾಸನಬದ್ಧ ಆಚರಣೆಗಳಾಗಿ ಆಚರಿಸುತ್ತಾ ಬಂದಿದ್ದಾರೆ. ಇವುಗಳಲ್ಲಿ ಕೆಲವು ಆಧುನಿಕತೆಯ ಪ್ರಭಾವದಿಂದ ಹೊಸ ರೂಪ ಪಡೆದುಕೊಂಡಿವೆ. ಇವುಗಳನ್ನು ವಾರ್ಷಿಕವರ್ತನ ಆಚರಣೆಗಳು ಮತ್ತು ದೈವ ಹಾಗೂ ಧರ್ಮಕ್ಕೆ ಸಂಬಂಧಿಸಿದ ಆಚರಣೆಗಳೆಂದು ವಿಭಾಗಿಸಿಕೊಂಡು ವಿಶ್ಲೇಷಿಸಲಾಗಿದೆ.

ಕಮ್ಮಾರರು ಮಾತೃ ಪ್ರಧಾನ ಸಂಸ್ಕೃತಿಯಲ್ಲಿಯೇ ಗುರುತಿಸಿಕೊಂಡವರು. ಇವರಲ್ಲಿ ಕುಲದೈವವಾಗಿ ಕಾಳಿಯನ್ನು ವೃತ್ತಿ ದೈವವಾಗಿ ವಿಶ್ವಕರ್ಮನನ್ನು ಆರಾಧಿಸುತ್ತಿರುವುದು ಕಂಡು ಬರುತ್ತದೆ. ಕಮ್ಮಾರರು ಪ್ರತಿ ಹುಣ್ಣಿಮೆ, ಅಮಾವಾಸ್ಯೆಗಳನ್ನು ವಿಶೇಷವಾಗಿ ಆಚರಿಸುವುದುಂಟು. ಕಮ್ಮಾರರಿಗೆ ಯುಗಾದಿ ವಿಶೇಷವಾದ ಹಬ್ಬವಾಗಿದೆ. ಹಿಂದೂ ಧರ್ಮದಲ್ಲಿ ಆಚರಿಸುವ ಎಲ್ಲ ಹಬ್ಬಗಳನ್ನು ಆಚರಿಸುತ್ತಾರೆ. ಇವುಗಳನ್ನು ಕುರಿತು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ವ್ಯವಸ್ಥೆ ಎಂಬ ಈ ಐದನೆಯ ಅಧ್ಯಾಯದಲ್ಲಿ ಕಮ್ಮಾರರ ಸಮುದಾಯದ ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ವ್ಯವಸ್ಥೆ ಹಿಂದೆ ಹೇಗಿತ್ತು, ಈಗ ಅವುಗಳ ಸ್ಥಿತಿಗತಿಗಳಲ್ಲಿ ಯಾವ ಬದಲಾವಣೆಗಳಾಗಿವೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಆಧುನಿಕ ಯಂತ್ರಗಳ ಬರಾಟೆಯಲ್ಲಿ ಕಮ್ಮಾರರ ಪಾರಂಪರಿಕ ವೃತ್ತಿಗಳು ಮಾಯವಾಗುತ್ತಿವೆ ಮತ್ತು ಅವರು ತಮ್ಮ ಮೂಲವೃತ್ತಿಯನ್ನು ತ್ಯಜಿಸಿ ಬೇರೆ ಬೇರೆ ವೃತ್ತಿಗಳನ್ನು ಹೇಗೆ ಅನುಸರಿಸುತ್ತಿದ್ದಾರೆ. ಮತ್ತೆ ಕೆಲವರು ಕಮ್ಮಾರಿಕೆಯಲ್ಲಿಯೇ ಅಸ್ಥಿತ್ವ ಕಂಡುಕೊಳ್ಳುತ್ತಿರುವವರು ಅಧುನಿಕತೆಯನ್ನು ತಮ್ಮ ವೃತ್ತಿಗಳಲ್ಲಿ ಹೇಗೆ ಅಳವಡಿಸಿಕೊಂಡಿದ್ದಾರೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವ ಈ ಸಮುದಾಯದಲ್ಲಿ ಆಧುನಿಕತೆಯ ಪ್ರಭಾವದಿಂದ ಇವರಲ್ಲಿ ಇಂದು ಶೈಕ್ಷಣಿಕ ಸ್ಥಾನಮಾನಗಳ ಸ್ಥಿತಿಗತಿಗಳು ಹೇಗಿವೆ ಎಂಬುದನ್ನು ಇಲ್ಲಿ ಕಂಡು ಕೊಳ್ಳಲಾಗಿದೆ. ಕಮ್ಮಾರರ ಕುಟುಂಬಗಳಲ್ಲಿ ಪ್ರಾಥಮಿಕ, ಪ್ರೌಢ, ಪದವಿ ಪೂರ್ವ, ಪದವಿ ಇತರೆ ಶಿಕ್ಷಣ ಪಡೆದವರ ಬಗ್ಗೆ ಕೋಷ್ಟಕಗಳನ್ನು ಈ ಅಧ್ಯಯನದಲ್ಲಿ ನೀಡಲಾಗಿದೆ. ಶಿಕ್ಷಣ ಇಂದು ಸಮುದಾಯಗಳಲ್ಲಿ ಸ್ಥಿತ್ಯಂತರಗಳನ್ನು ತರುವ ಅತ್ಯಂತ ಪರಿಣಾಮಕಾರಿ ಮಾಧ್ಯಮವಾಗಿದೆ. ಈ ಪ್ರಭಾವ ಕಮ್ಮಾರ ಸಮುದಾಯದ ಮೇಲೆ ಹೇಗೆ ಪರಿಣಾಮ ಬೀರಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಕಮ್ಮಾರರು ರಾಜಕೀಯವಾಗಿ ತೀರಾ ಹಿಂದುಳಿದಿದ್ದಾರೆ. ಇವರಲ್ಲಿ ನಾಯಕತ್ವದ ಕೊರತೆ ಇದೆ. ಕಮ್ಮಾರರಲ್ಲಿ ಇಬ್ಬರು ಮಾತ್ರ ಗ್ರಾಮ ಪಂಚಾಯಿತಿ ಸದಸ್ಯರಾಗಿರುವ ಬಗ್ಗೆ ತಿಳಿಯುತ್ತದೆ.

ರಾಜಕೀಯವಾಗಿ ತಮ್ಮನ್ನು ಗುರುತಿಸಿಕೊಳ್ಳಬೇಕು ಎಂಬ ಆಕಾಂಕ್ಷೆ ಇವರಲ್ಲಿ ಏಕೆ ಕಂಡುಬರುತ್ತಿಲ್ಲ ಎಂಬುದನ್ನು ವಿವರಿಸಲಾಗಿದೆ.

ಕಮ್ಮಾರರ ಮೌಖಿಕ ಸಾಹಿತ್ಯ ಎಂಬ ಆರನೆಯ ಅಧ್ಯಾಯದಲ್ಲಿ ಕಮ್ಮಾರರಲ್ಲಿ ಪ್ರಚಲಿತವಿರುವ ಜಾನಪದ ಸಾಹಿತ್ಯದ ಬಗೆಗೆ ವಿವರಿಸಲಾಗಿದೆ. ಮಂಗಳೂರು ಮತ್ತು ಉಡುಪಿ ಜಿಲ್ಲೆಗಳಲ್ಲಿರುವ ಕೆಲ ಕಮ್ಮಾರರ ಕುಟುಂಬಗಳ ಮಾತೃಭಾಷೆ ಕನ್ನಡ ಮತ್ತು ತುಳು ಆಗಿರುವುದು ಕಂಡು ಬರುತ್ತದೆ. ಕೊಳ್ಳೆಗಾಲದಲ್ಲಿ ಕನ್ನಡ ಮತ್ತು ತಮಿಳು ಮಾತೃ ಭಾಷೆಯಾಗಿರುವುದು ಗೋಚರಿಸುತ್ತದೆ. ಪ್ರಾದೇಶಿಕವಾಗಿ ಬಳಕೆಯಾಗುತ್ತಿರುವ ಭಾಷೆಯನ್ನು ಕಮಾರರು ಬಳಸುತ್ತಿದ್ದಾರೆ.

ಕಮ್ಮಾರರ ಸಮುದಾಯದಲ್ಲಿ ಕಥೆ, ಗಾದೆ, ಹಾಡು, ಐತಿಹ್ಯ ಪುರಾಣ, ಒಗಟು ಪ್ರಚಲಿತದಲ್ಲಿವೆ. ಅನೇಕ ಕಲಾವಿದರು ಯಕ್ಷಗಾನ ಪ್ರದರ್ಶನದಲ್ಲಿ ಭಾಗವತರಾಗಿ ನಟರಾಗಿ ಸೇವೆ ಸಲ್ಲಿಸಿರುವ ಬಗ್ಗೆ ಮಾಹಿತಿ ದೊರೆತಿದೆ. ಕಮ್ಮಾರರಲ್ಲಿ ಪ್ರಚಲಿತವಿರುವ ಮೌಖಿಕ ಸಾಹಿತ್ಯವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಆ ಪ್ರದೇಶದಲ್ಲಿ ಪ್ರಚಲಿತವಿರುವ ಕಥೆ, ಗಾದೆ, ಹಾಡು, ಒಗಟುಗಳ ಇತರೆ ಸಮುದಾಯಗಳಲ್ಲೂ ಕಂಡು ಬರುತ್ತದೆ. ಅವುಗಳನ್ನೆಲ್ಲಾ ಸಂಗ್ರಹಿಸಿ ವಿಶೇಷಿಸಲಾಗಿದೆ.

ಉಪಸಂಹಾರದಲ್ಲಿ ನಾನು ಕೈಗೊಂಡಿರುವ ಈ ಅಧ್ಯಯನದ ಫಲಿತಗಳನ್ನು ನೀಡಿದ್ದೇನೆ.

ಅನುಬಂಧದಲ್ಲಿ ಗ್ರಂಥಸೂಚಿ, ಅಧ್ಯಯನಕ್ಕೆ ಪೂರಕವಾದ ಛಾಯಾಚಿತ್ರಗಳನ್ನು, ಮಾಹಿತಿದಾರರ ವಿವರಗಳನ್ನು ನೀಡಲಾಗಿದೆ.

## ಕಮ್ಮಾರರ ಮೂಲ

### ೨.೧ ಕಮ್ಮಾರರ ಮೂಲ :

ಕಮ್ಮಾರ ಇದು ವೃತ್ತಿಯಿಂದ ಬಂದಿರುವ ಹೆಸರು. ಸಾಮಾನ್ಯವಾಗಿ ಇಲ್ಲಿಯ 'ಕ' ಅಕ್ಷರ ಕಬ್ಬಿಣವನ್ನು ಸೂಚಿಸಿದರೆ ಮಾರ ಎಂದರೆ ತಯಾರಿಸುವವ ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ. ಕಬ್ಬಿಣದ ವಸ್ತುಗಳನ್ನು ತಯಾರಿಸುವವನೇ ಕಮ್ಮಾರ. ಇಂಗ್ಲೀಷಿನಲ್ಲಿ Black smith ಎಂದು ಕರೆಯುತ್ತಾರೆ. ಕಬ್ಬಿಣ ಕಪ್ಪು ಬಣ್ಣದ್ದಾಗಿರುವುದರಿಂದ Black smith ಎಂದು ಕರೆದಿರಬಹುದು. ಕಮ್ಮಾರ ವೃತ್ತಿಯನ್ನು ಮಾಡುವವನಿಗೆ 'ಕುಲುಮೆಕಾರ, ಆಚಾರಿ' ಎಂಬ ಹೆಸರುಗಳಿಂದ ಮಂಗಳೂರು ಉಡುಪಿ ಜಿಲ್ಲೆಗಳಲ್ಲಿ ಕರೆಯುವುದುಂಟು.

ಕಬ್ಬಿಣಕ್ಕೆ ತುಳು ಭಾಷೆಯಲ್ಲಿ "ಕರಿದು ಪೊನ್" ಎಂದು ಕರೆಯುವರು. ಕರಿದು ಪೊನ್ ಕಭ್ರೋರ್ಣನ ಆಗಿ "ಕರ್ಬ" ಎಂದು ಉಳಿದಿದೆ. ತುಳು ಪಾಡ್ದನಗಳಲ್ಲಿ ಕಮ್ಮಾರನನ್ನು "ಕಡ್ತಲೆಗಾರ, ಕಬ್ಬೊಟ್ಟಿಗಾರ' ಎಂದು ಕರೆದಿದ್ದಾರೆ ಕಮ್ಮಾರಿಕೆಯ ವೃತ್ತಿಯನ್ನು ಉತ್ತರ ಭಾರತದಲ್ಲಿ ಲೋಹಾರ, ಲುಹಾರ' ಎಂದು ಕರೆಯುವುದುಂಟು. ತಮಿಳು ಭಾಷೆಯಲ್ಲಿ ಕಮ್ಮಾರನಿಗೆ "ಕರುಮಕಾನ್, ಕರುಮಾನ್, ಕಮ್ಮಾಲನ್" ಎನ್ನುವರು. ಮಲೆಯಾಳದಲ್ಲಿ "ಕಮ್ಮಾಲನ್" ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದ ಕೆಲ ಪ್ರದೇಶಗಳಲ್ಲಿ ಕಮ್ಮಾರರನ್ನು ಆಯಗಾರರೆಂದು ಕರೆಯುತ್ತಾರೆ. ವೇದ ಸಂಹಿತೆಗಳಲ್ಲಿ 'ಕಮ್ಮಾರ' ಎಂದರೆ ಶಿಲ್ಪಿ, ಕಮ್ಮಾರನು ಬೆಂಕಿಯಿಂದ ಖನಿಜಗಳನ್ನು ಕರಗಿಸುತ್ತಿದ್ದುದರಿಂದ ಇವರನ್ನು 'ಧಮಾತೃ' ಎಂದು ಕರೆಯಲಾಗಿದೆ

ಕಮ್ಮಾರಿಕೆ ವೃತ್ತಿ ಅತ್ಯಂತ ಕಠಿಣವಾದದ್ದು. ಈ ವೃತ್ತಿಯನ್ನು ಕೈಗೊಳ್ಳುವವರೂ ಸಹ ಕಬ್ಬಿಣದ ಹಾಗೆ ಬಲಿಷ್ಠರಾಗಿರಬೇಕು ಮತ್ತು ಒರಟಾಗಿರಬೇಕು. ಅಂದರೆ ಮಾತ್ರ ಆ ಕಬ್ಬಿಣವನ್ನು ಬೇಕಾದ ಹಾಗೆ ಬಳಸಿಕೊಂಡು ವಿವಿಧ ರೀತಿಯ ಉಪಕರಣಗಳನ್ನು ಸಿದ್ಧಪಡಿಸಬಹುದು.

ಕಮ್ಮಾರಿಕೆಯ ವೃತ್ತಿಯನ್ನು ಅನುಸರಿಸಿಕೊಂಡು ಬಂದಿರುವ ಈ ಸಮುದಾಯದ ಮೂಲ ವೇದಕಾಲಕ್ಕಿಂತಲೂ ಹಿಂದೆ ಹೋಗುತ್ತದೆ. ಆದಿಮಾನವ ಬೇಟೆ ಹಾಗೂ ಕಾಡಿನಲ್ಲಿರುವ ಗೆಡ್ಡೆ-

ಗೆಣಸು, ಹಣ್ಣು–ಹಂಪಲಗಳಿಗಾಗಿ ಅಲೆದಾಡುತ್ತಲೇ ಇದ್ದ. ಆಹಾರ ಸಂಗ್ರಹಣೆಗಾಗಿ ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಆದಿಮಾನವ ಪಟ್ಟ ಪಾಡು ಅಷ್ಟಿಷ್ಟಲ್ಲ. ಈ ಹಂತದಲ್ಲಿ ಆದಿಮಾನವ ಅನೇಕ ದುರಂತಗಳನ್ನು, ಸವಾಲುಗಳನ್ನು ಎದುರಿಸುತ್ತಾ ಬದುಕನ್ನು ಕಟ್ಟಿಕೊಂಡು ಬಂದವ. ಬೇಟೆ ಹಂತದಲ್ಲಿದ್ದ ಆದಿಮಾನವನಿಗೆ ಆಹಾರ ಹುಡುಕುವುದೆ  ಮುಖ್ಯ ಕೆಲಸವಾಗಿತ್ತು. ಈ ಸಂದರ್ಭದಲ್ಲಿ ಬೇಟೆಯನ್ನೇ ತನ್ನ ಮೂಲ ವೃತ್ತಿಯನ್ನಾಗಿಸಿಕೊಂಡಿದ್ದ. ಎಷ್ಟೋ ಶತಮಾನಗಳವರೆಗೆ ಗಡ್ಡೆ ಗೆಣಸು ಹುಡುಕುವ ಹಾಗೂ ಪ್ರಾಣಿ ಬೇಟೆಯಾಡುವುದರಲ್ಲಿಯೇ ಕಾಲ ಕಳೆದ. ಕಾಲಾನಂತರ ಆದಿಮಾನವ ಆಹಾರ ಉತ್ಪಾದನೆಯನ್ನು ಕಂಡುಕೊಂಡ. ಆ ಕಾಲಘಟ್ಟವನ್ನೇ ಅವನ ಬದುಕಿನ **ಸುವರ್ಣಕಾಲ** ಎಂದು ಕರೆಯಬಹುದು.

ಆದಿಮಾನವ ಕೃಷಿಯ ಮೂಲಕ ಆಹಾರ ಉತ್ಪಾದನೆಯನ್ನು ಕಂಡುಕೊಂಡಂತೆ ಕಬ್ಬಿಣವನ್ನು ಕಂಡುಕೊಂಡ. ಬೆಂಕಿಯ ಉಪಯೋಗದಿಂದ ಕಬ್ಬಿಣವನ್ನು ಅವಿಷ್ಕರಿಸಿ ಕೃಷಿಗೆ ಹಾಗೂ ಬೇಟೆಗೆ ಬೇಕಾದ ಉಪಕರಣಗಳನ್ನು ಸಿದ್ಧಪಡಿಸಿಕೊಳ್ಳತೊಡಗಿದ. ವನ್ಯಮೃಗಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ಕಬ್ಬಿಣದಿಂದ ಈಟಿ, ಭರ್ಜಿಯಂತಹ ಆಯುಧಗಳನ್ನು ತಯಾರಿಸಿಕೊಂಡ. ಆದಿಮಾನವನ ಕೃಷಿ ಪದ್ಧತಿಯ ಅವಿಷ್ಕಾರಕದ ಸಂದರ್ಭದಲ್ಲಿ ಕಬ್ಬಿಣ ಅತ್ಯಂತ ಪ್ರಮುಖ ಪಾತ್ರ ವಹಿಸಿತು ಎಂದು ಹೇಳಬೇಕಾಗುತ್ತದೆ.

ಮೂಲಮಾನವ ಕೃಷಿ ಹಾಗು ಕಬ್ಬಿಣವನ್ನು ಕಂಡುಕೊಂಡ ಮೇಲೆ ಅವನಿಗೆ ಹೊಸದೊಂದು ಜಗತ್ತು ಸೃಷ್ಟಿಸಲು ಅನುಕೂಲವಾಯಿತು. ಈ ಕಾಲಘಟ್ಟಕ್ಕೆ ಕಬ್ಬಿಣದ ಮೂಲಕ ಅನೇಕ ವಸ್ತುಗಳನ್ನು ತಯಾರಿಸುವ ವರ್ಗ ಬೆಳೆಯಿತು. ಹೀಗಾಗಿ ಕಮ್ಮಾರಿಕೆ ವೃತ್ತಿ ಮತ್ತು ಅದನ್ನು ಅನುಸರಿಸುವ ಸಮುದಾಯದವರು ಅತ್ಯಂತ ಪ್ರಾಚೀನರು ಎಂಬುದನ್ನು ಇಲ್ಲಿ ಗಮನಿಸಬೇಕಾಗುತ್ತದೆ.

ಪ್ರಾಗಿತಿಹಾಸ ಕಾಲದಲ್ಲಿಯೇ ಮಾನವನು ಕಬ್ಬಿಣ ಅದಿರನ್ನು ಕಂಡುಕೊಂಡು ಅದನ್ನು ಸಂಸ್ಕರಿಸಿ ಅನೇಕ ವಸ್ತುಗಳನ್ನು ಸಿದ್ಧಪಡಿಸುವ ಕಲೆಯನ್ನು ಕಂಡುಕೊಂಡಿದ್ದ ಎಂಬುದನ್ನು ತಿಳಿಯಬಹುದು. ಬಳ್ಳಾರಿ ಜಿಲ್ಲೆಯ "ಕುಡುತಿನಿ ಮತ್ತು ಕಪಗಲ್ಲುಗಳಲ್ಲಿರುವ ಶಿಲಾ–ತಾಮ್ರ ಹಾಗೂ ಬೃಹತ್ ಶಿಲಾ ಕಬ್ಬಿಣಯುಗಕ್ಕೆ ಸಂಬಂಧಿಸಿದ ಬೂದಿ ದಿಬ್ಬಗಳು ಹಸುಗಳ ಸಗಣಿಯನ್ನು ಸುಟ್ಟಿದ್ದರಿಂದ ನಿರ್ಮಾಣವಾದವು ಎಂದು ತಿಳಿದು ಬಂದಿದೆ."[೧] ಈ ಬೂದಿ ದಿಬ್ಬಗಳಲ್ಲಿ ಮನುಷ್ಯ, ಪ್ರಾಣಿಗಳ ಮೂಳೆಗಳು, ಮಡಿಕೆಗಳು, ತಾಮ್ರ, ಕಬ್ಬಿಣದ ಉಪಕರಣಗಳು ದೊರೆತಿವೆ."[೨] ಈ ಬೂದಿ ದಿಬ್ಬಗಳ ಉಗಮದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪಾಯಗಳಿವೆ. ಮೆಂಕೆಂಜಿಯವರು ಈ ಪ್ರದೇಶಗಳಲ್ಲಿರುವ ಬೂದಿ ದಿಬ್ಬಗಳ ಬಗ್ಗೆ ಅಧ್ಯಯನ ಮಾಡಿ ಸ್ಥಳೀಯ ಕಥೆಗಳನ್ನು ಸಂಗ್ರಹಿಸಿದರು. "ದೊಡ್ಡ ದೊಡ್ಡ ರಾಕ್ಷಸರನ್ನು ಮತ್ತು ರಾಮಾಯಣ ಮಹಾಭಾರತ ಕಾವ್ಯಗಳಲ್ಲಿಯ ವಾಲಿ ಹಿಡಿಂಬಾಸುರ ಮುಂತಾದ ಪ್ರಮುಖ ವ್ಯಕ್ತಿಗಳನ್ನು ಸುಟ್ಟದ್ದರಿಂದ ಈ ಬೂದಿ ದಿಬ್ಬಗಳು ಉಳಿದುಕೊಂಡವು" ಎಂಬ ನಂಬಿಕೆಗಳಿವೆ. ನ್ಯೂ ಬೊಲ್ಡ್ ಎಂಬುವವರು ೧೮೪೩ ರಲ್ಲಿ ಮೊದಲು ಕಪಗಲ್ಲಿನಲ್ಲಿ ಉತ್ಖನನ ನಡೆಸಿ ಇವು

ಮಾನವನ ಔದ್ಯೋಗಿಕ ಕೇಂದ್ರವಾಗಿರದೆ ಪ್ರಾಯಶಃ ಶವಸಂಸ್ಕಾರ ವಿಧಿಗೆ ಸಂಬಂಧಿಸಿರಬೇಕೆಂಬ ನಿರ್ಣಯಕ್ಕೆ ಬಂದರು.

"ಕ್ರಿಶ ೧೯೩೬ರಲ್ಲಿ ಯೂಜ್ದಾನಿಯವರು ಕಪಗಲ್ಲಿನಲ್ಲಿರುವ ಬೂದಿ ದಿಬ್ಬಗಳನ್ನು ಪರಿಶೀಲಿಸಿ ಚಿನ್ನ ಹಾಗು ಲೋಹಗಳನ್ನು ತಯಾರಿಸುವ ಸಂದರ್ಭದಲ್ಲಿ ಹಾಗೂ ಅದಿರನ್ನು ಕರಗಿಸುವ ಸಂದರ್ಭದಲ್ಲಿ ಈ ಬಗೆಯ ಕಿಟ್ಟಗಳು ಆಗಿರಬಹುದೆಂದು ಹೇಳುತ್ತಾರೆ".[೩]

ದಕ್ಷಿಣ ಕರ್ನಾಟಕದಲ್ಲಿಯ ಕುದುರೆಮುಖ ಮತ್ತು ಬಳ್ಳಾರಿ ಜಿಲ್ಲೆಯ ಪರ್ವತ ಪ್ರದೇಶಗಳಲ್ಲಿ ಕಬ್ಬಿಣ ಅದಿರು ದೊರೆಯುತ್ತಿದ್ದುದರಿಂದ ಬೃಹತ್ ಶಿಲಾಯುಗದ ಕಾಲಕ್ಕೆ ಈ ಪ್ರದೇಶಗಳಲ್ಲಿ ಕಬ್ಬಿಣದ ಉಪಕರಣಗಳನ್ನು ತಯಾರಿಸುವ ಪ್ರಮುಖ ಕಾರ್ಯಾಗಾರಗಳು ಈ ಪ್ರದೇಶದಲ್ಲಿದ್ದಿರಬೇಕು ಹಾಗೂ ಇಲ್ಲಿ ತಯಾರಾಗುತ್ತಿದ್ದ ಕಬ್ಬಿಣದ ಆಯುಧಗಳು ಹಾಗೂ ಇತರೆ ವಸ್ತುಗಳು ಸುತ್ತ ಮುತ್ತಲಿನ ಪ್ರದೇಶಗಳಿಗೆ ರಪ್ತಾಗುತ್ತಿದ್ದಿರಬೇಕು.

ಸಂಡೂರಿನ ಸಮೀಪದ ಹಿರೇ ಬೆಣಕಲ್ ಹಾಗೂ ಹಂಪಿ ಪ್ರದೇಶದಲ್ಲಿಯ ಬೃಹತ್ ಶಿಲಾ ಗೋರಿಗಳಲ್ಲಿ ಕಬ್ಬಿಣದ ಉಪಕರಣಗಳು ದೊರೆತಿವೆ. ಇಲ್ಲಿ ಕಾಣುವ ಗವಿವರ್ಣದ ಚಿತ್ರಗಳಲ್ಲಿ ಈಟಿ, ಭರ್ಚಿ, ಬಾಣ ಮುಂತಾದ ಆಯುಧಗಳು ಕಂಡು ಬಂದಿರುವುದರಿಂದ ಈ ಪ್ರದೇಶಗಳಲ್ಲಿ ಕಬ್ಬಿಣದ ಆಯುಧಗಳನ್ನು ತಯಾರಿಸುತ್ತಿದ್ದರು ಎಂಬುದಕ್ಕೆ ಸಾಕ್ಷಿಯಾಗಿವೆ. ಬೃಹತ್ ಶಿಲಾ ಗೋರಿಗಳಲ್ಲಿ ದೊರೆತಿರುವ ಕಬ್ಬಿಣದ ಉಪಕರಣಗಳ ವೈಜ್ಞಾನಿಕ ಅಧ್ಯಯನದಿಂದ ಇದು ಈ ಪ್ರದೇಶವೆಂದು ಹೇಳಬಹುದು. ಈ ಎಲ್ಲಾ ಹಿನ್ನೆಲೆಗಳನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಸಂಡೂರಿನಲ್ಲಿದ್ದ ಕಾರ್ತಿಕೇಯವನದ ಕಬ್ಬಿಣದ ಕಾರ್ಯಾಗಾರವು ಸುಮಾರು ಕ್ರಿ.ಪೂ.೧೦೦೦ದ ವೇಳೆಗೆ ಪ್ರಾರಂಭವಾಗಿರಬಹುದು ಎಂದು ಹೇಳಬಹುದು.

"ಸಂಡೂರಿನಿಂದ ಸುಮಾರು ೫೦.ಕಿ.ಮೀ. ದಕ್ಷಿಣಕ್ಕಿರುವ ಬ್ರಹ್ಮಗಿರಿಯ ಬೃಹತ್ ಶಿಲಾ ಗೋರಿಗಳ ಉತ್ಖನನದಲ್ಲಿ ಕಬ್ಬಿಣದ ಆಯುಧಗಳಾದ ಈಟಿ, ಭರ್ಚಿ, ಕತ್ತಿ, ಬಾಣದ ಮೊನೆಗಳು ಮುಂತಾದವು ಕಂಡುಬಂದಿವೆ".[೪] "ಮಸ್ಕಿಯ ಹಾಗು ದೇವಗಿರಿಯ ಬೃಹತ್ ಶಿಲಾ ಗೋರಿಗಳಲ್ಲಿ ಈಟಿ ಹಾಗು ಇತರೆ ಕಬ್ಬಿಣದ ಆಯುಧಗಳು ದೊರೆತಿವೆ."[೫] ದೇವಗಿರಿಯಿಂದ ಹಂಪಿ, ಹೊಸಪೇಟೆ, ಬಳ್ಳಾರಿಯವರೆಗಿನ ಪ್ರದೇಶಗಳಲ್ಲಿ ಕಬ್ಬಿಣದ ಅದಿರು ಹೇರಳವಾಗಿದೆ.

"ದಕ್ಷಿಣ ಭಾರತದಲ್ಲಿ ಪ್ರಪ್ರಥಮ ಬಾರಿಗೆ ಉಕ್ಕು ಕಾಣಿಸಿಕೊಳ್ಳುತ್ತಾ ಬೃಹತ್ ಶಿಲಾ ಸಂಸ್ಕೃತಿಯ ಹಂತದಲ್ಲಿ ಕ್ರಮೇಣವಾಗಿ ಇದರ ಅಭಿವೃದ್ಧಿ ಹೆಚ್ಚಾಗುತ್ತಾ ಬಂದು ಕ್ರಿ. ಶ.೧-೨ ನೇ ಶತಮಾನದ ವೇಳೆಗೆ ಉತ್ತರ ಭಾರತ ಮತ್ತು ರೋಮ್ ದೇಶಕ್ಕೂ ಇಲ್ಲಿಯ ಕಬ್ಬಿಣದ ಉತ್ಪಾದನಾ ವಸ್ತುಗಳು ರಪ್ತಾಗುತ್ತಿದ್ದವು" ಎಂದು ತಿಳಿಯುತ್ತದೆ."[೬]

"ಭಾರತದಲ್ಲಿ ಉತ್ಪಾದನೆಯಾಗುತ್ತಿದ್ದ ಉಕ್ಕಿನ ಆಯುಧಗಳಿಗೆ ಹಾಗು ಇತರ ವಸ್ತುಗಳಿಗೆ ರೋಮ್ ದೇಶದಲ್ಲಿ ಬಹಳ ಬೇಡಿಕೆ ಇತ್ತು. ಹೊಸಪೇಟೆ, ಸಂಡೂರು, ಬಳ್ಳಾರಿ ಪ್ರದೇಶದಲ್ಲಿರುವ

ಅದಿರು ಉತ್ತಮ ಶ್ರೇಣಿಯದ್ದಾಗಿದ್ದು ಅದಕ್ಕೆ ಬೇಡಿಕೆ ಮೊದಲಿನಿಂದಲೂ ಇತ್ತು. ಈಗಲೂ ಇದೆ ಎಂಬುದನ್ನು ನಾವು ನೋಡುತ್ತಿದ್ದೇವೆ. ಈ ಎಲ್ಲ ಕಾರಣಗಳಿಂದ ಸಂಡೂರಿನಲ್ಲಿದ್ದ ಕಾರ್ತಿಕೇಯವನ ಕಬ್ಬಿಣ ಉಕ್ಕು ತಯಾರಿಕಾ ಘಟಕ ಇಡೀ ಭಾರತದಲ್ಲಿಯೇ ಪ್ರಸಿದ್ಧಿಯನ್ನು ಪಡೆದಿರಬಹುದು."೭

**೨.೨ ಪದನಿಷ್ಪತ್ತಿ:**

"ಕಮ್ಮಾರ ಎಂಬ ಪದವು ಕಬ್ಬಿಣ ಕೆಲಸವನ್ನು ನಿರ್ವಹಿಸುವವನು ಎಂಬ ಅರ್ಥ ನೀಡುತ್ತದೆ. ಕರಿದು-ಪೊನ್-ಕರ್ಬೊನ್ ಎಂಬ ಪದವು ತುಳು ಭಾಷೆಯಲ್ಲಿ "ಕರ್ಬ" ಆಗಿ ಉಳಿದಿದೆ. ಕನ್ನಡದಲ್ಲಿ ಕಬ್ಬಿಣ ಎಂದು ಕರೆಯುತ್ತಾರೆ. ಇದು ಕಪ್ಪನೆಯ ಲೋಹವಾಗಿದ್ದುದರಿಂದ ಇದಕ್ಕೆ ಕಬ್ಬಿಣ ಎಂಬ ಹೆಸರು ಬಂತು. ಕಬ್ಬಿಣಕ್ಕೆ "ಆಯಸ" ಎಂಬ ಪದವು ಸಂಸ್ಕೃತದಲ್ಲಿದೆ. ಇತಿಹಾಸಕಾರರ ಪ್ರಕಾರ ಕಬ್ಬಿಣವು ಇತರೆ ಲೋಹಗಳ ನಂತರ ಕಂಡು ಹಿಡಿಯಲ್ಪಟ್ಟ ಲೋಹ. ಚರಿತ್ರೆಕಾರರು ಕಬ್ಬಿಣದ ಯುಗವನ್ನು ಕ್ರಿ.ಪೂ. ೨೦೦೦ ದಿಂದ ಪ್ರಾರಂಭವಾಯಿತು ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಏಷ್ಯಾ/ಮೈನರೆನಲ್ಲಿ ಕ್ರಿ.ಪೂ. ೧೪೪೦ರಲ್ಲಿ ಶೋಧಗೊಂಡ ಕಬ್ಬಿಣವು ಕ್ರಿ.ಪೂ.೧೨೦೦ ರಲ್ಲಿ ವ್ಯಾಪಕವಾಗಿ ಬೆಳಕಿಗೆ ಬಂದಿತು".೮

ಕಬ್ಬಿಣವು ಕ್ರಿ.ಪೂ.೧೦೦೦ರ ಹೊತ್ತಿಗೆ ಗ್ರೀಸ್ ದೇಶವನ್ನು ಪ್ರವೇಶಿಸಿತು ಎನ್ನುತ್ತಾರೆ. ಸಿಂಧೂ ನಾಗರಿಕತೆಯಲ್ಲಿ ಮೊದಲು ಕಬ್ಬಿಣದ ಉಪಯೋಗವಿರಲಿಲ್ಲ. ಆದರೆ ಇತ್ತೀಚೆಗೆ ಅಲ್ಲಿಯೂ ಸಹ ಕಬ್ಬಿಣ ದೊರೆಕಿದ್ದು ದಾಖಲಾಗಿದೆ. ವೇದಗಳಲ್ಲಿ ಕಮ್ಮಾರರು ವಿವಿಧ ಬಾಣಗಳನ್ನು ಹಾಗೂ ಅವುಗಳ ತುದಿಗೆ ಕಬ್ಬಿಣದ ಅಲಗು ಜೋಡಿಸಿ ತಯಾರಿಸುತ್ತಿದ್ದರು.

ಕರ್ಮ್ಮಾರ ಎಂದರೆ ವೇದ ಸಂಹಿತೆಗಳ ಪ್ರಕಾರ ಶಿಲ್ಪಿ. ಈ ಅರ್ಥವನ್ನು ಸೂಚಿಸುವಂತೆ ಈ ಶಬ್ದವು ವೇದಗಳಲ್ಲಿ ಅನೇಕ ಬಾರಿ ಬಳಕೆಯಾಗಿದೆ. ಅಥವಾ ವೇದಗಳಲ್ಲಿ ಶಿಲ್ಪಿಗಳನ್ನು "ಧೀವಾನಃ" (ನೌಕೆಗಳ ನಿರ್ಮಾಣ ಮಾಡುವ ಶಿಲ್ಪಿಗಳು) ರಥಕಾರಃ (ರಥಗಳನ್ನು ನಿರ್ಮಾಣ ಮಾಡುವವರು) ಎಂದು ಇವರೊಂದಿಗೆ ಉಲ್ಲೇಖಿಸಿ ಇವರನ್ನೆಲ್ಲಾ ಮನೀಷಿಣಾ:ಎಂದು ವರ್ಣಿಸಿದೆ. ನೌಕಾಶಿಲ್ಪಿ, ರಥಶಿಲ್ಪಿ, ಕರ್ಮಾರ(ಲೋಹಕಾರ)ಇವರು ಗ್ರಾಮದ ಮುಖ್ಯಸ್ಥರು ಮತ್ತು ಸೂತರು ಎಲ್ಲರೂ ಸೇರಿ ರಾಜ್ಯವನ್ನೂ ರಾಜರನ್ನೂ ರೂಪಿಸುವವರಾಗಿದ್ದಾರೆ ಎಂದು ಹೇಳಿದೆ. ರಾಜಕೃತಃ ಶಬ್ದಕ್ಕೆ ರಾಜನನ್ನು ನಿರ್ಮಾಣ ಮಾಡುವವರು (King makers) ಆಯ್ಕೆ ಮಾಡುವವರು ರಥಕಾರ, ಲೋಹಕಾರ, ನೌಕಾಶಿಲ್ಪಿ (ಪಂಡಿತರು,ಮಂತ್ರಿಗಳು) ಸೂತ, ಗ್ರಾಮದ ಮುಖ್ಯಸ್ಥರು (ಸರದಾರರು) ಮುಂತಾದ ಪ್ರಮುಖರು ರಾಜನನ್ನು ಆಯ್ಕೆ ಮಾಡುತ್ತಾರೆ. ಕರ್ಮಾರನು ಬೆಂಕಿಯಿಂದ ಖನಿಜವನ್ನು ಕರಗಿಸುತ್ತಿದ್ದುದರಿಂದ (ಧಮಾ) ಈತನನ್ನು "ಧಮಾತೃ" ಎಂದು ಸಂಭೋದಿಸಿದೆ. ಹಕ್ಕಿಗಳ ಪುಕ್ಕದಿಂದ ತಯಾರಾಗಿರುವ ಗಾಳಿಯನ್ನು ಒತ್ತುವ ತುದಿಯ ಉಲ್ಲೇಖ ದೊರೆಯುತ್ತದೆ. ಬೆಂಕಿಯ ಮೇಲೆ ಇರಿಸಲು ಸಾಧ್ಯವಾಗುವಂತಹ ಪಾತ್ರೆ(ಘರ್ಮಆಯಸಮಯ) ತಯಾರಿಸುತ್ತಿದ್ದರು. ಯಜ್ಞದಲ್ಲಿ

ಸೋಮಪಾನಕ್ಕಾಗಿ ಬಳಸುವ ಮರದ ಪಾತ್ರೆಯಾದ "ಚಮಸ"ವನ್ನೂ ಕೂಡ ಆಗಾಗ ಇವರು ಸುತ್ತಿಗೆಯಿಂದ ಬಡಿದು ಕಬ್ಬಿಣದಲ್ಲಿ (ಆಯೋಹತ) ತಯಾರಿಸುತ್ತಿದ್ದರು.

ಪಾಳಿ ಭಾಷೆಯಲ್ಲಿ ಕಮ್ಮಾರ ಶಬ್ದವನ್ನು ಲೋಹಗಾರ ಎಂಬ ಅರ್ಥದಲ್ಲಿ ಕಬ್ಬಿಣ, ಬೆಳ್ಳಿ, ಬಂಗಾರ ಇತ್ಯಾದಿ ಲೋಹಗಳಲ್ಲಿ ಕೆಲಸ ಮಾಡುವವರು ಎಂದು ಬಳಸಲಾಗಿದೆ. ಇವರು ಸಾಮಾಜಿಕವಾಗಿ ಬಹು ಪ್ರಯೋಜನಕಾರಿಗಳಾದುದರಿಂದ ಜನರು ಮತ್ತು ರಾಜ ಇಬ್ಬರು ಇವರಿಗೆ ಗೌರವ ಕೊಡುತ್ತಿದ್ದರು. ಇವರಲ್ಲಿ ಹಲವರು ಬಹು ಪ್ರಮುಖರಾಗಿದ್ದರು ಎಂಬುದು ಚಂದನ ಉದಂತದಿಂದ ಸ್ಪಷ್ಟವಾಗುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ಕರ್ಮಾರ ಎಂಬ ಶಬ್ದವು ಕಮ್ಮಾರ ಎಂಬ ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. ಕರ್ಮಾರಃ ಸ್ಯಾದ್ ಅಯಸ್ಕಾರೋ ವ್ಯೂಕಾರೋ ಲೋಹಕಾರಕಃ (ವೈಜಯಂತಿ ಕೋಶ) ಕರ್ಮಕಾರ ಎಂಬುದು ಲೋಹದ ಕೆಲಸ ಮಾಡುವವನು ಎಂಬ ಅರ್ಥಕ್ಕೆ ಸೀಮಿತವಾಗಿತ್ತು. ಅಂದರೆ ಆಧುನಿಕ ಸಂಸ್ಕೃತ ಭಾಷೆಯಲ್ಲಿ ಕೂಲಿ ಆಳು ಎಂಬ ಅರ್ಥ ಪಡೆದುಕೊಂಡಿದೆ. ಕರ್ಮಾರ ಶಬ್ದಕ್ಕೆ ಮೂಲವಾಗಿ ಈ ಅರ್ಥ ಇರಲಿಲ್ಲ. ಆಧುನಿಕರು ಈ ಅರ್ಥವನ್ನು ಸೇರಿಸಿ ಹೇಳುತ್ತಿದ್ದಾರೆ. ಪ್ರಾಕೃತ ಭಾಷೆಯ ಪ್ರಭಾವದಿಂದ ಈ ಅರ್ಥಗಳು ಬಂದಿವೆ ಎಂದು ಭಾಷಾ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಕನ್ನಡದಲ್ಲಿ ಪ್ರಾಕೃತ ಭಾಷೆಯ ಮೂಲಕವೇ ಕಮ್ಮಾರ ,ಕಂಬಾರ, ಕಮ್ಮಾರ, ಕಮ್ಮೆಕೆಗಾರ ಬಳಕೆಗೆ ಬಂದಿದೆ. ಈ ಪದಗಳಿಗೆ ಕೂಲಿಯ ಆಳು ಎಂಬ ಅರ್ಥದೊಂದಿಗೆ ಕಬ್ಬಣದ ಕೆಲಸಗಾರ ಮತ್ತು ಶಿಲ್ಪಿ ಎಂಬರ್ಥಗಳನ್ನೂ ಹೇಳುವುದೇ ಈ ಅನುವಾದಕ್ಕೆ ಕಾರಣವಾಗಿದೆ. ಸಂಸ್ಕೃತದಲ್ಲಿ ಈ ರೀತಿಯ ಅರ್ಥವಿರುವ ಪದಗಳು ಆದರೆ ತದ್ಭವವಾಗಿರುವಂತ ಕಮ್ಮಾರ ಎಂದರೆ ಕಬ್ಬಿಣದ ಶಿಲ್ಪಿ. ಕಮ್ಮಾರದಿ ಎಂದರೆ ಕಬ್ಬಣದ ಶಿಲ್ಪ ಮಾಡುವ ಹೆಣ್ಣು. ಕಮ್ಮರಮು ಎಂದರೆ ಕಬ್ಬಿಣದಲ್ಲಿ ಮಾಡುವ ಶಿಲ್ಪದ ಕೆಲಸ. ಈ ರೀತಿಯಾಗಿ ಈ ಪದಗಳ ಸಂಸ್ಕೃತದ ಕರ್ಮಾರ ಶಬ್ದದ ಅರ್ಥಕ್ಕೆ ಮಾತ್ರವೇ ಸೀಮಿತವಾಗಿದೆ. ಕನ್ನಡದಲ್ಲಿ ಇದೇ ಪದ್ಧತಿ ರೂಡಿಯಲ್ಲದೆ. ತಮಿಳು ಭಾಷೆಯಲ್ಲೂ ಕರುಮಕಾನ್, ಕರುಮಾನ್ ಮತ್ತು ಮಲೆಯಾಳಿ ಭಾಷೆಯಲ್ಲಿ ಕರುಮಾನ್ ಪದಗಳನ್ನು ಸಂಸ್ಕೃತದ ಕಮ್ಮಾರ ಶಬ್ದದಿಂದಲೇ ನಿಷ್ಪನ್ನವಾಗಿದೆ.

ತಮಿಳಿನಲ್ಲಿ ಕಮ್ಮಾಲನ್ (ಮಲೆಯಾಳಂ ಕಮ್ಮಾಲನ್,ಕನ್ನಡ ಕಮ್ಮಾಲ)ಎಂಬ ಪದವನ್ನು ಶಿಲ್ಪಿ ಅಥವಾ ತಂತ್ರಜ್ಞ ಎಂಬ ಅರ್ಥದಲ್ಲಿ ಬಳಸುತ್ತಾರೆ. ಇದು ಕುಲವಾಚಕವಾಗಿದ್ದು ತಟ್ಟಾನ್ (ಸ್ವರ್ಣಶಿಲ್ಪಿ) ಕನ್ನಾನ್ (ಕಂಚಿನ ಶಿಲ್ಪಿ) ತಚ್ಚನ್ (ಕಾಷ್ಠ ಶಿಲ್ಪಿ) ಸಿರ್ಪನ್ (ಶಿಲಾ ಶಿಲ್ಪಿ). ಕೊಲ್ಲನ್ ಅಥವಾ ಕರುಮಾನ್ (ಕಬ್ಬಣದ ಶಿಲ್ಪಿ)ಎಂಬ ಪಂಚಶಿಲ್ಪಿಗಳ ಗುಂಪಿಗೆ ಸಾಮಾನ್ಯ ಹೆಸರಾಗಿ ಬಳಸುತ್ತಾರೆ. ಇದು ಸಂಸ್ಕೃತದ ಕರ್ಮಾರ ಶಬ್ದಕ್ಕೆ ಪತಂಜಲಿ ಮಹರ್ಷಿಗಳು ಹೇಳಿರುವ ಪಂಚಕಾರುಕೀ ಅರ್ಥವನ್ನು ಅನುಸರಿಸಿದ್ದು.

"ವಿಲಿಯಮ್ಸ್ ರವರು ಕರ್ಮಾರ ಶಬ್ದಕ್ಕೆ ಹೇಳಿರುವ ಅರ್ಥಗಳನ್ನು ಚಾರಿತ್ರಿಕ ಹಿನ್ನಲೆಯಲ್ಲಿ ಈ ರೀತಿಯಾಗಿ ಹೇಳಬಹುದು.೧. a smith (ಸಾಮಾನ್ಯ ಅರ್ಥ) ೨. a Black smith (ವಿಶೇಷಾರ್ಥ) ೩. artificer artisan including corpanters as smith

ಆಧುನಿಕ ಸಂಸ್ಕೃತ ಭಾಷೆಯಲ್ಲಿ ಸಾಧಾರಣವಾಗಿ ಮೂಲತಃ smith ಆಗಿರುವವನು articicer ಶಿಲ್ಪಿ ಆಗಿರಬೇಕಾಗಿಲ್ಲ."

ಕೃ ಧಾತುವಿಗೆ ಕೆಲಸಮಾಡು ಎಂದು ಅರ್ಥವಿರುವುದರಿಂದ ಸಂಸ್ಕೃತದ ಕಮ್ಮಾರ ಶಬ್ದಕ್ಕೆ ಸ್ಮಿತ್ ಎಂಬ ಅರ್ಥವನ್ನೇ ಹೇಳಬೇಕು. ಪಾಳಿ ಭಾಷೆಯಲ್ಲಿಯೂ ಇದೇ ಅರ್ಥ ಕೊಡುತ್ತದೆ. ಆದರೆ ಆಧುನಿಕ ಸಂಸ್ಕೃತದಲ್ಲಿ ಪ್ರಾಕೃತದ ಪ್ರಭಾವದಿಂದ ಹಲವು ಬಗೆಯ ಅರ್ಥವನ್ನು ಸೇರಿಸಿದ್ದಾರೆ. ಈ ಅರ್ಥಗಳು ವೇದ ಸಾಹಿತ್ಯದಲ್ಲಿ ಅಂಗೀಕೃತವಾಗುವುದಿಲ್ಲ. ಆದ್ದರಿಂದ ಕರ್ಮಕಾರ ಎಂಬುದರ ಅರ್ಥವನ್ನು ಆಧುನಿಕ ಅರ್ಥ ಸೃಷ್ಟಿಗಳಲ್ಲಿ ಲೆಕ್ಕಿಸಬೇಕೇ ಹೊರತು ಮೂಲ ಶಬ್ದದ ಅರ್ಥಕ್ಕೆ ಅಲ್ಲ. ಈ ಪದದ ಅರ್ಥವನ್ನು ಆಧುನಿಕರು ಈ ಶಬ್ದವನ್ನು ವಿವಿಧ ಬಗೆಯಲ್ಲಿ ಅರ್ಥೈಸಿಕೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಬಂಗಾಳ ಮತ್ತು ಬಿಹಾರದಲ್ಲಿ ಲೋಹಗಳಲ್ಲಿ ಕೆಲಸ ಮಾಡುವವರನ್ನು ಆಧುನಿಕ ಸಂಸ್ಕೃತ ಭಾಷೆಯಲ್ಲಿ ಕಮಾರ ಅಥವಾ ಕಾಮಾರ ಎಂದು ಕರೆಯುತ್ತಾರೆ. ಇವರು ಲೋಹಾರರಿಗಿಂತಲೂ ಬೇರೆಯಾಗಿದ್ದು ತಮ್ಮ ಕೆಲಸವನ್ನು ಕೇವಲ ಕಬ್ಬಿಣದ ಶಿಲ್ಪಕ್ಕೆ ಸೀಮಿತವಾಗಿರಿಸಿಕೊಳ್ಳದೆ ಇತರೆ ಲೋಹಗಳಲ್ಲಿಯೂ ಕೆಲಸ ಮಾಡುತ್ತಿರುತ್ತಾರೆ ಎಂದು ಎಚ್.ಎಚ್.ರಿಸ್ಲೇ ಹೇಳುತ್ತಾರೆ. ಇಲ್ಲಿ ಮೂಲ ಶಬ್ದದ ಅರ್ಥಗ್ರಾಸವು ಸ್ಪಷ್ಟವಾಗಿದೆ. ಕರ್ಮಕಾರ ಎಂಬ ಶಬ್ದಕ್ಕೆ ಕೂಲಿ ಆಳು. ಕೆಲಸಗಾರ ಮುಂತಾದ ಅರ್ಥಗಳು ಸೇರಿರುವುದು ಕಂಡು ಬರುತ್ತದೆ. ಈ ಕಾಲದಲ್ಲಿಯೇ ಭಾಷ್ಯಗಳ ಹೆಸರಿನಲ್ಲಿ ವಿದ್ವಾಂಸರಾದವರು ತಮ್ಮ ಇಚ್ಚಾನುಸಾರ ಈ ಶಬ್ದಗಳ ಅರ್ಥಗಳನ್ನು ಎಳೆದಾಡಿರುವುದನ್ನು ನಾವು ಸ್ಪಷ್ಟವಾಗಿ ಕಾಣಬಹುದು.

"ವಿಜ್ಞಾನೇಶ್ವರನು ಯಜ್ಞವಲ್ಕ್ಯ ಸೂತ್ರಕ್ಕೆ ಭಾಷ್ಯವನ್ನು ಬರೆಯುತ್ತಾ ಕರ್ಮಾರ ಎಂದರೆ ಲೋಹಕಾರ ಮತ್ತು ತಕ್ಷಕ(ಬಡಗಿ) ಎಂದು ಹೇಳಿದ್ದಾನೆ. ಇದರ ನಂತರದ ಪತಂಜಲಿ ಮಹರ್ಷಿಯ ಪಂಚಕಾರುಕೀ ಎಂಬುದಕ್ಕೆ ಮರಗೆಲಸದವನು, ತಂತಿವಾದ್ಯ ಬಾರಿಸುವವನು, ನಾಪಿತ, ಅಗಸ(ರಜಕ) ಚರ್ಮದಲ್ಲಿ ಕೆಲಸ ಮಾಡುವವನು ಈ ಐವರು ಪಂಚಶಿಲ್ಪಿಗಳು ಇವರನ್ನು ಕಾರು ಎಂದು ಕರೆಯುತ್ತಾರೆ.

ಸ್ಮಿತ್ ಎಂದರೆ ಪಂಚಕಾರುಕಿ ಎಂಬ ಸೂತ್ರ ವಾಕ್ಯವೇ ಕರ್ನಾಟಕ ಆಂಧ್ರ ಮತ್ತು ಮಹಾರಾಷ್ಟ್ರದಲ್ಲಿ ಪಂಚಾಳ ಎಂಬ ಹೆಸರಿನಲ್ಲಿ ರೂಢಿಯಲ್ಲಿದೆ. ಪಂಚಾಲ ಬ್ರಾಹ್ಮಣರ ಗೋತ್ರಕರ್ತರಾದ ಯಾವ ಪಂಚಬ್ರಹ್ಮರ ಲಕ್ಷಣವನ್ನು ಅರಿಯುವುದರಿಂದ ಅಯಾ ಶಾಖೆಗಳ ಶಿಲ್ಪಾಚಾರ್ಯರ ಅಚಾರ ಸ್ಪಷ್ಟವಾಗುವುದೋ ಆ ಐದು ಲಕ್ಷಣಗಳನ್ನು ವಿವರಿಸುತ್ತೇನೆ ಎಂದು ಹೇಳುತ್ತಾ ಪಂಚಾಲ

ಬ್ರಾಹ್ಮನೋತ್ಪತ್ತಿ ಪ್ರಕರಣವು ಪಂಚಬ್ರಹ್ಮರ ಕರ್ಮಗಳನ್ನು ಹೀಗೆ ವಿವರಿಸುತ್ತಾ ಮನುಬ್ರಹ್ಮನು ಕಬ್ಬಿಣದ ವಸ್ತುಗಳ ರಚನೆಯನ್ನು ರೂಪಿಸಿದ. ಮರಗೆಲಸವನ್ನು ರೂಪಿಸಿದವನು ಮಯಬ್ರಹ್ಮನು. ತ್ವಷ್ಟ್ರಬ್ರಹ್ಮನು ಕಾಂಸ್ಯ ಶಿಲ್ಪವನ್ನು ರೂಪಿಸಿದ. ಶಿಲಾಶಿಲ್ಪವನ್ನು ಶಿಲ್ಪಿಬ್ರಹ್ಮನು ರೂಪಿಸಿದನು. ಸ್ವರ್ಣಶಿಲ್ಪವನ್ನು ವಿಶ್ವಜ್ಞ ಬ್ರಹ್ಮನು ರೂಪಿಸಿದನು. ಇವೆ ಪಂಚಶಿಲ್ಪಗಳೆಂದು ಪ್ರಸಿದ್ಧಿಯಾಗಿವೆ ಮತ್ತು ರೂಢಿಯಲ್ಲಿದೆ. ಇದನ್ನು ಕಬ್ಬಣದ ಕೆಲಸ, ಮರಗೆಲಸ, ಕಂಚಿನ ಕೆಲಸ, ಕಲ್ಲಿನ ಕೆಲಸ, ಬಂಗಾರದ ಕೆಲಸವೆನ್ನುತ್ತಾರೆ. ಈ ಕೆಲಸಗಳನ್ನು ಪಂಚಾಳರು ಮಾತ್ರವಲ್ಲದೆ ಇನ್ನಿತರ ಜಾತಿಯವರೂ ಮಾಡುತ್ತಾರೆ. ಹೀಗಿದ್ದರೂ ಇದನ್ನು ಪಾಂಚಾಳ ಶಿಲ್ಪಿಗಳು ಮಾಡಬೇಕೇಂಬ ನಿಯಮ ಧರ್ಮ ಸ್ವರೂಪದಲ್ಲಿ ಅಂಗೀಕೃತವಾಗಿದೆ.

ಶಿಲ್ಪದಲ್ಲಿ ವೈದಿಕ ಮತ್ತು ಅವೈದಿಕ ಎಂಬ ಎರಡು ವಿಭಾಗಗಳಿವೆ. ವೇದಮಂತ್ರಗಳ ಪಠಣದಿಂದ ವೈದಿಕ ಶಾಸ್ತ್ರಗಳಿಗೆ ಸಮ್ಮತವಾಗುವಂತೆ ಶಿಲ್ಪಗಳನ್ನು ನಿರ್ಮಿಸುವುದನ್ನು ವೈದಿಕ ಶಿಲ್ಪ ಎನ್ನುತ್ತಾರೆ. ಈ ಶಿಲ್ಪವು ಅಗಮಶಾಸ್ತ್ರಗಳಿಗೂ ಸಮ್ಮತವಾದುದೇ. ಅಲ್ಲದೇ ಕೇವಲ ವ್ಯಕ್ತಿ ಅಥವಾ ಧಾರ್ಮಿಕವಲ್ಲದ ಇತರ ಸಂದರ್ಭದ ಉಪಯೋಗಾರ್ಥ ವಸ್ತುಗಳನ್ನು ನಿರ್ಮಿಸುವುದನ್ನು ಅವೈದಿಕ ಎನ್ನುತ್ತಾರೆ.

ವೈದಿಕ ಶಿಲ್ಪದಲ್ಲಿಯೂ ದೇವಶಿಲ್ಪ ಮತ್ತು ಮಾನವಶಿಲ್ಪ ಎಂಬ ಎರಡು ವಿಧಗಳಿವೆ. ನಾಭಾನೇದಿಷ್ಠಾದೀ ವೈದಿಕ ಶಿಲ್ಪಋಷಿಗಳು ಮಾಡಿರುವ ಕಾರ್ಯಗಳನ್ನು ದೇವಶಿಲ್ಪ ಎನ್ನುತ್ತಾರೆ. ದೇವಶಿಲ್ಪಗಳೆಂದರೆ, ರಕ್ಷಾ ನಿರ್ಮಾಣ, ತಜ್ಞೋಪವೀತ ನಿರ್ಮಾಣ, ಯಜ್ಞದಲ್ಲಿ ಬಳಕೆಯಾಗುವ ಸಾಮಗ್ರಿಗಳು. ಮಾನವ ಶಿಲ್ಪಗಳೆಂದರೆ ಸಂಸ್ಕಾರದ ಅಗತ್ಯವಿಲ್ಲದ ಬಂಗಲೆಗಳು, ಮನೆಗಳು, ಟಾಂಗ, ರಾಕ್ಷಸ, ಗ್ರಾಮದೇವತೆ, ಭೂತಪ್ರತಿಮೆಗಳು, ಕೊಡಲಿ, ಮಚ್ಚು, ನೇಗಿಲ, ಕತ್ತಿ, ಎತ್ತಿನಗಾಡಿ ಇವುಗಳನ್ನು ಯಾರಾದರು ಮಂತ್ರ ಉಚ್ಚರಣೆ ಇಲ್ಲದೆ ತಯಾರಿಸಬಹುದು.

ಕಬ್ಬಣದಿಂದಲೇ ಸೃಷ್ಟಿ ಎನ್ನುತ್ತಾರೆ. ಶಿಶುವು ತಾಯಿಯ ಗರ್ಭದಿಂದ ಹೊರ ಬಂದ ಕೂಡಲೇ ನಾಭೀನಾಳವನ್ನು ಕತ್ತರಿಸಿದಾಗ ಮಗುವಿನ ಹುಟ್ಟು ಆಗುತ್ತದೆ. ತಾಯಿಯಿಂದ ಮಗುವನ್ನು ಬೇರ್ಪಡಿಸುವ ಸಾಧನ ಕಬ್ಬಿಣದ ಕತ್ತಿ, ಆದುದರಿಂದಲೇ ಕಬ್ಬಿಣದ ಸೃಷ್ಟಿ ಎಂಬ ಮಾತಿಗೆ ತುಂಬಾ ಅರ್ಥವಿದೆ.

ಕಬ್ಬಣವೇ ವ್ಯವಸಾಯಕ್ಕೆ ಮೂಲ. ಉಳುಮೆ ಮಾಡಬೇಕಾದರೆ ನೇಗಿಲುಬೇಕು. ಈ ನೇಗಿಲದ ಮೊನೆಗೆ ಕಬ್ಬಣದಿಂದ ಮಾಡಿದ ಕುಳ (ಮೊನೆ) ಬೇಕು. ಈ ಕುಳದಿಂದ ಮಣ್ಣು ಸೀಳಾಗಿ ಭೂಮಿ ಹದವಾಗಿ ವ್ಯವಸಾಯಕ್ಕೆ ಅಣಿಯಾಗುತ್ತದೆ. ಅದೇ ರೀತಿ ಹತ್ತಿಯಿಂದ ನೂಲು ತೆಗೆಯಬೇಕಾದರೆ ತಕಲಿ (ಕದಿರು) ಬೇಕು. ಇದು ಕಬ್ಬಿಣದಿಂದ ತಯಾರಿಸಿದ್ದು. ಇದರಿಂದ ಬಟ್ಟೆಯನ್ನು ಸಿದ್ಧಪಡಿಸಲು ಸಾಧ್ಯ.

ಬರವಣಿಗೆಯ ಮೂಲವು ಸಹ ಕಬ್ಬಿಣವೇ. ಓಲೇಗರಿಯಲ್ಲಿ ಬರೆಯಲು ಕಬ್ಬಿಣದ ಕಂಟೀಬೇಕು. ಮಸಿಯಲ್ಲಿ ಬರೆಯಲು ಕಬ್ಬಿಣದ ಮೊನೆ (ನಿಬ್) ಬೇಕು. ವ್ಯಾಪಾರಕ್ಕೆ ತಕ್ಕಡಿ ಬೇಕು. ತಕ್ಕಡಿ

ನಿರ್ಮಾಣಕ್ಕೆ ಕಬ್ಬಿಣ ಬೇಕು. ಹೀಗೆ ಕಬ್ಬಿಣದಿಂದಲೇ ನಾಗರಿಕತೆಯ ಆರಂಭ ಮತ್ತು ಬೆಳವಣಿಗೆ ಎಂದು ಧೈರ್ಯದಿಂದ ಹೇಳಬಹುದು. ಕರ್ಮಾರ ಎಂಬ ಪದವು ವೇದ ಕಾಲದಲ್ಲಿ ಲೋಹ ಶಿಲ್ಪಿಗಳಾಗಿದ್ದು ಉಪನಾಮ ಮತ್ಸ್ಯ ಪುರಾಣದಲ್ಲಿ ಕಾತ್ಯಾಯನ ಸೂತ್ರಗಳಲ್ಲಿ ಕರ್ಮಾರರು ಎಂದು ಉಲ್ಲೇಖಿತವಾಗಿದೆ. ಕಬ್ಬಿಣದ ಕೆಲಸದವರು ಉಳಿದವರಿಗಿಂತ ಹೆಚ್ಚು ಶ್ರಮಜೀವಿಗಳಾದ ಕಾರಣ ಇವರನ್ನು ಕರ್ಮರಕಾರರೆಂದು ಕರೆದಿರಬಹುದು.

ಪಾಂಚಾಲರು ಎಂಬುದು ಐದು ಸಮುದಾಯಗಳನ್ನು ಒಟ್ಟಿಗೆ ಸೇರಿಸಿ ಹೇಳುವ ಪದವಾಗಿದೆ. ಸಂಸ್ಕೃತದ ಪಂಚ ಎಂದರೆ ಐದು ಎಂದೇ ಅರ್ಥ. ಶಿಲ್ಪಿ, ಕಮ್ಮಾರ, ಬಡಿಗಿ, ಅಕ್ಕಸಾಲಿ, ಕಂಚುಗಾರ ಎಂಬ ವೃತ್ತಿ ಸೂಚಕ ಪದಗಳು ಮೇಲ್ನೋಟಕ್ಕೆ ಜಾತಿ ಸೂಚಕಗಳಂತೆ ಭಾಸವಾಗುತ್ತದೆ. ಆದರೆ ಈ ಜನಗಳ ಬದುಕಿನ ವಿವರ ವಿನ್ಯಾಸಗಳನ್ನು ಹಾಗೂ ಇವರ ಪರಂಪರೆಯನ್ನು ಅಧ್ಯಯನ ಮಾಡಿದರೆ ಈ ಐದು ವೃತ್ತಿಗಳು ಒಂದೇ ಜಾತಿಯ ಜನ ನಿರ್ವಹಿಸುತ್ತಿದ್ದಾರೆ ಎಂಬುದು ಗೋಚರಿಸುತ್ತದೆ.

ಬಹುಶಃ ತುಂಬಾ ಹಿಂದೆ ಈ ಇದು ಪಂಗಡಗಳಿಗೆ ಒಂದೇ ಮೂಲವಾಗಿದ್ದು ಕಾಲಾಂತರದ ಯಾವುದೋ ಒಂದು ಘಟ್ಟದಲ್ಲಿ ಛಿದ್ರಗೊಂಡು ಭಿನ್ನವಾಗಿರಬೇಕು ಎನಿಸುತ್ತದೆ. ಈ ಐದು ಸಮುದಾಯದವರು ತಾವು ಒಂದೇ ನಾವು ಪಾಂಚಲರು, ವಿಶ್ವಕರ್ಮರೆಂದು ಹೇಳಿಕೊಳ್ಳುತ್ತಾರೆ. ಒಂದು ಕಾಲಕ್ಕೆ ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಕಮ್ಮಾರರನ್ನು ಕಡೆಗಣಿಸಲಾಗುತ್ತಿತ್ತು. ಇಂದು ಆ ಪರಂಪರೆಯೂ ಮಾಯವಾಗುತ್ತಿದೆ. ಪಾಂಚಲರು ಐದು ಪಂಗಡಗಳಿಗೆ ಐದು ಋಷಿಗಳ ಹೆಸರುಗಳಿವೆ.

ಆಧುನಿಕ ಕೈಗಾರಿಕೆಯ ಪ್ರವೇಶದಿಂದಾಗಿ ಇಂದು ಈ ಐದು ಪಂಗಡದವರ ವೃತ್ತಿಗಳು ಅಳಿವಿನ ಅಂಚಿನಲ್ಲಿವೆ ಮತ್ತು ಅವರ ಬದುಕು ತುಂಬಾ ಅತಂತ್ರವಾಗಿದೆ.

ಕರ್ನಾಟಕದಲ್ಲಿ ಪಾಂಚಾಲರು ತಮ್ಮನ್ನು ಬ್ರಾಹ್ಮಣರು ಎಂದು ಕರೆದುಕೊಳ್ಳುತ್ತಾರೆ. ಅದನ್ನು ಪುಷ್ಟೀಕರಿಸಲು ಹಲವಾರು ಗ್ರಂಥಗಳನ್ನು ಉಲ್ಲೇಖಿಸುತ್ತಾರೆ. ಪಾಂಚಾಲರ ಬಗ್ಗೆ ಹೆಚ್ಚಿನ ಕೆಲಸ ಮಾಡಿದವರು ಡಾ. ಜಿ. ಜ್ಞಾನಾನಂದರವರು. ಅದರೆ ಇವರ ಕೃತಿಗಳು ವೈದಿಕ ಪರಂಪರೆಯೊಂದಿಗೆ ಪಂಚಾಲ ಸಮುದಾಯ ಗುರುತಿಸಿರುವುದು ಕಂಡು ಬರುತ್ತದೆ. ಚಿತ್ತೂರು ಅದಾಲತ್ತು ಕೋರ್ಟಿನ ತೀರ್ಪನ್ನು ಮುಂದಿಟ್ಟು ಅಲ್ಲಿ ತಾವೇ ವಿಶ್ವಕರ್ಮ ವಿಶ್ವ ಬ್ರಾಹ್ಮಣರಾಗಿದ್ದು, ಬ್ರಾಹ್ಮಣರಿಗಿಂತಲೂ ಹೆಚ್ಚಿನವರೆಂದು ತೀರ್ಪು ಬಂದಿರುವುದನ್ನು ತಿಳಿಸುತ್ತಾ ತಮ್ಮ ಜಾತಿಯು ಬ್ರಾಹ್ಮಣ ಜಾತಿಗಿಂತಲೂ ಶ್ರೇಷ್ಠವಾದುದೆಂದು ನಿರೂಪಿಸಿದ್ದಾರೆ. ವೀರಣ್ಣ ಮಸಳಿಯವರ "ವಿಶ್ವಕರ್ಮರು ಯಾರು", ಮತ್ತು ರಾಜಶೇಖರ ಬಡಿಗೇರರವರ "ಸತ್ಯಾನ್ವೇಷಣೆ" ಕೃತಿಯಲ್ಲಿಯೂ ಸಹ ವಿಶ್ವಕರ್ಮರನ್ನು ವೈದಿಕ ಧರ್ಮದ ಹಿನ್ನೆಲೆಯಲ್ಲಿ ಕಂಡುಕೊಳ್ಳಲಾಗಿದೆ.

ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ ಎಂಬ ಗ್ರಂಥದಲ್ಲಿ ಕಮ್ಮಾರರು ತಯಾರಿಸುತ್ತಿದ್ದ ಹಾಗೂ ಪ್ರಾಚೀನ ಕಾಲದಲ್ಲಿ ಯುದ್ಧಕ್ಕೆ ಬಳಸಲಾಗುತ್ತಿದ್ದ ಅಸ್ತ್ರಗಳ ಬಗೆಗೆ ಉಲ್ಲೇಖಿಸಿದ್ದಾರೆ. "ಕರವಾಳ, ತೋಲವಾಳ'ಎಂಬ ಕತ್ತಿಗಳನ್ನು ಕಡಿತಲೆ ಎಂಬ ಖಡ್ಗಗಳನ್ನು ಸಬಳೆ, ಕೊಂಡ, ಶಲ್ಯ, ಭಲ್ಯ,ಶೂಲ, ಕರ್ಡಡೆ, ಸುರಿಗೆ, ಮುಸಲ, ಭಂಡಿವಾಳ, ಈಟಿ, ಶಕ್ತಿ, ಪಂಚರಾಯುಧ, ತೋಮರ, ಗುರಾಣಿ, ಮುಂತಾದ ಆಯುಧಗಳನ್ನು ಬಂಡಿಗಳಲ್ಲಿ ಹೇರಿಕೊಂಡು ಯುದ್ಧಕ್ಕೆ ಒಯ್ಯಲಾಗುತ್ತಿತ್ತು ಎಂದು ತಿಳಿಸಿದ್ದಾರೆ. ಈ ವಸ್ತುಗಳನ್ನೆಲ್ಲಾ ಕಮ್ಮಾರರು ತಯಾರಿಸುತ್ತಿದ್ದರು ಎಂದು ತಿಳಿಯುತ್ತದೆ."[೯]

"ಕೃಷಿ ಸಹಾಯಕ್ಕೆ ದುಡಿದು ಮೂವರು ಕಮ್ಮಾರರನ್ನು ಒಂದು ಶಾಸನದಲ್ಲಿ ಅಪರೂಪಕ್ಕೆಂಬಂತೆ ಉಲ್ಲೇಖಿಸಿದ್ದಾರೆ". "ಕ್ರಿ.ಶ.೧೫೪೯ ರಲ್ಲಿ ಎಲ್ಲೋಜ, ತಿಮ್ಮೋಜ, ಮತ್ತು ಉಲ್ಲೋಜ ಎಂಬ ಕಮ್ಮಾರರು ನೀರನ್ನು ಎತ್ತುವ ಏತಕ್ಕಾಗಿ ಕಬ್ಬಿಣದ ಬಾನಿಯನ್ನು ತಯಾರಿಸಿ ನೀರೆತ್ತುವ ಈ ಬಾನಿಗಳನ್ನು ಧರ್ಮಕ್ಕೆಂದು ಮಾಡಿಕೊಡುತ್ತಾರೆ. ಇವರು ತಮ್ಮನ್ನು ಶ್ರೀಮತು ಕಾಳಿಕಾ ಕಮಟೇಶ್ವರ ದೇವರ ವರ ಪ್ರಸಾದಿಗಳು ಎಂದು ಹೇಳಿಕೊಂಡಿದ್ದಾರೆ"(SII) south 9.9:1x (II) p p 662 No 670) ಈ ಕಬ್ಬಿಣದ ಬಾನಿಯು ಹಂಪೆಯ ಮೌಲ್ಯವಂತ  ರಘುನಾಥ ದೇವಾಲಯದಲ್ಲಿತ್ತು ಎಂದು ಹೇಳಲಾಗುತ್ತದೆ.

"ಕ್ರಿ.ಶ.೧೧೧೮ ರ ಶಾಸನವೊಂದರಲ್ಲಿ "ಭರತೇಶ್ವರ ದೇವರ ಕಮಾಪೆರೆ ದೆಶವನವ ಗಂಗಯನ ಕೇಲೋಜನುಂ ಗಂಗನುಂ ದೇವಗಿಣ ಕಾಲಂ ಕರ್ಚಿಕೊಟ್ಟರು' ಎಂಬ ಉಲ್ಲೇಖ ದೊರೆಯುತ್ತಿದೆ. ಇಲ್ಲಿ ಕಮ್ಮಾರಿಕೆಯಿಂದ ದೊರೆಯುವ ಆದಾಯದಲ್ಲಿಯ ೧/೧೦ ರಷ್ಟು ಭಾಗವನ್ನು ದೇವರಿಗೆ ಅರ್ಪಿಸಿದ ವಿವರ ದೊರೆಯತ್ತದೆ." [೧೦]

"ಕ್ರಿ.ಶ.೧೨೧೫ರಲ್ಲಿ ನಾಗಾವಿ ನಗರದ ಕಮಾರ ಬೊಮ್ಮೋಜನು ಶ್ರೀ ಮಹಾಬಳ ದೇವರ ಕಮ್ಮಾಟಕ್ಕೆ ಕೆಲಸವನ್ನು ಮಾಡಿ ಆದಾಯ ಪಡೆಯುತ್ತಾನೆ ಎಂಬ ಉಲ್ಲೇಖವಿದೆ. ಕೊಳಗಲ್ಲು ಶಾಸನವನ್ನು ಸಂಗ್ರಹಿಸಿ ಪ್ರಕಟಿಸಿದ ಎನ್.ಲಕ್ಷ್ಮೀನಾರಾಯಣರಾವ್ ಕಮ್ಮಾರನನ್ನು ಕುರಿತು ಅವರು "ತರ್ಕಾರಿತೊ" ಎಂದು ಅರ್ಥೈಸಿ, ಮಧುಸೂದನ ಉತ್ತರ ಭಾರತದಿಂದ ಬಂದವನೆಂದು ಹೇಳಿದ್ದಾರೆ[All that we know about Madhusudana the author of this inscription, is that he was the son of Atibala and grand son of Rishi that he was a dvija of the Kammar kula and that his ancestors emigrated from Tarkari. As the preserved portion of the last verse of the Kudutini epigraph reffered to above is an exact copy of the 22nd verse of our record the former also appears to have been composed by this same who flourished in this period of the Geographical names occuring in the Inscription ..... as to Tarkari there seen to be a number of places of this name but the Tarkari of the

ಬ್ರಹ್ಮಾಂಡ ಪುರಾಣದಲ್ಲಿ ಈ ಕೆಳಗಿನ ಉಲ್ಲೇಖವನ್ನು ನಾವು ಕಾಣಬಹುದಾಗಿದೆ.

ನಮೋಸ್ತುತೇ ಸಾನಗ ವಿಶ್ವ ಕರ್ಮಣೇ
ನಮೋಸ್ತುತೇ ಪೂರ್ವ ಮುಖೋದ್ಬವಾಯ
ನಮೋಸ್ತು ಷಡ್ಬೂತ ವಿನಿರ್ಮಾತಾಯ
ನಮೋಸ್ತು ಚಿದ್ರೂಪನಮೋ ನಮಸ್ತೆ॥
ಸಾಧನಂ ನಾಸ್ತಿ ಸರ್ವತ್ರ ಲೋಕಾನಾಂ ಸರ್ವಸಾಧಕ।
ಕರೋತಿ ಲೋಹ ಕರ್ಮಾಣಿ ಲೋಕಾನ್ ರಕ್ಷತಿಃ ಸಾನಗ॥
ದದೌಶಸ್ತ್ರಾಣಿ ದೇವನಾಂ ದುಷ್ಟ ನಿಗ್ರಹ ಕಾರಣಾತ್
ಸಚಸರ್ವಂ ಜಗತ್ಕರ್ತಾ ಸದ್ಯೋಜಾತ ಮುಖೋದ್ಬವಃ॥
ಶೋಲಂ ದದಾತಿ ಭರ್ಗಾಯ ಚಕ್ರದತ್ತಂ ಚ"ಷ್ಣುವೇ
ಪ್ರಾಶಾಸ್ತು ಬ್ರಹ್ಮಣೇ ದತ್ತ ಸ್ತ್ರೀ ಮೂರ್ತ್ಯಾತ್ಮ ಕಸಾನಗಃ॥

ಮನು ಅಂಗೀರಸ ಕುಲೋತ್ಪನ್ನನು ಸಾನಗ ಎಂಬುದು ಈತನ ಪರ್ಯಾಯ ನಾಮ. ಬ್ರಹ್ಮದಾರಣ್ಯ ಕೋಪನಿಶತ್ತಿನ ಬ್ರಹ್ಮವಿದ್ಯಾ ಸಂಪ್ರದಾಯ ಪ್ರವರ್ತಕರಲ್ಲಿ ಆಚಾರ್ಯನಾಗಿ ಉಲ್ಲೇಖಿಸಲ್ಪಟ್ಟಿದ್ದಾನೆ. ಭೃಗು ಕುಲದ ಉಶಾನಸ್ (ಶುಕ್ರ)ನ ವಂಶದಲ್ಲಿ ಸಾನಗ ಮಹರ್ಷಿ ಇದ್ದುದಾಗಿ ಹೇಳುತ್ತಾರೆ. ಯರ್ಜುವೇದ ಇಷ್ಟಕೋಪಾಧಾನ ಮಂತ್ರದಲ್ಲಿ ಈತನ ಪೂರ್ವದಿಕ್ಕಿನ ಅಧಿಪತಿಯಾದ ಶಿಲ್ಪಶ್ರೀ ಎಂಬ ಉಲ್ಲೇಖವಿದೆ. ಪುರಾಣಗಳಲ್ಲಿ ಈತನನ್ನು ಕರ್ಮಹರನೆಂದು ಸಂಭೋಧಿಸಲಾಗಿದೆ. ವಿಶ್ವಕರ್ಮ ಪರಮೇಶ್ವರನ ಸದ್ಯೋಜಾತ ಎಂಬ ಪೂರ್ವ ಮುಖದಿಂದ ಉದ್ಬವಗೊಂಡ ಈ ಬ್ರಹ್ಮ ಮಾನಸಪುತ್ರ ಲೋಕದಲ್ಲಿ ಉಪಕರಣಗಳೇ ಇಲ್ಲದಿರುವಾಗ ತನ್ನ ಲೋಹ ಕರ್ಮದಿಂದ ಲೋಕವನ್ನು ರಕ್ಷಿಸಿದನು. ದುಷ್ಟನಿಗ್ರಹಕ್ಕಾಗಿ ದೇವತೆಗಳಿಗೆ ಶಸ್ತ್ರಾಸ್ತ್ರಗಳನ್ನು ದಯಪಾಲಿಸಿದನು. ಶಿವನಿಗೆ ತ್ರಿಶೂಲವನ್ನೂ, ವಿಷ್ಣುವಿಗೆ ಚಕ್ರವನ್ನೂ, ಬ್ರಹ್ಮನಿಗೆ ಪಾಶವನ್ನೂ ನಿರ್ಮಿಸಿಕೊಟ್ಟನು. ಈತನು ರುದ್ರನೆಂಬ ಹೆಸರಿನಿಂದಲೂ ಕರೆಯಲ್ಪಡುತ್ತಾನೆ. ಕಬ್ಬಿಣದ ಲೋಹವನ್ನು ಸೃಷ್ಟಿಸುವುದು ಅದರಿಂದ ಲೋಕೋಪಯಕ್ತವಾದ ವಸುಗಳನ್ನು ನಿರ್ಮಾಣ ಮಾಡುತ್ತಾ ಈತ ಅಗ್ನಿ ಹೋತ್ರ ಮಾಡುತ್ತಾನೆ. ಗರ್ಭದಿಂದ ಹೊರಬಂದ ಶಿಶುಗಳ ನಾಭಿನಾಳವನ್ನು ಕತ್ತರಿಸಿ ಶಿಶುವನ್ನು ತಾಯಿಯಿಂದ ಬೇರ್ಪಡಿಸುವವನು. ಈತ ಧರ್ಮಾರ್ಥ, ಕಾಮ, ಮೋಕ್ಷ ಸಂಪಾದನೆಗಾಗಿ ಈತ ಕಾರ್ಮುನಿ ಕತ್ತಿಮನಿ ,ಕದಿರುಮನಿ,ಲೇಖನಿ ಮುನಿ ಮತ್ತು ತಕ್ಕಡಿ ಮುನಿಗಳನ್ನು ಮಾಡುತ್ತಾನೆ ಎಂದಿದೆ.

ಕಮ್ಮಾರರನ್ನು ಉತ್ತರ ಭಾರತದಲ್ಲಿ ಲೋಹಾರ ,ಲುಹಾರ್,ಕರ್ನಾಟಕದಲ್ಲಿ ಕಮ್ಮಾರ ಕಂಬಾರ ಎಂದೂ ತುಳು ಪಾಡ್ದನಗಳಲ್ಲಿ ಕಡ್ತಲೆಗಾರ,ಕಬ್ಬೊಟ್ಟಿಗಾರ ಎಂದು ಕರೆಯಲಾಗಿದೆ.

**೨.೩ ಶಾಸನಗಳಲ್ಲಿ ಕಮ್ಮಾರ, ಕಮ್ಮಾರಿಕೆಯ ವೃತ್ತಿ:**

"ಕನ್ನಡದ ಶಾಸನಗಳಲ್ಲಿ ಪಂಚಾಳ, ಕಮ್ಮಾವಿ, ಕಮ್ಮಾಳ, ಕಂಬಾರ, ಕಮ್ಮಾರ, ಮುಂತಾದ ಶಬ್ದಗಳು ಹಲವಾರು ಶಾಸನಗಳಲ್ಲಿ ದೊರೆಯುತ್ತವೆ. ಡಾ. ಚಿದಾನಂದಮೂರ್ತಿಯವರ ಕನ್ನಡ

ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ ಎಂಬ ಗ್ರಂಥದಲ್ಲಿ ಕಮ್ಮಾರರು ತಯಾರಿಸುತ್ತಿದ್ದ ಹಾಗೂ ಪ್ರಾಚೀನ ಕಾಲದಲ್ಲಿ ಯುದ್ಧಕ್ಕೆ ಬಳಸಲಾಗುತ್ತಿದ್ದ ಅಸ್ತ್ರಗಳ ಬಗೆಗೆ ಉಲ್ಲೇಖಿಸಿದ್ದಾರೆ. "ಕರವಾಳ, ತೋಲವಾಳ'ಎಂಬ ಕತ್ತಿಗಳನ್ನು ಕಡಿತಲೆ ಎಂಬ ಖಡ್ಗಗಳನ್ನು ಸಬಳೆ, ಕೊಂಡ, ಶಲ್ಯ, ಭಲ್ಯ,ಶೂಲ, ಕರ್ಡಡೆ, ಸುರಿಗೆ, ಮುಸಲ, ಭಂಡಿವಾಳ, ಈಟಿ, ಶಕ್ತಿ, ಪಂಚರಾಯುಧ, ತೋಮರ, ಗುರಾಣಿ, ಮುಂತಾದ ಆಯುಧಗಳನ್ನು ಬಂಡಿಗಳಲ್ಲಿ ಹೇರಿಕೊಂಡು ಯುದ್ಧಕ್ಕೆ ಒಯ್ಯಲಾಗುತ್ತಿತ್ತು ಎಂದು ತಿಳಿಸಿದ್ದಾರೆ. ಈ ವಸ್ತುಗಳನ್ನೆಲ್ಲಾ ಕಮ್ಮಾರರು ತಯಾರಿಸುತ್ತಿದ್ದರು ಎಂದು ತಿಳಿಯುತ್ತದೆ."[೯]

"ಕೃಷಿ ಸಹಾಯಕ್ಕೆ ದುಡಿದು ಮೂವರು ಕಮ್ಮಾರರನ್ನು ಒಂದು ಶಾಸನದಲ್ಲಿ ಅಪರೂಪಕ್ಕೆಂಬಂತೆ ಉಲ್ಲೇಖಿಸಿದ್ದಾರೆ". "ಕ್ರಿ.ಶ.೧೫೪೯ ರಲ್ಲಿ ಎಲ್ಲೋಜ, ತಿಮ್ಮೋಜ, ಮತ್ತು ಉಲ್ಲೋಜ ಎಂಬ ಕಮ್ಮಾರರು ನೀರನ್ನು ಎತ್ತುವ ಏತಕ್ಕಾಗಿ ಕಬ್ಬಿಣದ ಬಾನಿಯನ್ನು ತಯಾರಿಸಿ ನೀರೆತ್ತುವ ಈ ಬಾನಿಗಳನ್ನು ಧರ್ಮಕ್ಕೆಂದು ಮಾಡಿಕೊಡುತ್ತಾರೆ. ಇವರು ತಮ್ಮನ್ನು ಶ್ರೀಮತು ಕಾಳಿಕಾ ಕಮಟೇಶ್ವರ ದೇವರ ವರ ಪ್ರಸಾದಿಗಳು ಎಂದು ಹೇಳಿಕೊಂಡಿದ್ದಾರೆ"(SII) south 9.9:1x (II) p p 662 No 670) ಈ ಕಬ್ಬಿಣದ ಬಾನಿಯು ಹಂಪೆಯ ಮೌಲ್ಯವಂತ ರಘುನಾಥ ದೇವಾಲಯದಲ್ಲಿತ್ತು ಎಂದು ಹೇಳಲಾಗುತ್ತದೆ.

"ಕ್ರಿ.ಶ.೧೧೧೮ ರ ಶಾಸನವೊಂದರಲ್ಲಿ "ಭರತೇಶ್ವರ ದೇವರ ಕಮಾಪೆರೆ ದೆಶವನವ ಗಂಗಯನ ಕೇಲೋಜನುಂ ಗಂಗನುಂ ದೇವಗಿಣ ಕಾಲಂ ಕರ್ಚಿಕೊಟ್ಟರು' ಎಂಬ ಉಲ್ಲೇಖ ದೊರೆಯುತ್ತಿದೆ. ಇಲ್ಲಿ ಕಮ್ಮಾರಿಕೆಯಿಂದ ದೊರೆಯುವ ಆದಾಯದಲ್ಲಿಯ ೧/೧೦ ರಷ್ಟು ಭಾಗವನ್ನು ದೇವರಿಗೆ ಅರ್ಪಿಸಿದ ವಿವರ ದೊರೆಯತ್ತದೆ." [೧೦]

"ಕ್ರಿ.ಶ.೧೨೧೫ರಲ್ಲಿ ನಾಗಾವಿ ನಗರದ ಕಮಾರ ಬೊಮ್ಮೋಜನು ಶ್ರೀ ಮಹಾಬಳ ದೇವರ ಕಮ್ಮಾಟಕ್ಕೆ ಕೆಲಸವನ್ನು ಮಾಡಿ ಆದಾಯ ಪಡೆಯುತ್ತಾನೆ ಎಂಬ ಉಲ್ಲೇಖವಿದೆ. ಕೊಳಗಲ್ಲು ಶಾಸನವನ್ನು ಸಂಗ್ರಹಿಸಿ ಪ್ರಕಟಿಸಿದ ಎನ್.ಲಕ್ಷ್ಮೀನಾರಾಯಣರಾವ್ ಕಮ್ಮಾರನನ್ನು ಕುರಿತು ಅವರು "ತರ್ಕಾರಿತೊ" ಎಂದು ಅರ್ಥೈಸಿ, ಮಧುಸೂದನ ಉತ್ತರ ಭಾರತದಿಂದ ಬಂದವನೆಂದು ಹೇಳಿದ್ದಾರೆ[All that we know about Madhusudana the author of this inscription, is that he was the son of Atibala and grand son of Rishi that he was a dvija of the Kammar kula and that his ancestors emigrated from Tarkari. As the preserved portion of the last verse of the Kudutini epigraph reffered to above is an exact copy of the 22nd verse of our record the former also appears to have been composed by this same who flourished in this period of the Geographical names occuring in the Inscription ..... as to Tarkari there seen to be a number of places of this name but the Tarkari of the

present Inscription is i think the famous Tarkari 16 miles north -west of Gaya ( EI vol xxi p.p 260-67) ಬಹುಶಃ ಈ ಶಾಸನದಲ್ಲಿಯೂ ಕುಡುತಿನಿ ಶಾಸನದಲ್ಲಿರುವಂತೆ ತ್ಕಾರಿತೊ ಎಂದಿರಬೇಕು. ಆ ಗ್ರಾಮದ ಮತ್ತೊಂದು ಶಾಸನವು ಶಾಸನ ಕವಿಯನ್ನು "ಮಯೂರ ಮುದ್ರಾಹಸ್ತ ಶ್ರೀ ಸೋಮೇಶ್ವರಾಸ್ತಾನೇ I ಪ್ರಮಾಣ್ಯಂ ಯದಿ ವೇದೀಷು ಬ್ರಹ್ಮ ವಿಷ್ಣು ಮಹೇಶ್ವರೇ ದೇವಕಾಗ್ರತ್ರಯಸ್ಯಾಪಿ ಲಬ್ದಸ್ಯಾಸ್ತಿ ಪ್ರಮಾಣತಾI ಶ್ರೀ ಕರ್ಮಾರ ಕುಳಾಹ್ಯ ಯದಿಜವxx ಗ್ರಾಮಸ್ಯxxx ತೋ ನಿಷ್ಕ್ರಮ್ಯ ಕ್ರಮ" ಎಂದು ವರ್ಣಿಸುತ್ತದೆ. ಈ ಶಾಸನದ ಕತೃವಿನ ಹೆಸರು ತೃಟಿತವಾಗಿದೆ. ಈ ಎಲ್ಲಾ ವಿಷಯಗಳಿಂದ ಅವರೆಲ್ಲರು ಉತ್ತರ ಭಾರತದಿಂದ ಬಂದವರಾಗಿರದೇ ಇದೇ ಪ್ರದೇಶದ ಕಮ್ಮಾರ ಕುಲದ ಬ್ರಾಹ್ಮಣ ವಂಶಕ್ಕೆ ಸಂಬಂಧಿಸಿದವರಾಗಿದ್ದು, ಅವರ ವಂಶಜರು ಋಷಿ ಪಂಡಿತರಾಗಿದ್ದರೆಂದು ತಿಳಿದು ಬರುತ್ತದೆ." ೧೧

"ಕಮ್ಮಾರರ ವಂಶಸ್ಥರು ರಾಷ್ಟ್ರಕೂಟರ ಕಾಲಕ್ಕೆ ತಪೋವನಾಧಿಕಾರಿಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದರು ಎಂದು ತಿಳಿದು ಬರುತ್ತದೆ. "ಈ ಕಾರ್ತಿಕೇಯ ತಪೋವನಾಧಿಕಾರಿಗಳು ತಮ್ಮನ್ನು ಕರೆದುಕೊಳ್ಳುವಾಗ "ಲೋಹಾಸನಿ, ದಂಡಾಸನಿ" ಎಂದು ಗುರುತಿಸಿಕೊಂಡಿದ್ದಾರೆ. ಲೋಹಾಸನಕ್ಕೆ ಸಂಬಂಧಿಸಿದ ಕಥೆಯ ಪ್ರಕಾರ ಕಮ್ಮಾರನು ಸೂರ್ಯನಿಂದ ಶಾಖ ತೆಗೆದುಕೊಂಡು ಲೋಹದಿಂದ ಲೋಹೇಶ್ವರ (ಲೋಹಕ್ಕೆ ಒಡೆಯ)ನಿಗೆ ಆಸನ ಮಾಡಲು ಪ್ರಾರಂಭಿಸುತ್ತಾನೆ. ಆ ಆಸನ ಸರಿಯಾಗಿ ಹೊಂದದೇ ಇರುವುದಕ್ಕೆ ಚಿಂತಾಗ್ರಸ್ತನಾಗಿದ್ದಾಗ ಆ ದಿನ ರಾತ್ರಿ ಮಹೇಶ್ವರನು ಕನಸಿನಲ್ಲಿ ಬಂದು ಆಸನ ಮಾಡುವ ಬಗೆ ಮತ್ತು ಅದರ ಲಕ್ಷಣಗಳನ್ನು ಹೇಳುತ್ತಾನೆ. ಮರುದಿವಸ ಆತನ ಹೇಳಿಕೆಯ ಪ್ರಕಾರ ಆಸನ ನಿರ್ಮಿಸಿದಾಗ ಅದು ಸರಿಯಾಗುತ್ತದೆ. ಲೋಹಾಸನಿ, ದಂಡಾಸನಿ ಎನ್ನುವುದು, ಲೋಹತಂತ್ರಗಾರಿಕೆ ಮತ್ತು ಕಟ್ಟಿಗೆಯ ಕೆಲಸಗಳಿಗೆ ಮುಖಂಡತ್ವವನ್ನು ಸೂಚಿಸುತ್ತದೆ. ಬೆಟ್ಟದ ದಾರಿಯಲ್ಲಿ ಹರಡಿರುವ ಕಬ್ಬಣದ ಅದಿರು ಲೋಹದ ಕೆಲಸಕ್ಕೆ ಮತ್ತು ಕಾಡು ಕಟ್ಟಿಗೆಯ ಕೆಲಸಕ್ಕೆ ಅನುಕೂಲವಾಗಿದ್ದವು. ಹೀಗಾಗಿ ಇಲ್ಲಿ ಈ ಎರಡೂ ಕಾರ್ಯಗಳು ಅತೀ ಪ್ರಾಚೀನ ಕಾಲದಿಂದಲೂ ಅಭಿವೃದ್ಧಿಯಲ್ಲಿದ್ದವು. ಕುಡುತಿನಿಯ ಶಾಸನವು ಸುಧಾಶೀಳ ಕಾಷ್ಟೇಷ್ಟಕಂ ಚಿತ್ರಕಾಂಚನ ಲೋಹಾದಿ ಕಣ್ದಸ್ಸುಟಿತನವಕರ್ಮ್ಮ xxxx ತುರಾಶ್ರಮ xx ಗಿಗಳ xx ರ್ತ್ಥಿಗೆ ಹೊತ್ತಗೆಗಾ (ಕ್ಷರಾರ್ತ್ಥಿ)ಗಾಹಾರಕಂ ಬಿಟ್ಟಿಕಯಿ" ಎಂದು ಉಲ್ಲೇಖಿಸುವುದರಿಂದ ಕಾಷ್ಟ, ಲೋಹ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಿರುವವರ ಆಹಾರಕ್ಕೆ ಭೂ ದಾನ ಬಿಡಲಾಗಿತ್ತೆಂದು ತಿಳಿಯುತ್ತದೆ. ಈ ಶಾಸನವು ಬಹಳ ತೃಟಿತವಾಗಿದ್ದು ಬರವಣಿಗೆ ಭಾಷೆಗಳಿಂದ ಇದು ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದೆ."೧೨

ಕಮ್ಮಾರರು ಅನೇಕ ಬಿಟ್ಟಿ ಕೆಲಸಗಳನ್ನು ರಾಜ ಮಹಾರಾಜರ ಕಾಲಕ್ಕೆ ಮಾಡಬೇಕಾಗುತ್ತಿತ್ತು. ಅದಕ್ಕೆ ಉದಾಹರಣೆ ಈ ಶಾಸನ. "ಕ್ರಿ. ಶ. ೧೧೦೬ರ ಶಾಸನವೊಂದರಲ್ಲಿ ಉಕ್ತವಾಗಿರುವ "ಕಮ್ಮರ ವಿಟ್ಟ "ಎಂಬ ಉಕ್ತಿಯು ಕಮ್ಮಾರರು ಬಿಟ್ಟಿ ಕೆಲಸ ಮಾಡಬೇಕಾದುದನ್ನು ಸೂಚಿಸುತ್ತದೆ."(ಸಾ.ಇ.ಇ

XV ಪು ೯೨ ನಂ ೬೭) ಕ್ರಿ.ಶ.೧೧೧೮೫

**೨.೪ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಕಮ್ಮಾರ ಹಾಗು ಕಮ್ಮಾರಿಕೆ ವೃತ್ತಿ :**

ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಅಂದರೆ ವಡ್ಡಾರಾಧನೆಯಿಂದ ಹಿಡಿದು ದಾಸಸಾಹಿತ್ಯದವರೆಗೆ ಕಮ್ಮಾರ ಅವನ ಲಕ್ಷಣಗಳು ಕಮ್ಮಾರಿಕೆ ವೃತ್ತಿಯ ಸ್ವರೂಪಗಳನ್ನು ಅನೇಕ ಉಪಮೆ, ದೃಷ್ಟಾಂತಗಳಾಗಿ ಬಳಕೆಯಾಗಿರುವುದು ಕಂಡುಬರುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ "ಕಮ್ಮಾರ" "ಕಾರು ಗೃಹ" ಮುಂತಾದ ಶಬ್ಧಗಳ ಬಳಕೆಯಾಗಿದೆ.

ಕ್ರಿ.ಶ. ೧೪೫೮ ರಲ್ಲಿ ರಚನೆಯಾದ "ಅಭಿನವಾಭಿದಾನಂ" ಎಂಬ ಕೃತಿಯಲ್ಲಿ ಕಮ್ಮಾರರು ಬಾಣಗಳನ್ನು ತಯಾರಿಸುತ್ತಿದ್ದರು. ಈ ಬಾಣಗಳನ್ನು ತಯಾರಿಸಲಿಕ್ಕೆ ಪ್ರತ್ಯೇಕವಾದ ಕಾರುಗೃಹ ಅಥವಾ ಶರಶಾಲೆಗಳಿದ್ದವು ಎಂದು ತಿಳಿಯುತ್ತದೆ.

ರಾಘವಾಂಕನ ತನ್ನ ಸಿದ್ಧರಾಮ ಚರಿತೆಯಲ್ಲಿ ಕಮ್ಮಾರರು "ಕಿಡಿಗಳನ್ನು ಉಗುಳುವ ಕುಲುಮೆಗಳ ಮುಂದೆ ಕುಳಿತು ಪಂಚಲೋಹದ ಗಟ್ಟಿಗಳನ್ನು ಕೆಂಪಾಗಿ ಕಾಯಿಸಿ ಉದ್ದನೆಯ ಇಕ್ಕಳದಿಂದ ಹಿಡಿದ ಕಮ್ಮಾರರು ಕರ್ಕಶವಾಗಿ ಶ್ರಮವಹಿಸಿ ಕೆಲಸ ಮಾಡುತ್ತಿದ್ದರು. ಎಂದು ತಿಳಿಸಿದ್ದಾನೆ.

"ರಾಜಶೇಖರ ವಿಳಾಸದಲ್ಲಿ ಕಾರುಕರು ಕಮ್ಮಾರರು ಬಾಣಗಳನ್ನು ತಯಾರಿಸುತ್ತಿದ್ದರು. ಬಾಣಗಳನ್ನು ತಯಾರಿಸಲು ಅವರದೇ ಆದ ಕಾರ್ಯಾಗಾರಗಳಿದ್ದವು. ಆಯುಧ ಮಾಡುತ್ತಿದ್ದ ಕಾರ್ಯಾಗಾರಗಳನ್ನು ಕಮ್ಮಟಗಳೆಂದು" ಕರೆಯುತ್ತಿದ್ದರು.

ಕಾವ್ಯಾವಲೋಕನದಲ್ಲಿ ಡಾ. ಚಿದಾನಂದಮೂರ್ತಿ ಅವರು ಕೇಶಿರಾಜನ ಶಬ್ದಮಣಿದರ್ಪಣದ ಉದಾಹರಣೆ ನೀಡಿದ್ದಾರೆ. "ಭೀಮನು ಆನೆಯೊಂದನ್ನು ಒತ್ತಲಾಗಿ ಅದರ ಬಾಯಿಯಿಂದ ಒಸರುವ ಕೆಂಪಾದ ರಕ್ತವು ಕಮ್ಮಾರನ ತಿದಿಯ ಒಲೆಯಲ್ಲಿ ಜ್ವಲಿಸುವ ಬೆಂಕಿಯಂತೆ ಕಾಣುತ್ತಿತ್ತು. ಅದನ್ನು ಒತ್ತುತ್ತಿರುವ ಭೀಮ ಕಮ್ಮಾರನಂತಿದ್ದನು" ಎಂದು ವರ್ಣಿಸಿದ್ದಾರೆ.

ನಯಸೇನ ತನ್ನ ಧರ್ಮಾಮೃತದಲ್ಲಿ "ಕಮ್ಮಟರಿಲ್ಲದೆ ಬಡ್ಡಾಗಿ ಶಸ್ತ್ರಂಗಳಾಗವು ಕಮ್ಮುಟಿನಂತೆ ಕಾಸಿ ಬಡಿವರ್, ಬಡಿಗಿಯಂತೆ ಕೆತ್ತುವರ್" ಎಂದು ಹೇಳಿದ್ದಾನೆ. ಕೆಲ ಕಮ್ಮಾರರು ಬಡಿಗಿತನವನ್ನು ಸಹ ಮಾಡುತ್ತಿದ್ದರೆಂದು ತಿಳಿಯುತ್ತದೆ. ವಚನಕಾರರು ಸಹ ಕಮ್ಮಾರ ಶಿಲ್ಪವನ್ನು ಬಳಸಿದ್ದಾರೆ.

ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ
ಸಾಕ್ಷಾತ್ ಕಬ್ಬಿಲ ದುರ್ವಾಸ ಮುಟ್ಟಿಗ
ಕಶ್ಯಪ ಕಮ್ಮಾರ

ಬಸವಣ್ಣನವರು ತಮ್ಮ ವಚನದಲ್ಲಿ ನಾನು ಕಶ್ಯಪ ಕಮ್ಮಾರನ ಮಗ ಎಂದಿದ್ದಾರೆ. ಕಶ್ಯಪ ಋಷಿ ವೇದ ಕಾಲದ ಒಬ್ಬ ಶ್ರೇಷ್ಟ ಲೋಹ ಶಿಲ್ಪಿಯಾಗಿದ್ದ ಎಂದು ತಿಳಿಯುತ್ತದೆ.

ಹೇಮತ್ವ ಉಳ್ಳವರು ಹೆಮ್ಮೆಯನ್ನು ಮರೆದರು
ಸುಮ್ಮನಿದ್ದವರು ಮರೆದರೆ ಧರ್ಮದ

## ಕಮ್ಮಾರನಲಿ ಮೆರೆವೆನು ಬಸವಣ್ಣ

ಪಂಚಾಳರ ಸಮುದಾಯದ ಸಾಂಸ್ಕೃತಿಕ ನಾಯಕನಾದ ಮೌನೇಶ್ವರನು ೧೨ನೆಯ ಶತಮಾನದ ಬಸವಣ್ಣನ ಶಿಷ್ಯತ್ವವನ್ನು ಸ್ವೀಕರಿಸಿದ. ಮೌನೇಶ್ವರ ವೃತ್ತಿಯಲ್ಲಿ ಕಮ್ಮಾರ. ಮೌನೇಶ್ವರನು ಸಹ "ಎಸೇನು ಜನ್ಮದಲ್ಲಿ ಕಶ್ಯಪನ ಮಗ ನಾನು" ಎಂದು ಹೇಳಿಕೊಂಡಿದ್ದಾನೆ. ತಿಂಥಣಿಯಲ್ಲಿ ಇಂದಿಗೂ ಅಲ್ಲಿ ಸುಟ್ಟ ಕಬ್ಬಿಣದ ಕಿಟ್ಟದ ರಾಶಿ ಕಂಡುಬರುತ್ತದೆ. ಇದು ಮೌನೇಶ್ವರನ ಕಾಲದ್ದು ಎಂದು ಹೇಳುತ್ತಾರೆ. ಮೌನೇಶ್ವರನು ತನ್ನ ವಚನದಲ್ಲಿ "ಕಲ್ಲು ಬಂಡ್ಯಾಗ ತಿದಿಹೂಡಿ ಕಮ್ಮಾರಿಕೆ ಮಾಡಿದೆ" ಎಂದು ತಿಳಿಸುತ್ತಾನೆ. ಶ್ರೀಮಂತರು ಸಂಪತ್ತನ್ನಟ್ಟಿಕೊಂಡು ಮರೆಯುತ್ತಾರೆ. ನನ್ನಲ್ಲಿರುವುದು ಕಬ್ಬಿಣ. ನಾನು ಬಡವ. ಧರ್ಮದ ಸಂಪತ್ತು ನನ್ನಲ್ಲಿದೆ. ಅದಕ್ಕಾಗಿ ನಾನು

ಆದಿಯಲ್ಲಿ ಅಡಿಗಲ್ಲು ಬಾದೆಗೆ ಚಿಮ್ಮಟಗಿ
ಕಾದ ಕಬ್ಬಿಣದ ಇಕ್ಕಳದಲ್ಲಿ ಓಡಿದು
ಮಾಡುವುದಿದು ಭೂದೇವಿಯ ವಸ್ತುವ ಬಸವಣ್ಣ

ಎನ್ನುತ್ತಾನೆ. ಮೌನೇಶ್ವರನ ಪ್ರಕಾರ ಅಡಿಗಲ್ಲು ಎಂದರೆ ಧರ್ಮ. ಅದು ಗಟ್ಟಿಯಾಗಿರಬೇಕು. ಈ ದೇಹವೇ ಕಾದ ಕಬ್ಬಿಣ. ಅದು ದುಷ್ಟಬಾದೆಯಿಂದ ಬಳಲುತ್ತಿರುತ್ತದೆ. ಅದನ್ನು ಇಕ್ಕಳದಲ್ಲಿ ಹಿಡಿದೆತ್ತಿ, ಅಂದರೆ ಧರ್ಮವೆಂಬ ಇಕ್ಕಳದಲ್ಲಿ ಎತ್ತಿ ಹಿಡಿದು ಅದಕ್ಕೆ ಚನ್ನಾಗಿ ಧರ್ಮದ ಬೋಧನೆ ಮಾಡಬೇಕು ಎಂದು ಹೇಳಿದ್ದಾನೆ.

ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಸಾಂಸ್ಕೃತಿಕ ನಾಯಕ ಸಿದ್ದಪ್ಪಾಜಿ ಮೂಲತಃ ಕಮ್ಮಾರ. ಈ ಕಾವ್ಯದಲ್ಲಿ ಕಬ್ಬಿಣ ತಯಾರಿಕೆ ಅದರ ಮಹತ್ವ ಉಪಯುಕ್ತತೆ ಮುಂತಾದ ವಿಷಯಗಳ ಬಗ್ಗೆ ವಿವರಿಸಲಾಗಿದೆ. ಜೀ.ಶಂ.ಪರಮಶಿವಯ್ಯ ಅವರ ಮಂಟೇಸ್ವಾಮಿ ಕಾವ್ಯದಲ್ಲಿ 'ಹಲಗೂರು ಗ್ರಾಮದಲ್ಲಿ ಏಳುನೂರ ಐವತ್ತು ಪಂಚಾಳ ಒಕ್ಕಲು. ಅವರಿಗೆ ಕಾಳೋಜಿ, ನಿಂಬೋಜಿ, ಬೇಟೋಜಿ, ಎರಡೋಜಿ, ಸಿಂಗೋಜಿ, ಚನ್ನೋಜಿ, ಸರಸೋಜಿ ಎಂಬ ಏಳು ಜನ ವಾಜ ಕುಲ ದಣಿಗಳು. ಇವರಿಗೆ ಏಳು ಕುಲುಮೆಗಳು. ತಮ್ಮ ಕುಲುಮೆಗಳಲ್ಲಿ ಇವರು ತಲಕಾಡಿನ ಚಾಮರಾಜ ಒಡೆಯರಿಗೆ ಕತ್ತಿ, ಫಿರಂಗಿ, ಬಂದೂಕು ಮುಂತಾದ ಆಯುಧಗಳನ್ನು ತಯಾರಿಸಿ ಕೊಡುತ್ತಿದ್ದರೆಂದು ತಿಳಿಯುತ್ತದೆ.

"ಕ್ರಿ.ಶ.ಆರಂಭದಿಂದಲೇ ಕಮ್ಮಾರರು, ಬಡಿಗೇರರು, ಅಕ್ಕಸಾಲಿಗರು, ಕಂಚುಗಾರರು ಶಕ್ತಿಯ ಆರಾಧಕರಾಗಿದ್ದರು. ಇವರೆಲ್ಲರೂ ಬುಡಕಟ್ಟು ಸಮುದಾಯದವರೇ ಆಗಿದ್ದರು. ವಿವಿಧ ವಸ್ತುಗಳನ್ನು ತಯಾರಿಸುವ ಕುಶಲಕರ್ಮಿಗಳಾದ ಇವರ ವೃತ್ತಿ ತಂತ್ರಗಳೆಲ್ಲವೂ ಒಂದೇ ಆಗಿದ್ದವು. ಉದಾಹರಣೆಗೆ ಚಿನ್ನ. ಕಂಚು ಹಾಗು ಕಬ್ಬಿಣವನ್ನು ಲೋಹದಿಂದ ಬೇರ್ಪಡಿಸುವ ತಂತ್ರಗಳು ಸಾಮಾನ್ಯವಾಗಿ ಒಂದೇ ಸ್ವರೂಪದಲ್ಲಿದ್ದವು. ಹೀಗಾಗಿ ಇವರೆಲ್ಲರೂ ಒಟ್ಟಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿದರು. ಈ ಲೋಹ ತಯಾರಿಕೆಯಲ್ಲಿ ಅವುಗಳ ಬಣ್ಣ ಬದಲಾಯಿಸಲು ಗಿಡಮೂಲಿಕೆಗಳನ್ನು ಉಪಯೋಗಿಸಲಾಗುತ್ತಿತ್ತು. ಅದರಲ್ಲಿ ತಜ್ಞರಾಗಿರುವ ಬಡಿಗಿ ಅವರೊಂದಿಗೆ ಕೂಡಿಕೊಂಡರೆ,

ಇವರು ತಯಾರಿಸುವ ಲೋಹದಿಂದ ವಿವಿಧ ವಸ್ತುಗಳನ್ನು ತಯಾರಿಸುತ್ತಿದ್ದ ಶಿಲ್ಪಿಯೂ ಕೂಡ ಈ ಗುಂಪಿನಲ್ಲಿ ಒಬ್ಬಾದ. ಈ ರೀತಿಯಲ್ಲಿ ಬೆಳೆದ ಐದು ವರ್ಗದವರು ಆರ್ಥಿಕವಾಗಿ ಪ್ರಬಲರಾಗುತ್ತ ಬಂದರು. ನಂತರ ರಾಜರ ಆಶ್ರಯ, ಜನರ ಮನ್ನಣೆ ದೊರೆತದ್ದರಿಂದ ಇವರು ಬುಡಕಟ್ಟು ಜನರಿಂದ ಪ್ರತ್ಯೇಕವಾಗಿ ಗುರುತಿಸಿಕೊಂಡರು." [೧೩]

ಬೇಟೆ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಆದಿಮಾನವ ಕಾಲಿಟ್ಟಾಗ ಅಂದರೆ ಆಹಾರ ಉತ್ಪಾದನೆಯನ್ನು ಕಂಡುಕೊಂಡ ಮೇಲೆ ಅದನ್ನು ಪರಿಷ್ಕರಿಸುವ ಹಂತದಲ್ಲಿ ಆದಿಮಾನವ ಕಬ್ಬಿಣವನ್ನು ಕಂಡುಕೊಂಡ. ಕಬ್ಬಿಣದ ಮೂಲಕ ಅನೇಕ ಕೃಷಿ ಉಪಕರಣಗಳನ್ನು, ಆಯುಧಗಳನ್ನು ಸಿದ್ಧಪಡಿಸಿಕೊಂಡು ಆತ್ಮರಕ್ಷಣೆ ಮತ್ತು ಆಹಾರ ಉತ್ಪಾದನೆ ಮಾಡಿಕೊಳ್ಳತೊಡಗಿದ. ಆತ್ಮರಕ್ಷಣೆಗಾಗಿ, ಕೃಷಿಗಾಗಿ ಉಪಯೋಗಿಸಲು ಆಯುಧಗಳ, ಕೃಷಿ ಸಲಕರಣೆಗಳ ಬೇಡಿಕೆ ಹೆಚ್ಚಾದಂತೆ ಕಬ್ಬಿಣದಿಂದ ಆಯುಧ ಹಾಗು ಇತರೆ ಸಲಕರಣೆಗಳನ್ನು ತಯಾರಿಸಲಿಕ್ಕೆಂದೇ ಮೀಸಲಾದ ಕುಟುಂಬಗಳು ಬೆಳೆಯ ತೊಡಗಿದವು.

ಬಳ್ಳಾರಿ, ಕುದುರೆಮುಖ ಮುಂತಾದ ಬೆಟ್ಟಗಳಲ್ಲಿ ಕಬ್ಬಿಣದ ಅದಿರು ಹೇರಳವಾಗಿ ದೊರೆಯುತ್ತಿದ್ದುದರಿಂದ, ಅದಿರಿನಿಂದ ಕಬ್ಬಿಣವನ್ನು ಬೇರ್ಪಡಿಸುವುದು ಮತ್ತು ಕಬ್ಬಿಣದ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕೆಲಸದಲ್ಲಿ ಈ ಕಮ್ಮಾರರು ನಿರತರಾದರು. ಪ್ರಾಗೈತಿಹಾಸಕಾಲದಲ್ಲಿ ಕಬ್ಬಿಣದ ಆಯುಧಗಳನ್ನು ಕಾಡುಪ್ರಾಣಿಗಳಿಂದ ರಕ್ಷಣೆ ಪಡೆಯುವುದಕ್ಕೆ ಮತ್ತು ಆಹಾರ ಸಂಗ್ರಹಣೆಗೆ ಬಳಸಿದರೆ, ಇತಿಹಾಸಕಾಲದಲ್ಲಿ ದೊಡ್ಡ ದೊಡ್ಡ ಸಾಮ್ರಾಜ್ಯಗಳು ತಲೆಯತ್ತಿ, ಅವುಗಳ ಅಳಿವು-ಉಳಿವು ಯುದ್ಧವನ್ನು ಅವಲಂಬಿಸಿದ್ದರೆ, ಯುದ್ಧದ ಸೋಲು ಗೆಲುವು ಶಸ್ತ್ರಾಸ್ತ್ರಗಳನ್ನು ಅವಲಂಬಿಸಿತ್ತು. ಈ ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿದ್ದ ಕಮ್ಮಾರರ ಬೇಡಿಕೆ ಅಧಿಕವಾಯಿತು. ರಾಜ-ಮಹಾರಾಜರುಗಳಿಗೆ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುತ್ತಿದ್ದ ಕಮ್ಮಾರರ ಕುಟುಂಬಗಳಿಗೆ ಸಾಮಾಜಿಕ ಸ್ಥಾನ ಮಾನ ನೀಡಿ ಅವರಿಗೆ ಬೇಕಾದ ಸವಲತ್ತುಗಳನ್ನು ಒದಗಿಸಿ, ಅವರನ್ನು ಸಂತೃಪ್ತಿಗೊಳಿಸಿ ಅಥವಾ ಅಧಿಕಾರದ ದರ್ಪದಿಂದ ಕಮ್ಮಾರಿಕೆ ವೃತ್ತಿಯವರನ್ನು ಹಿಡಿದು ತಂದು ಆಯುಧಗಳನ್ನು, ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಒಂದೆಡೆ ಕೃಷಿಗೆ ಬೇಕಾದ ಉಪಕರಣಗಳನ್ನು ಇನ್ನೊಂದೆಡೆ ರಾಜರಿಗೆ ಬೇಕಾದ ಶಸ್ತ್ರಾಸ್ತ್ರಗಳನ್ನು ತಯಾರಿಸಿಕೊಡುತ್ತಿದ್ದ ಈ ಕಮ್ಮಾರರು ಉತ್ತಮ ಸ್ಥಿತಿಯಲ್ಲಿ ಇದ್ದರು ಎಂದು ಹೇಳಬೇಕಾಗುತ್ತದೆ. ಆಧುನಿಕತೆ, ತಂತ್ರಜ್ಞಾನ ಬೆಳೆದಂತೆಲ್ಲ ಕಮ್ಮಾರರು ಸಿದ್ಧಪಡಿಸುತ್ತಿದ್ದ ವಸ್ತುಗಳೆಲ್ಲಾ ಕಾರ್ಖಾನೆಗಳಲ್ಲಿ ಉತ್ಪಾದನೆಯಾಗತೊಡಗಿದಂತೆ ಕಮ್ಮಾರರ ಸ್ಥಿತಿಗಳು ಹಂತ ಹಂತವಾಗಿ ಮೂಲೆಗುಂಪುಗಳಾಗುತ್ತ ಸಾಗಿವೆ ಎಂದು ಹೇಳಬಹುದು.

ಗ್ರಾಮೀಣ ಪ್ರದೇಶಗಳ ಮೂಲ ವೃತ್ತಿ ಕೃಷಿ. ಕೃಷಿಗೆ ಹಾಗೂ ಕಮ್ಮಾರಿಕೆಗೆ ಅವಿನಾಭಾವ ಸಂಬಂಧವಿದೆ. ಎಲ್ಲಿ ಕೃಷಿ ವೃತ್ತಿ ಇರುತ್ತದೆಯೋ ಅಲ್ಲಿ ಕಮ್ಮಾರರ ಕುಟುಂಬಗಳಿರುತ್ತವೆ ಎಂದೇ ಅರ್ಥ. ಕೃಷಿ ಚಟುವಟಿಕೆಗೆ ಬೇಕಾಗುವ ಎಲ್ಲ ಕಬ್ಬಿಣದ ವಸ್ತುಗಳು ಒಂದು ಕಾಲಕ್ಕೆ ಕಮ್ಮಾರರ

ಕುಲುಮೆಗಳಲ್ಲಿಯೇ ಸಿದ್ಧವಾಗುತ್ತಿದ್ದವು. ಕಮ್ಮಾರನಿಲ್ಲದೇ ಕೃಷಿ ಇಲ್ಲ ಎಂಬ ಮಾತು ಗ್ರಾಮೀಣ ಪರಿಸರದಲ್ಲಿ ಪ್ರಚಲಿತದಲ್ಲಿದೆ. ಮುಂಗಾರು ಮಳೆ ಪ್ರಾರಂಭವಾದರೆ ಕಮ್ಮಾರನಿಗೆ ಬಿಡುವಿಲ್ಲದ ಕೆಲಸ. ಒಂದು ಕಾಲಕ್ಕೆ ಕಮ್ಮಾರರನ್ನು ಹಳ್ಳಿಗರು ಅತ್ಯಂತ ಪೂಜ್ಯ ಭಾವನೆಯಿಂದ, ಗೌರವದಿಂದ ಕಾಣುತ್ತಿದ್ದರು. ಇಂದು ಆ ಸ್ಥಾನ ಮಾನಗಳು ಕಡಿಮೆಯಾಗುತ್ತಿವೆ. ಆಧುನಿಕ ಕೃಷಿ ಯಂತ್ರೋಪಕರಣಗಳು ಕಾರ್ಖಾನೆಗಳಲ್ಲಿ ಸಿದ್ಧವಾಗುವುದರಿಂದ ಕಮ್ಮಾರಿಕೆ ವೃತ್ತಿಗೆ ತುಕ್ಕು ಹಿಡಿದು ಅವರ ಸ್ಥಿತಿಗಳು ಅತಂತ್ರವಾಗುತ್ತಿವೆ.

**೨.೫ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ:**

ಅಭಿಜಿತ ದಕ್ಷಿಣ ಕನ್ನಡದ ಭಾಷೆ ತುಳು. ಈ ಭಾಷೆ ಪಂಚದ್ರಾವಿಡ ಭಾಷೆಗಳಲ್ಲಿ ಒಂದು. ಈ ಭಾಷೆಯನ್ನು ಈ ಪ್ರದೇಶದ ಬೇರೆ ಬೇರೆ ಜನಾಂಗದ ಜನತೆ ತಮ್ಮ ಮಾತೃಭಾಷೆಯನ್ನಾಗಿ ಅಲಂಕರಿಸಿದ್ದಾರೆ. ಸಾಂಪ್ರದಾಯಿಕವಾಗಿ "ತುಳುನಾಡು" ಎಂದು ಕರೆಯಲಾಗುತ್ತಿತ್ತು. ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣದಲ್ಲಿ ಕಾಸರಗೊಡಿನ ಚಂದ್ರಗಿರಿಹೊಳೆ, ಉತ್ತರದಲ್ಲಿ ಕಲ್ಯಾಣಪುರ ಹೊಳೆ, ಇವುಗಳ ನಡುವಿನ ಜನರು ಹೆಚ್ಚಾಗಿ ಮಾತನಾಡುವ ಭಾಷೆ ತುಳು. ಇದರ ಜೊತೆಗೆ ಕನ್ನಡ, ಕೊಂಕಣಿ, ಮರಾಠಿ, ಹಾಗು ಕನ್ನಡದ ಉಪಭಾಷೆಗಳಾದ ಹವ್ಯಕ ಕನ್ನಡ, ಕೋಟ ಕನ್ನಡ, ಉರ್ದು, ಗುಜರಾತಿ, ತಮಿಳು, ಮೊದಲಾದ ಭಾಷೆಗಳನ್ನು ಮಾತನಾಡುವವರಿದ್ದಾರೆ. ತುಳು ಭಾಷೆಯಲ್ಲಿ ಶಿವಳ್ಳಿ ಬ್ರಾಹ್ಮಣರ ಭಾಷೆ ಪ್ರತ್ಯೇಕವಾದ ಉಪ ಭಾಷೆಯಾಗಿದೆ. ತುಳುವಿನ ಪ್ರಾದೇಶಿಕ ಉಪ ಭಾಷೆಗಳ ಹೊರತಾಗಿ ಈ ಪ್ರದೇಶದಲ್ಲಿ ತುಳುವನ್ನು ಜನರು ಎರಡು ರೀತಿಯಲ್ಲಿ ಮಾತನಾಡುತ್ತಾರೆ.

೧. ತುಳುವನ್ನು ಮಾತೃಭಾಷೆಯಾಗಿ ಬಳಸುವವರು
೨. ಕೊಂಕಣಿ, ಮಲೆಯಾಳಂ, ಮರಾಠಿ, ಉರ್ದು, ಕನ್ನಡದ ಉಪಭಾಷೆಗಳ ಸಂಪರ್ಕ ಭಾಷೆಯನ್ನಾಗಿ ಬಳಸುತ್ತಾರೆ.

ಈ ಪ್ರದೇಶದ ಜನರು ಹೆಚ್ಚಾಗಿ ತುಳು ಭಾಷೆಯಲ್ಲಿ ವ್ಯವಹರಿಸುವುದರಿಂದ ತುಳುವನ್ನು ಈ ಪ್ರದೇಶದ ವ್ಯವಹಾರಿಕ ಭಾಷೆ ಎಂದು ಕರೆಯಬಹುದಾಗಿದೆ. ಶಿವಳ್ಳಿ ಬ್ರಾಹ್ಮಣರು, ಸ್ಥಾನಿಕರು, ಬಂಟರು, ಜೈನರು, ಗೌಡರು, ಮೂಲ್ಯರು, ಹರಿಜನರು, ಕಮ್ಮಾರರು ಹಲವೆಡೆ ಪ್ರೋಟೆಸ್ಟಂಟ್ ಕ್ರಿಶ್ಚಿಯನ್ನರು ತುಳು ಭಾಷೆಯನ್ನು ತಮ್ಮ ಮಾತೃ ಭಾಷೆಯ ರೂಪದಲ್ಲಿ ಬಳಸುತ್ತಿದ್ದಾರೆ. ಆದ್ದರಿಂದ ತುಳುವಿನ ಅನೇಕ ಉಪಭಾಷೆಗಳನ್ನು ಗುರುತಿಸಬಹುದಾಗಿದೆ.

ದ್ರಾವಿಡ ಭಾಷಾವರ್ಗದ ಪ್ರಮುಖ ಭಾಷೆಗಳಾದ ಕನ್ನಡ, ತಮಿಳು, ಮಲೆಯಾಳಂ, ತೆಲುಗು ಭಾಷೆಗಳಂತೆ ತುಳು ಭಾಷೆಗೆ ಸ್ವತಂತ್ರವಾದ ಲಿಪಿ ಇರುವುದು ಕಂಡು ಬರುವುದಿಲ್ಲ. ತುಳುಲಿಪಿ ಈಗಲೂ ಇದೆ ಎಂದು ವಿದ್ವಾಂಸರ ಅಭಿಪ್ರಾಯವಿದೆ. ಕೆಲವು ಅಕ್ಷರ ವ್ಯತ್ಯಾಸಗಳನ್ನು ಹೊರತು ಪಡಿಸಿದರೆ, ಉಳಿದಂತೆ ಇದು ಮಲೆಯಾಳಂ ಲಿಪಿಯನ್ನು ಹೋಲುತ್ತದೆ. ಈ ಲಿಪಿ ತುಳು

ಅಥವಾ ಪ್ರಾಚೀನ ಮಲೆಯಾಳಂ ಲಿಪಿಯೆ ಎನ್ನವುದನ್ನು ಕುರಿತು ವಿದ್ವಾಂಸರಲ್ಲಿ ಇನ್ನೂ ಗೊಂದಲವಿದೆ. ತುಳು ಈಗ ವ್ಯವಹಾರಿಕ ಭಾಷೆಗಷ್ಟೇ ಸೀಮಿತಗೊಂಡಿದೆ.

**೨.೫.೧ ತುಳುನಾಡಿನ ಭೌಗೋಳಿಕ ಪರಿಸರ :**

ಪಶ್ಚಿಮ ಕರಾವಳಿಯ ಪ್ರಸಿದ್ಧ ಜಿಲ್ಲೆ ಅಭಿಜಿತ ದಕ್ಷಿಣ ಕನ್ನಡ, ಉತ್ತರದಲ್ಲಿ ಕಲ್ಯಾಣಪುರ ಹೊಳೆ, ದಕ್ಷಿಣದಲ್ಲಿ ಚಂದ್ರಗಿರಿ ಹೊಳೆ ಇವೆರಡರ ಮಧ್ಯದಲ್ಲಿ ಹರಡಿರುವ (ಇಂದಿನ ಕಾಸರಗೋಡು, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವ್ಯಾಪಿಸಿರುವ) ಪ್ರದೇಶವು "ತುಳುನಾಡು" ಎಂದು ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿದೆ. ಇತಿಹಾಸದ ಕಾಲದಲ್ಲಿ ಈ ನಾಡಿನ ವ್ಯಾಪ್ತಿ ಇನ್ನೂ ಹೆಚ್ಚಾಗಿದ್ದು, ಉತ್ತರದಲ್ಲಿ ಇಂದಿನ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಗೇರುಸೊಪ್ಪೆ ಮುಂತಾದ ಪ್ರದೇಶಗಳು ಇದರ ವ್ಯಾಪ್ತಿಯಲ್ಲಿ ಬರುತ್ತಿದ್ದವು ಎಂದು ತಿಳಿಯುತ್ತದೆ. ಕರಾವಳಿ ಕರ್ನಾಟಕದಲ್ಲಿ ಸಾಂಸ್ಕೃತಿಕವಾಗಿ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿರುವ ತುಳುನಾಡಿನ ಭೌಗೋಳಿಕ ವೈಶಿಷ್ಟ್ಯತೆ, ಇತಿಹಾಸ, ಭಾಷೆ, ಜಾನಪದ, ಇಲ್ಲಿಯ ಸಾಂಸ್ಕೃತಿಕ ಅನನ್ಯತೆಯ ಕುರಿತು ಅವಲೋಕಿಸಿದರೆ ತುಳು ಭಾಷೆಯನ್ನಾಡುವ ಜನರ ವಸತಿ ಪ್ರದೇಶವು ಕಲ್ಯಾಣಪುರ ಮತ್ತು ಚಂದ್ರಗಿರಿ ಹೊಳೆಯ ಮಧ್ಯದ ಪ್ರದೇಶ ಈ ಎರಡು ನದಿಗಳು ತುಳುನಾಡಿನ ಉತ್ತರ ಮತ್ತು ದಕ್ಷಿಣದ ಮೇರೆಗಳಾಗಿ ಗುರ್ತಿಸಲ್ಪಟ್ಟಿವೆ.

ಪ್ರಸ್ತುತ ಭೂ ಪ್ರದೇಶವು ೧೨.೨೭ ಉತ್ತರ ಅಕ್ಷಾಂಶದಿಂದ ೧೩.೧೮ ಉತ್ತರ ಅಕ್ಷಾಂಶದವರೆಗೂ ೭೪. ಪೂರ್ವದಲ್ಲಿ ಪಶ್ಚಿಮ ಘಟ್ಟಗಳಿಂದ ಕೂಡಿದ ಮಲೆನಾಡು ಸಂಸ್ಕೃತಿ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ರೂಪಿಸಿದ ಕರಾವಳಿ ಸಂಸ್ಕೃತಿ, ಉತ್ತರಕ್ಕೆ ಕರ್ನಾಟಕ ಸಂಸ್ಕೃತಿಯ ಸೇರಿಕೊಂಡ ತುಳುನಾಡು ಸಂಸ್ಕೃತಿ ಅಸ್ಥಿತ್ವದಲ್ಲಿದೆ. ತುಳುಭಾಷೆ ಕನ್ನಡನಾಡಿನಲ್ಲಿ ಅಂತರ್ಗತವಾಗಿರುವುದರಿಂದ ತುಳುನಾಡು ಹಾಗೂ ಕನ್ನಡನಾಡು ಆಗಿಯೂ ಗುರುತಿಸಿಕೊಂಡಿದೆ. ಈ ಜಿಲ್ಲೆಯ ಉತ್ತರಕ್ಕೆ ಉತ್ತರ ಕನ್ನಡ, ಪೂರ್ವಕ್ಕೆ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳು, ದಕ್ಷಿಣಕ್ಕೆ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆ ಅಸ್ತಿತ್ವದಲ್ಲಿದೆ. ಕಾಸರಗೋಡು ಎಲ್ಲಾ ದೃಷ್ಟಿಯಿಂದಲೂ ದಕ್ಷಿಣ ಕನ್ನಡದ ಭಾಗದಂತಿದ್ದರೂ ಕೂಡ ಅದು ಕೇರಳ ರಾಜ್ಯಕ್ಕೆ ಸೇರ್ಪಡೆಯಾಗಿದೆ. ಅಭಿಜಿತ ದಕ್ಷಿಣ ಕನ್ನಡ ಜಿಲ್ಲೆಯು ಭೌಗೋಳಿಕ ಲಕ್ಷಣಗಳನ್ನು ಅನುಕೂಲತೆಗಳಾಗಿ ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ.

ಪಶ್ಚಿಮ ಘಟ್ಟ ಪ್ರದೇಶ

ಕರಾವಳಿ ಬಯಲು ಪ್ರದೇಶ

ಒಳನಾಡು ಪ್ರದೇಶ

**೨.೫.೨ ಪಶ್ಚಿಮ ಘಟ್ಟ ಪ್ರದೇಶ:**

ಪಶ್ಚಿಮ ಘಟ್ಟಗಳು ಉತ್ತರದಿಂದ ದಕ್ಷಿಣಕ್ಕೆ ಹಬ್ಬಿದ್ದು ಕೇರಳ ರಾಜ್ಯದಲ್ಲಿ ಮುಂದುವರೆಯುತ್ತವೆ. ಈ ಪಶ್ಚಿಮ ಘಟ್ಟಗಳು "ಸಹ್ಯಾದ್ರಿ"ಗಳೆಂದು ಕರೆಯಿಸಿಕೊಳ್ಳುತ್ತವೆ. ಸಹ್ಯಾದ್ರಿಯ ಬೆಟ್ಟಸಾಲುಗಳಲ್ಲಿ

ಕರ್ನಾಟಕದ ಅತ್ಯಂತ ಎತ್ತರದ ಶಿಖರಗಳು ಕಂಡುಬರುತ್ತವೆ. ಚಂದ್ರದ್ರೋಣ ಪರ್ವತದ "ಮುಳ್ಳಯ್ಯಗಿರಿ" ಶಿಖರದ ಎತ್ತರ ಸುಮಾರು ೧೮೭೪ ಮೀಟರ್ ಆಗಿದೆ. ಕುದುರೆ ಮುಖದ ಎತ್ತರ ಸುಮಾರು ೧೮೯೨ ಮೀಟರ್, ಕೊಡಚಾದ್ರಿಯ ಎತ್ತರ ೧೩೪೪ ಮೀಟರ್, ಪುಷ್ಪಗಿರಿ ೧೭೧೩ ಮೀಟರ್ ಅಲ್ಲದೆ ವಾಲಿಕುಂಜ, ಕುಮಾರ ಪರ್ವತ ಮೊದಲಾದಂತಹ ಉನ್ನತ ಶಿಖರಗಳಿವೆ. ಈ ಸಹ್ಯಾದ್ರಿ ಶ್ರೇಣಿಯಲ್ಲಿ ಆಗುಂಬೆ ಘಾಟ, ಕೆರೆಕಟ್ಟೆ ಘಾಟ, ಕೊಟ್ಟಿಗೆಹಾರ ಘಾಟ, ಮಡಿಕೇರಿ ಘಾಟ ಹಾದು ಹೋಗುತ್ತದೆ. ಪ್ರಮುಖ ನದಿಗಳಾದ ಶುಕ್ತಿ ಮತಿ (ಗಂಗೊಳ್ಳಿ) ಸೀತಾನದಿ, ಸ್ವರ್ಣನದಿ, ಕಲ್ಯಾಣಪುರ ಹೊಳೆ, ಉದ್ಯಾವರ ಹೊಳೆ, ಶಾಂಭವಿ ಹೊಳೆ, ಪಾವಂಜೆ ನದಿ, ಗುರುಪು (ಫಲಾನಿ) ನೇತ್ರಾವತಿ, ಕುಮಾರಧಾರ, ಮೊದಲಾದ ನದಿಗಳು ಪಶ್ಚಿಮಾಭಿಮುಖವಾಗಿ ಹರಿದು ಅರಬ್ಬಿ ಸಮುದ್ರವನ್ನು ಸೇರುತ್ತವೆ.

**೨.೩.೩ ಕರಾವಳಿ ಬಯಲು ಪ್ರದೇಶ:**

ಉತ್ತರದಲ್ಲಿ ಕಾರವಾರದಿಂದ ದಕ್ಷಿಣದ ಕಾಸರಗೋಡಿನವರೆಗಿನ ಸುಮಾರು ೩೨೦ ಕಿ.ಮೀ. ಗಳಷ್ಟು ದೂರದ ಕರಾವಳಿ ಪ್ರದೇಶವನ್ನು ಇದು ಒಳಗೊಂಡಿದೆ. ಇದರ ಅಗಲ ಸುಮಾರು ೧೦ ರಿಂದ ೬೪ ಕಿ. ಮೀಗಳವರೆಗೆ ವ್ಯತ್ಯಾಸಗೊಳ್ಳುತ್ತಾ ಹೋಗುತ್ತದೆ. ಗಂಗೊಳ್ಳಿಯಿಂದ ದಕ್ಷಿಣದ ತಲಪಾಡಿಯ ವರೆಗಿನ ಪ್ರದೇಶವು ಅಭಿಜಿತ ದಕ್ಷಿಣ ಕನ್ನಡ ಜಿಲ್ಲೆಯ ಮೀನುಗಾರಿಕೆಗೆ ಪ್ರಸಿದ್ಧಿಯಾಗಿದೆ. ತೆಂಗು, ಭತ್ತ, ಮಲ್ಲಿಗೆ, ಗೋಡಂಬಿ, ಮೊದಲಾದ ಬೆಳೆಗಳನ್ನು ಇಲ್ಲಿ ಬೆಳೆಯಲಾಗುತ್ತದೆ. ದಕ್ಷಿಣದ ಕನ್ಯಾಕುಮಾರಿಯಿಂದ ಉತ್ತರದ ಮುಂಬೈಗೆ ಸಂಪರ್ಕ ಕಲ್ಪಿಸುವ ರಾಷ್ಟ್ರೀಯ ಹೆದ್ದಾರಿ ೧೭ ಹಾಗು ಕೊಂಕಣ ರೈಲು ಈ ಮಾರ್ಗವಾಗಿ ಹಾದು ಹೋಗುತ್ತದೆ. ಮಂಗಳೂರು, ಮಲ್ಪೆ, ಗಂಗೊಳ್ಳಿ ಮೊದಲಾದ ಬಂದರುಗಳಿವೆ. ಉಡುಪಿ ಶ್ರೀ ಕೃಷ್ಣ, ವಡಾಭಾಂಡೇಶ್ವರ, ಬಪ್ಪನಾಡು, ಧರ್ಮಸ್ಥಳ, ಸುಬ್ರಮಣ್ಯ ಮುಂತಾದ ಪುಣ್ಯ ಕ್ಷೇತ್ರಗಳಿವೆ. ಉಡುಪಿ, ಮಣಿಪಾಲ, ಕುಂದಾಪುರ, ಕಾರ್ಕಳ, ಮುಂತಾದ ಪಟ್ಟಣಗಳಿವೆ.

ಶೈಕ್ಷಣಿಕ, ಔದ್ಯೋಗಿಕ, ಬ್ಯಾಂಕಿಂಗ್, ಮೊದಲಾದ ಕ್ಷೇತ್ರಗಳಲ್ಲಿಯೂ ಈ ಪ್ರದೇಶ ಮುಂಚೂಣಿಯಲ್ಲಿದೆ. ಶಿಕ್ಷಣರಂಗದಲ್ಲಿ ಈ ಪ್ರದೇಶ ಅತ್ಯಂತ ಪ್ರಗತಿ ಸಾಧಿಸಿದ್ದನ್ನು ಕಾಣಬಹುದು. ಮಣಿಪಾಲ, ಉಡುಪಿ, ಮೂಡಬಿದ್ರಿ, ಧರ್ಮಸ್ಥಳ, ಮಂಗಳೂರು ಮೊದಲಾದ ಪ್ರದೇಶಗಳಲ್ಲಿ ಹಲವಾರು ಉತ್ತಮವಾದ ಶಿಕ್ಷಣ ಸಂಸ್ಥೆಗಳಿವೆ. ಕಲೆ, ಸಾಹಿತ್ಯ, ಸಂಸ್ಕೃತಿ ಮುಂತಾದ ಕ್ಷೇತ್ರಗಳಲ್ಲಿ ದಕ್ಷಿಣ ಕನ್ನಡದ ಕರಾವಳಿ ಪ್ರದೇಶ ತುಂಬಾ ಪ್ರಗತಿ ಸಾಧಿಸಿದೆ. ಯಕ್ಷಗಾನವು ಈ ಮಣ್ಣಿನ ಗಂಡು ಕಲೆ ಎಂದೆ ಪ್ರಸಿದ್ಧಿಯಾಗಿದೆ.

**೨.೩.೪ ಒಳನಾಡು :**

ಪೂರ್ವದ ಪಶ್ಚಿಮ ಘಟ್ಟಗಳ ಮತ್ತು ಪಶ್ಚಿಮ ಕರಾವಳಿ ಪ್ರದೇಶದ ನಡುವೆ ಇರುವ ಭೂ ಭಾಗವನ್ನು ಒಳನಾಡು ಎಂದು ಗುರುತಿಸಲಾಗಿದೆ. ಕುಂದಾಪುರ, ಬೆಳ್ತಗಂಡಿ, ಸುಳ್ಯ, ಪುತ್ತೂರು,

ಮೊದಲಾದ ತಾಲೂಕುಗಳು ಈ ಪ್ರದೇಶದ ವ್ಯಾಪ್ತಿಯಲ್ಲಿ ಬರುತ್ತವೆ. ಇಲ್ಲಿ ಕೃಷಿಯೇ ಪ್ರಧಾನ ಕಸುಬು. ತೆಂಗು, ಅಡಿಕೆ, ಗೋಡಂಬಿ, ರಬ್ಬರ್, ಬಾಳೆ ಮೊದಲಾದ ಬೆಳೆಗಳನ್ನು ಇಲ್ಲಿ ಬೆಳೆಯಲಾಗುತ್ತದೆ. ಈ ಭಾಗದಲ್ಲಿ ಹಲವಾರು ಗೋಡಂಬಿ ಸಂಸ್ಕರಣಾ ಕೇಂದ್ರಗಳಿದ್ದು ಸಾವಿರಾರು ಜನರಿಗೆ ಉದ್ಯೋಗ ಒದಗಿಸಿವೆ. ಕೊಲ್ಲೂರು, ಕಟೀಲು, ಧರ್ಮಸ್ಥಳ, ಮೊದಲಾದ ಕಡೆಗಳಲ್ಲಿ ಜೈನ ಸಂಸ್ಕೃತಿಯ ಕೇಂದ್ರಗಳನ್ನು ನೋಡಬಹುದು.

**೨.೫.೫ ತುಳುನಾಡಿನ ಇತಿಹಾಸ:**

ತುಳುನಾಡಿನ ಪ್ರಾಚೀನತೆಗೆ ಸಂಬಂಧಿಸಿದ ಕಾಲವನ್ನು ಹೇಳುವುದು ಸಾಧ್ಯವಾಗುವುದಿಲ್ಲ. ತುಳುನಾಡಿನ ಐತಿಹಾಸಿಕ ಹಿನ್ನೆಲೆಯನ್ನು ಅವಲೋಕಿಸಿದರೆ ಈ ಪ್ರದೇಶವು ದೀರ್ಘಕಾಲದ ಮತ್ತು ಒಂದು ವ್ಯವಸ್ಥಿತ ಆಳ್ವಿಕೆಗೆ ಒಳಪಟ್ಟಿರುವುದು ವಿರಳ. ಗಡಿ ಪ್ರದೇಶಗಳು ಆಯಾ ಕಾಲದ ರಾಜರುಗಳ ಆಡಳಿತದ ಸಂದರ್ಭದಲ್ಲಿ ವ್ಯತ್ಯಾಸಗೊಳ್ಳುತ್ತಲೇ ಹೋಗಿವೆ. ಈ ಪ್ರದೇಶವು ಮೌರ್ಯರ ಕಾಲದಿಂದ ಹಿಡಿದು ಇಂದಿನ ಪ್ರಜಾಪ್ರಭುತ್ವದ ಕಾಲದವರೆಗಿನ ವಿಭಿನ್ನ ಧರ್ಮಗಳ ಚಕ್ರವರ್ತಿಗಳ, ಸಾಮಂತ ರಾಜರುಗಳ ಮತ್ತು ಪಾಳೆಗಾರರ ಆಡಳಿತಕ್ಕೆ ಒಳಪಡುತ್ತಲೇ ಬಂದಿದೆ. ತುಳುನಾಡಿನ ಇತಿಹಾಸ ರಚನೆಗೆ ಶಾಸನಗಳು, ಸಾಹಿತ್ಯ ಕೃತಿಗಳು, ಪಾಡ್ದನಗಳು, ವಿದೇಶಿ ಪ್ರವಾಸಿಗರ ಬರಹಗಳು ಅಗತ್ಯವಾದ ಮಾಹಿತಿಯನ್ನು ಒದಗಿಸಿವೆ. ಅದನ್ನು ಬಳಸಿಕೊಂಡು ಇತಿಹಾಸಕಾರರು ತುಳುನಾಡಿನ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ.

**೨.೫.೬ ಪ್ರಾಚೀನ ತುಳುನಾಡು:**

ತುಳುನಾಡಿನಲ್ಲಿ ಆದಿ ಮಾನವನು ಕಾಣಿಸಿಕೊಂಡಿದ್ದು ಯಾವಾಗ ಎಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಪ್ರಾಚೀನ ಕಾಲದಲ್ಲಿ ಪಶ್ಚಿಮ ಘಟ್ಟಗಳು ಮತ್ತು ತಪ್ಪಲು ಪ್ರದೇಶಗಳಲ್ಲಿ ದಟ್ಟವಾದ ಕಾಡುಗಳಿದ್ದಿರಬಹುದು. ಈ ಅರಣ್ಯ ಪ್ರದೇಶಗಳಲ್ಲಿ ನೆಲೆಸಿ ಅಲ್ಲಿ ಕೃಷಿ ಪ್ರಾರಂಭಿಸುವ ಸಲುವಾಗಿ ಆದಿ ಮಾನವನು ಈ ಕಾಡುಗಳಲ್ಲಿ ವಾಸಿಸಿರಬೇಕು. ಬೇಟೆಯಿಂದ ಕೃಷಿಕ ವೃತ್ತಿ ಪ್ರಾರಂಭಿಸಲು ಅವನಿಗೆ ಉಪಕರಣಗಳನ್ನು, ಆಯುಧಗಳನ್ನು ಸಿದ್ಧಪಡಿಕೊಡುವ ಕಾರ್ಯಗಳನ್ನು ಕಮ್ಮಾರರು ಮಾಡುತ್ತಿದ್ದರು. ಪ್ರಸಿದ್ಧ ಪುರಾತತ್ವ ಸಂಶೋಧಕ ರಾಬರ್ಟ ಬ್ರೂಸ್ ಫುಟಿ ಅವರ ಅಭಿಪ್ರಾಯದಂತೆ ತುಳುನಾಡಿನ ಆದಿ ಮಾನವನು ಲೋಹ ಯುಗಕ್ಕೆ ಸೇರಿದವನಾಗಿರಬಹುದು. ಇದಕ್ಕೆ ಪೂರಕವಾಗಿ ತುಳು ನಾಡನ್ನು ಪರಶುರಾಮನ ಸೃಷ್ಟಿ ಎಂದು ಕರೆಯಲಾಗುತ್ತದೆ. ಈ ದೃಷ್ಟಿಯಲ್ಲಿ ತುಳುನಾಡಿನಲ್ಲಿ ಮಾನವನ ಇತಿಹಾಸವು ಸುಮಾರು ೩೦೦೦ (೨೦೦೦) ವರ್ಷಗಳ ಹಿಂದೆ ಪ್ರಾರಂಭವಾಯಿತು ಎಂದು ಇತಿಹಾಸಕಾರರು ತಿಳಿಸುತ್ತಾರೆ.

ಪ್ರಚಲಿತದಲ್ಲಿರುವ ಐತಿಹ್ಯಗಳ ಪ್ರಕಾರ ಪಶ್ಚಿಮ ಕರಾವಳಿಯನ್ನು ಪರಶುರಾಮನ ಸೃಷ್ಟಿಯೆಂದು ಕರೆಯಲಾಗುತ್ತದೆ. ಪರಶುರಾಮ ಸೃಷ್ಟಿಸಿದ ಈ ಭೂ ಪ್ರದೇಶವನ್ನು ಸಪ್ತಕೊಂಕಣವೆಂದು ಪುರಾಣಗಳಲ್ಲಿ ಉಲ್ಲೇಖಿಸಲಾಗಿದೆ. "ಸೈಹ್ಯಾದ್ರಿಯಖಂಡ' ಮತ್ತು ಕೇರಳೋತ್ಪತ್ತಿಗಳಲ್ಲಿ ಈ ಕುರಿತಾದ ಉಲ್ಲೇಖಗಳನ್ನು

ವಿದ್ವಾಂಸರು ಗುರುತಿಸಿದ್ದಾರೆ. ಸೈಹ್ಯಾದ್ರಿಯಖಂಡ ವಿವರಣೆಯ ಪ್ರಕಾರ ಪರಶುರಾಮನು ಸಹ್ಯಾದ್ರಿ ಪರ್ವತದಲ್ಲಿ ನಿಂತು ತನ್ನ ಕೊಡಲಿಯನ್ನು ಪಶ್ಚಿಮಾಭಿಮುಖವಾಗಿ ಎಸೆದು ಕೇರಳ, ತುಲಂಗಾ, ಸೌರಾಷ್ಟ, ಕೊಂಕಣ, ಕರಹಟ, ಕರ್ನಾಟಕ ಎಂಬ ಪ್ರದೇಶಗಳನ್ನು ಸೃಷ್ಟಿಸಿದ್ದಾನೆ ಎಂದು ವಿವರಿಸಲಾಗಿದೆ. ಈ ರೀತಿ ಸೃಷ್ಟಿಯಾದ ಭೂ ಪ್ರದೇಶವನ್ನು "ರಾಮಖಂಡ" ಎಂದು ಕರೆಯಲಾಗಿದ್ದು ಈ ಪ್ರದೇಶವು ಸುಮಾರು ೧೦೦ ಯೋಜನ ಉದ್ದ ಹಾಗು ೭(ಏಳು) ಯೋಜನಾ ಅಗಲವಿದೆ ಎಂದಿದ್ದಾರೆ. (೬೦೦ ಮೈಲಿ ಉದ್ದ ೬೪ ಮೈಲಿ ಅಗಲ) ಶ್ರೀಯುತ ಪೊಳಲಿ ಶೀನಪ್ಪ ಹೆಗ್ಗಡೆಯವರು ವೈದಿಕ ಮತ್ತು ಶಾಸ್ತ್ರ ಗ್ರಂಥಗಳನ್ನು ಆಧರಿಸಿ ಈ ರೀತಿ ಉಲ್ಲೇಖಿಸುತ್ತಾರೆ. ಪುರಾಣ ಗ್ರಂಥಗಳ ಪ್ರಕಾರ ಗೋರಾಷ್ಟ್ರ, ತೌಳವ, ಸಾಗರ, ಸಂಗಮಕ್ಷೇತ್ರ, ತ್ರಿಗರ್ತ, ತುಳುನಾಡು, ಪಾತಾಳ, ಇವು ಪರಶುರಾಮನ ಸೃಷ್ಟಿ ಎಂಬುದನ್ನು ಕೇರಳೋತ್ಪತ್ತಿ, ತೌಳವೋತ್ಪತ್ತಿ, ಸಹ್ಯಾದ್ರಿ ಖಂಡ, ಗ್ರಾಮ ಪದ್ಧತಿ, ಭೂತಾಳ ಪಾಡ್ದನ, ಅಳಿಯಕಟ್ಟು ಮುಂತಾದವುಗಳ ಮೂಲಕ ಹೇಳುತ್ತಾರೆ. ತುಳುಜನಪದ ಸಾಹಿತ್ಯದ ಪ್ರಕಾರ ಲಂಕಲೋಕನಾಡು ನಾಗಬೆರ್ಮ ಲೋಕ, ಸಿರ್ತಸಿದಿಲೋಕ ಈ ಪ್ರದೇಶವೇ ತುಳುರಾಜ್ಯವೆಂದು ಕನ್ನಡದ ಪ್ರದೇಶವನ್ನು ಕರೆನಾಡು ಅಂದರೆ ಸಮುದ್ರ ಕರೆಯ ನಾಡೆಂತಲೂ, ಇದು ತಗ್ಗಾಗಿರುವ ಪ್ರದೇಶವಾದದ್ದರಿಂದ ಪಾತಾಳ, ವಿದೇಶಿಗರು ಲ್ಯುಮೇರಿಯಾ, ವಿಜಯನಗರದ ರಾಜರು ಕರೆನಾಡು (ಕನ್ನಡ), ಟಿಪ್ಪುಸುಲ್ತಾನ, ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಇಂಗ್ಲೀಷರು ಕೆನರಾ ಎಂಬ ಹೆಸರಿನಿಂದ ಗುರುತಿಸಿದ್ದಾರೆ. ಹೀಗೆ ತುಳುನಾಡು ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಟ್ಟಿದೆ ಎಂದು ತಿಳಿದು ಬರುತ್ತದೆ.

ಸಿದ್ದಾಪುರದ ಕ್ರಿ. ಪೂ. ೨೬೩ನೇ ಅಶೋಕನ ಕಾಲದ ಶಾಸನದಲ್ಲಿ ಕಂಡುಬರುವ ಕೆಲ ಉಲ್ಲೇಖಗಳನ್ನು ಕುರಿತು ವಿದ್ವಾಂಸರು ಬಗೆ ಬಗೆಯಾಗಿ ಚರ್ಚಿಸಿದ್ದಾರೆ. "ತುಳುರಾಜ್ಯವನ್ನು ಸತ್ಯಪುತ್ರರು, ಮಲೆಯಾಳ ರಾಜ್ಯವನ್ನು ಕೇರಳಮತ್ರರು ಆಳುತ್ತಿದ್ದರೆಂಬ ವಿಚಾರವನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಕ್ರಿ.ಶ. ಮೊದಲನೆಯ ಶತಮಾನದಲ್ಲಿ ರಚನೆಯಾಗಿದೆ ಎಂದು ಭಾವಿಸಲಾಗಿರುವ ತಮಿಳಿನ ಸಂಘ ಕಾಲದ ಪದ್ಯಗಳಲ್ಲಿ ತುಳುನಾಡಿನ ಉಲ್ಲೇಖವಿದೆ. ಇಲ್ಲಿ ತುಳುನಾಡಿನ 'ಕೋಶರ' ಎಂಬ ಜನಾಂಗವನ್ನು ಪ್ರಸ್ತಾಪಿಸಲಾಗಿದೆ. ಇವರು ತಮಿಳುನಾಡಿನ ಪ್ರಮುಖ ಜನಾಂಗದವರು ಎಂದು ಇತಿಹಾಸಕಾರ ಡಾ.ಕೆ. ವಿ ರಮೇಶ್ ಅಭಿಪ್ರಾಯ ಪಡುತ್ತಾರೆ. ಗ್ರೀಸ್ ದೇಶದ ಭೂಗೋಳ ಶಾಸ್ತ್ರಜ್ಞ ಟಾಲೆಮೆ ( ಕ್ರಿ ಶ.೨ನೇ ಶತಮಾನ) ಭಾರತದ "ಬಲಖೋಯ್ರ" ಎಂಬುದು ಕಡಲ್ಗಳ್ಳರ ಕೇಂದ್ರವಾಗಿತ್ತು ಎಂದು ಹೇಳುತ್ತಾನೆ. ಈ "ಬಲಖೋಯ್ರವವೇ "ಆಳುವಖೇಡ" ಅಂದರೆ ತುಳುನಾಡು ಅಗಿದ್ದರಬಹುದೆಂದು ಕೆಲ ವಿದ್ವಾಂಸರ ಅಭಿಪ್ರಾಯವಾಗಿದೆ.

ತುಳುನಾಡಿನ ಮೇರೆಯನ್ನು ಕುರಿತು ಹಿರಿಯ ಇತಿಹಾಸಕಾರರ ಬಿ.ಎ.ಸಾಲೆತ್ತೂರು ಅವರು ತುಳುರಾಜ್ಯ ಉತ್ತರದಲ್ಲಿ ಗೋಕರ್ಣದಿಂದ ಆರಂಭವಾಗಿ ದಕ್ಷಿಣದ ಪೆರುಂಪುಳ ಈಗಿನ ಚಂದ್ರಗಿರಿ ಅಥವಾ ಪಯಸ್ವಿನ ನದಿ ತನಕ ವಿಸ್ತರಿಸಿತ್ತು ಎಂದಿದ್ದಾರೆ. ನದಿಯ ಉತ್ತರಕ್ಕೆ ತುಳುನಾಡಿನ

ಮುವತ್ತೆರಡು ಗ್ರಾಮಗಳೆಂದು ಭೂತಾರಾಧನೆಯ ಪಾಡ್ದನಗಳಲ್ಲಿ ಕೇಳಿ ಬರುತ್ತದೆ. ತುಳುನಾಡಿನ ಇತಿಹಾಸ ಕುರಿತು ಲಿಖಿತ ಹಾಗು ಸ್ಪಷ್ಟ ಶಾಸನಾಧಾರಗಳು ಇಲ್ಲದೆ ರೂಪಿತವಾಗಿದ್ದರೂ ಸುಮಾರು ಕ್ರಿ.ಶ. ಆರಂಭದ ಕಾಲದಿಂದ ತುಳುನಾಡು ಅಸ್ಥಿತ್ವದಲ್ಲಿತ್ತು ಎಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

**೨.೫.೬.೧ ಆಳುಪರು:**

ತುಳುನಾಡನ್ನು ಆಳಿದ ಮೊದಲಿಗರು ಆಳುಪರು ಎಂಬುದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಕ್ರಿ.ಶ. ೬೫೦ರ ಕಾಲದ ಒಂದನೆಯ ಆಳ್ವ ಅರಸರಿಂದ ಆಳ್ವಿಕೆ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ಇವರ ಆಳ್ವಿಕೆ ತುಳುನಾಡಿನಲ್ಲಿ ಕ್ರಿ.ಶ. ೧೪ ನೇ ಶತಮಾನದ ಕೊನೆಯವರೆಗೆ ಅಂದರೆ ಸುಮಾರು ೧೨೦೦ ವರ್ಷಗಳ ಕಾಲ ದೀರ್ಘವಾಗಿ ಅಡಳಿತ ನಿರ್ವಹಿಸಿದರು ಎಂಬ ಅಭಿಪ್ರಾಯಗಳಿವೆ. ಈ ಮನೆತನದವರಿಂದಲೇ "ಆಳ್ವಖೇಡ" ಎಂಬ ಹೆಸರು ಪ್ರಸಿದ್ಧವಾಯಿತು. ಪ್ರಾಚೀನ ಆಳುಪರು, ಮಧ್ಯಯುಗದ ಆಳುಪರು ಮತ್ತು ಕೊನೆಯ ಆಳುಪರು ಎಂಬುದಾಗಿ ವಿವರಿಸಲಾಗಿದೆ. ಇವರ ರಾಜಧಾನಿ ಮಂಗಳಾಪುರ ಇಂದಿನ ಮಂಗಳೂರು ಆಗಿತ್ತು. ಆನಂತರ ಉದಯಪುರ (ಉದ್ಯಾವರ) ಕ್ಕೆ ಬದಲಾಯಿತು. ಅನಂತರ ಬಾಹರ ಕನ್ಯಾಪುರ (ಬಾರಕೂರು) ಕೇಂದ್ರ ಸ್ಥಳವಾಯಿತು. ಕ್ರಿ.ಶ. ೧೪ನೇ ಶತಮಾನದ ಪೂರ್ವಾರ್ಧದಲ್ಲಿ ತುಳುನಾಡನ್ನು ವಶಪಡಿಸಿಕೊಂಡ ಹೊಯ್ಸಳರು ಮತ್ತು ವಿಜಯನಗರದ ರಾಜರು ಬಾರಕೂರನ್ನು ತುಳುನಾಡಿನ ರಾಜಧಾನಿಯನ್ನಾಗಿ ಮಾಡಿಕೊಂಡರು. ಆಳುಪರು ತಮ್ಮ ಆಳ್ವಿಕೆಯ ಕೊನೆಯ ದಿನಗಳಲ್ಲಿ ಮೂಡಬಿದ್ರೆಯನ್ನು ಕೇಂದ್ರ ಸ್ಥಳವನ್ನಾಗಿ ಮಾಡಿಕೊಂಡಿದ್ದರೆಂದು ತಿಳಿದು ಬರುತ್ತದೆ.

**೨.೫.೬.೨ ವಿಜಯನಗರ ಕಾಲದ ತುಳುನಾಡು:**

ಕ್ರಿ.ಶ. ೧೨೪೫ರಲ್ಲಿ ತುಳುನಾಡು ವಿಜಯನಗರ ಸಾಮ್ರಾಜ್ಯದೊಂದಿಗೆ ವಿಲೀನವಾಯಿತು. ವಿಜಯನಗರದ ಹರಿಹರ ರಾಯನಿಗೆ ತುಳು ಅರಸರೆಲ್ಲ ಆತನ ಅಧಿಪತ್ಯವನ್ನು ಒಪ್ಪಿಕೊಂಡರು. ಈ ಅಧಿಪತ್ಯವನ್ನು ಪಡೆದ ವಿಜಯನಗರ ಅರಸರು ತುಳುರಾಜ್ಯದ ಆಡಳಿತದ ಅನುಕೂಲಕ್ಕಾಗಿ ಬಾರಕೂರು ರಾಜ್ಯ ಮತ್ತು ಮಂಗಳೂರು ರಾಜ್ಯ ಎಂದು ಎರಡು ವಿಭಾಗಗಳಾಗಿ ಮಾಡಿ ಆಡಳಿತ ನೋಡಿಕೊಳ್ಳಲು ತಮ್ಮ ಪರವಾಗಿ ತಮ್ಮ ರಾಜ್ಯಪಾಲರುಗಳನ್ನು ನೇಮಿಸಿದರು. ಬಾರಕೂರಿನ ಅಧಿಕಾರಿಯ ಹೆಸರು ರಾಯನೆಂದು ಮಂಗಳೂರಿನ ಅಧಿಕಾರಿಯ ಹೆಸರು ಒಡೆಯನೆಂದೂ ಕರೆಯಲಾಗುತ್ತಿತ್ತು. ಈ ರಾಜ್ಯಪಾಲರು ವಿಜಯನಗರದ ಅರಸರ ಹೆಸರಿನಲ್ಲಿ ತುಳುನಾಡನ್ನು ಆಳಿದರೆಂದು ಅನೇಕ ಶಿಲಾ ಮತ್ತು ತಾಮ್ರ ಶಾಸನಗಳು ಹೇಳುತ್ತವೆ.

ವಿಜಯನಗರ ಅರಸರ ಕಾಲದಲ್ಲಿ ತುಳು ನಾಡಿನಲ್ಲಿ ಅನೇಕ ಸಣ್ಣ ಪುಟ್ಟ ಅರಸು ಮನೆತನಗಳು ತಲೆ ಎತ್ತಿದವು. ಅವುಗಳಲ್ಲಿ ಕಾರ್ಕಳ, ನಗರ, ಕಳಸ, ಹಾಡುವಳ್ಳಿ, ಚೌಟ, ಬಂಗ, ಅಜಿಲ, ಹೆಗ್ಗಡೆ, ಸಾಮಂತ ಮೊದಲಾದವು. ಈ ಮನೆತನಗಳಲ್ಲಿ ಹೆಚ್ಚಿನವು ಜೈನಧರ್ಮಕ್ಕೆ ಸೇರಿದವು. ಕಾರ್ಕಳ,

ಮೂಡಬಿದರೆ, ವರಂಗ, ವೇಣೂರು ಮುಂತಾದ ಜೈನ ಕೇಂದ್ರಗಳಲ್ಲಿ ಈ ಅರಸು ಮನೆತನಗಳ ಶಾಸನಗಳು ಮತ್ತು ಶಿಲ್ಪಕಲೆಗಳು ಕಂಡುಬರುತ್ತವೆ. ಆ ಕಾಲದಲ್ಲಿ ಬಾರಕೂರು, ಬಸರೂರು, ಮೂಡಬಿದರೆ, ಮುಂತಾದವುಗಳು ಪ್ರಧಾನ ವಾಣಿಜ್ಯ ಪಟ್ಟಣಗಳಾಗಿದ್ದವು. ಮಂಗಳೂರು ಮತ್ತು ಬಾರಕೂರು ಬಂದರುಗಳು ವಿದೇಶಿ ವ್ಯಾಪಾರಕ್ಕೆ ವೇಣೂರು ಪ್ರಮುಖ ಕೇಂದ್ರಗಳಾಗಿದ್ದವು. ವಿಜಯನಗರದ ಅಂತ್ಯಕಾಲದಲ್ಲಿ ಪೋರ್ಚುಗೀಸರು ತುಳುನಾಡಿನ್ನು ಆಕ್ರಮಿಸಲು ಯತ್ನಿಸಿದರು. ಉಳ್ಳಾಲದ ರಾಣಿ ಅಬ್ಬಕ್ಕ ದೇವಿಗೂ ಪೋರ್ಚುಗೀಸರಿಗೂ ಯುದ್ಧಗಳು ಆಗಾಗ ನಡೆಯುತ್ತಿದ್ದವು. ನಂತರದ ಕಾಲದಲ್ಲಿ ಇಕ್ಕೇರಿ (ಕೆಳದಿ) ನಾಯಕರು ತುಳುನಾಡನ್ನು ವಶಪಡಿಸಿಕೊಂಡರು.

**೨.೫.೬.೩ ಕೆಳದಿನಾಯಕರ ತುಳುನಾಡು:**

ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೫೬೫ ರಕ್ಕಸತಂಗಡಿ ಯುದ್ಧದಲ್ಲಿ ನಾಶವಾದ ಮೇಲೆ ತುಳುನಾಡು ಕೆಳದಿ ನಾಯಕರ ಆಳ್ವಿಕೆಗೆ ಒಳಗಾಯಿತು. ಇವರಲ್ಲಿ ಶಿವಪ್ಪನಾಯಕ ಪ್ರಸಿದ್ಧನಾದವನು. ಶಿವಪ್ಪ ನಾಯಕ ಬೇರೆ ಬೇರೆ ರಾಜ್ಯಗಳಿಂದ ನಾನಾ ಜನಾಂಗಗಳನ್ನು ತುಳುನಾಡಿಗೆ ಕರೆತಂದನು. ಅದರಲ್ಲಿ ರಾಮರಾಜಕ್ಷತ್ರೀಯರು, ಗೋವಾದಿಂದ ಬಂದಂತಹ ಸಾರಸ್ವತರು ಪ್ರಮುಖರು. ಇಕ್ಕೇರಿ ಅರಸರ ಕಾಲದಲ್ಲಿ ಅನೇಕ ಕೋಟೆ ಕೊತ್ತಲಗಳನ್ನು ನಿರ್ಮಿಸಲಾಯಿತು. ಬೇಕಲ್ ಕೋಟೆ, ಬಿತ್ತುರಿ, ಚಂದ್ರಗಿರಿ ಕೋಟೆಗಳನ್ನು ಭದ್ರಪಡಿಸಲಾಯಿತು. ಇವನ ಕಾಲದಲ್ಲಿ ಕಂದಾಯ ಪದ್ಧತಿಯು ತುಂಬಾ ವ್ಯವಸ್ಥಿತವಾಗಿತ್ತು. ಭೂಮಿಯ ವಿಂಗಡನೆ, ಸರಕಾರದ ವತಿಯಿಂದ ಕೃಷಿ ಮಾಡಿಸುವಿಕೆ ಮುಂತಾದ ಪದ್ಧತಿಯು **ಶಿವಪ್ಪ ನಾಯಕನ ಶಿಸ್ತು** ಎಂಬುದಾಗಿ ಜನಜನಿತವಾಗಿತ್ತು. ನಂತರ ಇಕ್ಕೇರಿ ಸಂಸ್ಥಾನವು ಹೈದರಾಲಿಯ ಸ್ವಾಧೀನವಾಯಿತು. ಸುಮಾರು ಕ್ರಿ.ಶ. ೧೮ನೇ ಶತಮಾನದ ವರೆಗೂ ತುಳುನಾಡನ್ನು ಇಕ್ಕೇರಿ ನಾಯಕರು ಆಳಿದರು.

**೨.೫.೬.೪ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದ ತುಳುನಾಡು:**

ತುಳುನಾಡಿನ ಸಾಮಂತ ಅರಸರೆಲ್ಲರೂ ಹೈದರಾಲಿಯ ಅಧಿಪತ್ಯವನ್ನು ಒಪ್ಪಿಕೊಂಡರು. ಆ ಕಾಲಕ್ಕಾಗಲೇ ತುಳುನಾಡಿನಲ್ಲಿ ಇಂಗ್ಲೀಷರ ಪ್ರಭಾವ ಕಾಣಿಸಿಕೊಂಡಿತ್ತು. ಹೈದರನ ನಂತರ ಅವನ ಮಗ ಟಿಪ್ಪು ಸುಲ್ತಾನನು ತುಳುನಾಡಿನ ಮೇಲಿನ ಅಧಿಕಾರವನ್ನು ಮುಂದುವರೆಸುತ್ತಾನೆ. ಟಿಪ್ಪು ಮತ್ತು ಬ್ರಿಟೀಷರ ನಡುವೆ ಸದಾ ಕಲಹಗಳು ನಡೆಯುತ್ತಿದ್ದವು. ಇದರಿಂದ ತುಳುನಾಡಿನ ರಾಜಕೀಯದಲ್ಲಿ ಅಸ್ಥಿರತೆ ತಲೆದೊರುತ್ತದೆ. ೧೯೭೭ರಲ್ಲಿ ಟಿಪ್ಪು ಮಡಿದ ನಂತರ ತುಳುನಾಡು ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿತು. ಇಂಗ್ಲೀಷರ ಕಾಲದಲ್ಲಿ ತುಳುನಾಡು ಸ್ಥಳೀಯ ಅರಸರಿಂದ ವಿಮೋಚನೆ ಹೊಂದಿ ಸಂಪೂರ್ಣವಾಗಿ ಒಂದೇ ಆಡಳಿತಕ್ಕೆ ಒಳಪಟ್ಟಿತು. ನಂತರ ತುಳುನಾಡನ್ನು ಕ್ರಿ.ಶ. ೧೮೦೦ರಲ್ಲಿ ಮದ್ರಾಸ್ ಅಧಿಪತ್ಯಕ್ಕೆ ಸೇರಿಸಲಾಯಿತು. ಇವರ ಆಳ್ವಿಕೆಯಲ್ಲಿ ಕಾರವಾರದಿಂದ ಮಲಬಾರದ ಗಡಿಯವರೆಗೆ ಇದ್ದ ಪ್ರದೇಶವು ಕನ್ನಡ ಜಿಲ್ಲೆ ಎಂದು ಕರೆಯಲ್ಪಟ್ಟಿತು. ಕ್ರಿ.ಶ. ೧೮೬೦ ರಲ್ಲಿ ಕನ್ನಡ ಜಿಲ್ಲೆಯನ್ನು ಉತ್ತರ ಕನ್ನಡ, ದಕ್ಷಿಣ ಕನ್ನಡ ಎಂಬ ಎರಡು ಜಿಲ್ಲೆಗಳಾಗಿ

ವಿಂಗಡಿಸಲಾಯಿತು. ಕ್ರಿಶ. ೧೮೬೨ ರಲ್ಲಿದಕ್ಷಿಣ ಕನ್ನಡ ಪ್ರತ್ಯೇಕ ಜಿಲ್ಲೆಯಾಗಿ ಮಾರ್ಪಟ್ಟು ಕುಂದಾಪುರ ತಾಲೂಕಿನ ಉತ್ತರಕ್ಕಿದ್ದ ಪ್ರದೇಶವು "ಉತ್ತರ ಕನ್ನಡ" ಎಂಬ ಹೆಸರಿನಿಂದ ಮುಂಬಯಿ ಪ್ರಾಂತ್ಯಕ್ಕೆ ಸೇರಲ್ಪಟ್ಟಿತು. ದಕ್ಷಿಣ ಕನ್ನಡ ಮದ್ರಾಸ ಪ್ರಾಂತದ ಭಾಗವಾಯಿತು. ಕಾಸರಗೋಡು ಮಲಬಾರಿನ ಅಧೀನಾಯಿತು. ಕ್ರಿಶ. ೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬರುವವರೆಗೆ ಸುಮಾರು ೧೪೭ ವರ್ಷಗಳ ಕಾಲ ಈ ಜಿಲ್ಲೆಯು ಬ್ರಿಟೀಷರಿಂದ ಸಾಕಷ್ಟು ಅಭಿವೃದ್ಧಿಯನ್ನು ಹೊಂದಿತು. ನಂತರ ೧೯೫೦ ನವೆಂಬರ್ ೧ ರಂದು ದೇಶದ ಭಾಷಾವಾರು ಪ್ರಾಂತಗಳ ವಿಂಗಡನೆಯ ಸಂದರ್ಭದಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಕರ್ನಾಟಕ ರಾಜ್ಯಕ್ಕೆ ಸೇರಲ್ಪಟ್ಟಿತು. ಕಾಸರಗೋಡು ಕೇರಳ ರಾಜ್ಯಕ್ಕೆ ಸೇರಿತು.

**೨.೫.೨ ಸಾಂಸ್ಕೃತಿಕ ವೈಶಿಷ್ಟ್ಯಗಳು:**

ತುಳುನಾಡಿಗೆ ತನ್ನದೇ ಆದ ಸಾಂಸ್ಕೃತಿಕ ಪರಂಪರೆ ಇದೆ. ಇಲ್ಲಿನ ಭೌಗೋಳಿಕ ಸ್ವರೂಪವು ವ್ಯವಸ್ಥೆಗಳನ್ನು ಕಾಯ್ದುಕೊಳ್ಳುವಲ್ಲಿ ಸಹಕಾರಿಯಾಗಿದೆ. ತುಳುವಿನೊಂದಿಗೆ ವಿಭಿನ್ನ ಭಾಷೆಯನ್ನಾಡುವ ಜನರು ಇಲ್ಲಿ ಇರುವಂತೆಯೇ ವಿಭಿನ್ನ ಜಾತಿ, ಧರ್ಮ, ಪಂಗಡಗಳಿಗೆ ಸೇರಿದ ಜನರು ಕಂಡುಬರುತ್ತಾರೆ. ಇವರೆಲ್ಲರ ಜನಜೀವನವು ವಿವಿಧತೆಯಲ್ಲಿ ಏಕತೆಗಳನ್ನು ಪ್ರತಿನಿಧಿಸುತ್ತದೆ. ತುಳುನಾಡಿನಲ್ಲಿ ಹಲವಾರು ಜನಾಂಗಗಳು, ಜಾತಿಗಳು, ಮತ್ತು ಉಪಜಾತಿಗಳು ಕಂಡು ಬರುತ್ತವೆ. ಸಾಂಪ್ರದಾಯಿಕವಾಗಿ ಧಾರ್ಮಿಕ ಕಾರ್ಯಗಳನ್ನು ಮಾಡುವ ಬ್ರಾಹ್ಮಣರು ಸಮಾಜದ ಮೇಲ್ ಸ್ತರದಲ್ಲಿ ಕಂಡು ಬರುತ್ತಾರೆ. ಬ್ರಾಹ್ಮಣರಲ್ಲಿ ಶಿವಳ್ಳಿ, ಸ್ಮಾರ್ತ, ಕೋಟ ವಿಭಿನ್ನ ಕ್ಷೇತ್ರಗಳಲ್ಲಿ ಗುರುತಿಸಲ್ಪಡುತ್ತಾರೆ.

ವ್ಯಾಪಾರವನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವ ಕೊಂಕಣಿಗರು ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಕೊಂಕಣಿಗರಲ್ಲಿ ಕಾಮತ್, ಮಲ್ಯ, ಪ್ರಭು ಮೊದಲಾದ ಉಪಜಾತಿಗಳಿವೆ. ಜೈನರು, ಭಂಡರು ಕರಾವಳಿ ಮೊಗವೀರರು, ಬಿಲ್ಲವರು, ಕುಲಾಲುರು, ಮಡಿವಾಳರು, ವಿಶ್ವಕರ್ಮರು ಮೊದಲಾದ ಜಾತಿಯ ಜನರಿದ್ದಾರೆ. ಜಾತಿಗಳಲ್ಲಿಯೂ ಅನೇಕ ಉಪಜಾತಿಗಳಿವೆ. ಅಲ್ಲದೆ ಕೊರಗಳು ಮಲೆಕುಡಿಯರು, ಕುಡಿಯರು, ಮುಂತಾದ ಗಿರಿಜನ ವರ್ಗಕ್ಕೆ ಸೇರಿದ ಅನೇಕ ಉಪಪಂಗಡಗಳು ಈ ಜಿಲ್ಲೆಯಲ್ಲಿವೆ.

ಮುಸಲ್ಮಾನರೂ, ಕ್ರೈಸ್ತರು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಇವರಲ್ಲಿಯು ಸಹ ಉಪವರ್ಗಗಳನ್ನು ಕಾಣಬಹುದು. ಇಲ್ಲಿನ ಧಾರ್ಮಿಕ ಪರಂಪರೆ ವಿಶಿಷ್ಟ ಪೂರ್ಣವಾಗಿದೆ. ಶೈವ, ವೈಷ್ಣವ, ಜೈನ, ಮುಸಲ್ಮಾನ ಮತ್ತು ಕ್ರಿಶ್ಚಿಯನ್ ಧರ್ಮಗಳು ಐತಿಹಾಸಿಕ ದೃಷ್ಟಿಯಿಂದ ಪ್ರಸಿದ್ಧವಾಗಿವೆ. ತುಳುನಾಡಿನ ಶೈವರು ಸಪ್ತಪೀಠಗಳನ್ನು ಹೊಂದಿದ್ದಾರೆ ಎಂದೂ ಪರಶುರಾಮನು ಅವುಗಳ ಸ್ಥಾಪಕನೆಂದು ನಂಬಿಕೆ ಇದೆ. ಉಡುಪಿ (ರಜತ ಪೀಠ,ಶಿವಳ್ಳಿ) ಸುಬ್ರಮಣ್ಯ (ಕುಮಾರಾಧಿ, ಕುಕ್ಕೆ) ಕುಂಭಾಶಿ ಕೋಟ್ಟೇಶ್ವರ (ಧ್ವಜೇಶ್ವರ) ಶಂಕರನಾರಾಯಣ (ಕ್ರೋಢ) ಗೋಕರ್ಣ ಮತ್ತು ಕೊಲ್ಲೂರುಗಳು ಕರ್ನಾಟಕದ ಪ್ರಾಚೀನ ಶೈವಪೀಠಗಳು. ಇಲ್ಲಿ ಹಲವಾರು ಶಕ್ತಿ ಮಂದಿರಗಳಿವೆ.

ಕೊಲ್ಲೂರು ಶೈವ ಪೀಠವು ಹೌದು. ಪ್ರಸಿದ್ಧ ಶಕ್ತಿಯ ಆರಾಧ್ಯ ಕೇಂದ್ರವು ಹೌದು. ಅದರಂತೆ ಮಂದರ್ತಿ, ಕಟೀಲು, ಪೊಳಲಿ ಇಲ್ಲಿ ಪ್ರಸಿದ್ಧ ಶಕ್ತಿಪೀಠಗಳಿವೆ. ಇಲ್ಲಿಯ ವಿಶೇಷವೆಂದರೆ ಲಿಂಗದ ರೂಪದಲ್ಲಿಯೂ ದುರ್ಗೆಯು ಆರಾಧನೆ ನಡೆಯುತ್ತದೆ. ದ್ವಿಲಿಂಗೋಪಾದಿಯಲ್ಲಿ ಶಂಕರನಾರಾಯಣನನ್ನು ಆರಾಧಿಸುವಂತಹ ಸಂಪ್ರದಾಯವಿದೆ.

ಸ್ಥಳೀಯ ಆರಾಧನೆಯ ಪ್ರಕಾರಗಳಾದ ನಾಗಾರಾಧನೆ ಮತ್ತು ಭೂತಾರಾಧನೆ ತುಳುನಾಡಿನಲ್ಲಿ ಜನಪ್ರಿಯವಾಗಿದೆ. ನಾಗಾರಾಧನೆ ಸಂಬಂಧಿಸಿದ ನಾಗಮಂಡಲ ಢಕ್ಕೆಬಲಿ, ತಂಬಿಲ, ನಾಗದರ್ಶನ, ಭೂತಾರಾಧನೆ, ಅಗೇಲು, ಭೂತಂಬಿಲಗಳು ಜಿಲ್ಲೆಯಾದ್ಯಂತ ಪ್ರಸಿದ್ಧ ಆಚರಣೆಗಳಾಗಿವೆ. ತುಳು ಜನಪದ ಸಂಸ್ಕೃತಿಯಲ್ಲಿ ಭೂತರಾಧನೆಗೆ ಪ್ರಮುಖ ಸ್ಥಾನ ಕಲ್ಪಿಸಲಾಗಿದೆ. ಜನಪದರ ದೈನಂದಿನ ಆರಾಧನೆಯ ಒಂದು ಭಾಗವಾಗಿ ಈ ಭೂತಗಳು ಗುರುತಿಸಲ್ಪಟ್ಟಿವೆ. ಢಕ್ಕೆಬಲಿ, ಬಪ್ಪನಾಡು ಜಾತ್ರೆ, ಹಿರಿಯಡ್ಕಸಿರಿ, ಧರ್ಮಸ್ಥಳ ದೀಪಾರಾಧನೆ ಇವು ಇಲ್ಲಿನ ವಿಶೇಷತೆಗಳು.

ತುಳುನಾಡಿನಲ್ಲಿ ಮುಸಲ್ಮಾನರ ಮತ್ತು ಕ್ರೈಸ್ತರ ಹಲವಾರು ಪ್ರಸಿದ್ಧ ಪ್ರಾರ್ಥನಾ ಕೇಂದ್ರಗಳಿವೆ. ಕಾರ್ಕಳ, ಉಡುಪಿ, ಮಂಗಳೂರು, ಉಳ್ಳಾಲಗಳಲ್ಲಿ ಇವರ ಪ್ರಾಚೀನ ಆರಾಧನಾ ಕೇಂದ್ರಗಳಿವೆ. ಇಲ್ಲಿ ಹಿಂದುಗಳೂ ಸಹ ಪ್ರಾರ್ಥನೆ ಮತ್ತು ಅವರ ಆಚರಣೆಗಳಲ್ಲಿ ಪಾಲ್ಗೊಳ್ಳುವುದು ಕಂಡುಬರುತ್ತದೆ. ಸೌಹಾರ್ದ ಜನಜೀವನಕ್ಕೊಂದು ಈ ಪ್ರದೇಶ ಉತ್ತಮ ಉದಾಹರಣೆಯಾಗಿದೆ.

ತುಳುನಾಡಿನ ಜನರ ಪ್ರಧಾನ ಕಸುಬು ಬೇಸಾಯ. ಭತ್ತ, ತಂಗು, ಅಡಿಕೆ, ರಬ್ಬರ್, ಕಾಳುಮೆಣಸು, ಇತ್ಯಾದಿ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ತುಳುನಾಡಿನಿಂದ ಮುಂಬೈಗೆ ವಲಸೆ ಹೋಗಿರುವ ಹಲವಾರು ಜನಾಂಗದವರು ಅಲ್ಲಿ ವಿಭಿನ್ನ ಕ್ಷೇತ್ರಗಲ್ಲಿ ಗುರ್ತಿಸಿಕೊಂಡಿದ್ದಾರೆ. ಮುಖ್ಯವಾಗಿ ಹೋಟೆಲ್ ಉದ್ಯಮ, ಕೈಗಾರಿಕೆ, ಸಿನಿಮಾರಂಗ, ಮೊದಲಾದ ಕ್ಷೇತ್ರಗಳಲ್ಲಿ ತುಳು ಜನರು ಹೆಸರು ವಾಸಿಯಾಗಿದ್ದಾರೆ.

ತುಳನಾಡು ಜಾನಪದ ಕಲೆಗಳ ತವರೂರಾಗಿದೆ. ಯಕ್ಷಗಾನ ಇಲ್ಲಿನ ಅಪೂರ್ವ ಜಾನಪದ ಕಲಾಸಂಪತ್ತು. ಸಾಹಿತ್ಯ, ಸಂಗೀತ, ನೃತ್ಯ, ಅಭಿನಯ, ವೇಷಭೂಷಣಗಳಿಂದ ಕೂಡಿರುವ ಸಮಷ್ಟಿ ಕಲೆಯಾದ ಯಕ್ಷಗಾನ ಈ ಜಿಲ್ಲೆಯ ಪಂಡಿತ, ಪಾಮರರಿಗೆ ಅಚ್ಚುಮೆಚ್ಚಿನ ಕಲಾಮಾಧ್ಯಮವಾಗಿದೆ. ಮಳೆಗಾಲ ಮುಗಿದ ನಂತರ ಆರು ತಿಂಗಳು ಈ ಮೇಳಗಳು ಪ್ರದರ್ಶನ ನೀಡುತ್ತಿರುತ್ತವೆ. ಸಾಮಾನ್ಯವಾಗಿ ಮಳೆಗಾಲದಲ್ಲಿ ಬೆಂಗಳೂರು, ಮುಂಬೈಗಳಂತ ನಗರಗಳಲ್ಲಿ ಪ್ರದರ್ಶನ ನೀಡುತ್ತವೆ. ಈ ಯಕ್ಷಗಾನ ರೂಪಕವನ್ನು "ತೆಂಕುತಿಟ್ಟು" ಎಂದೂ ಉಡುಪಿಯಿಂದ ಕುಂದಾಪುರದ ವರೆಗಿನ ರೂಪಕವನ್ನು "ಬಡಗುತಿಟ್ಟು" ಎಂದು ಕರೆಯಲಾಗುತ್ತದೆ. ವೇಷ ಭೂಷಣಗಳು ಮತ್ತು ಕುಣಿತದ ದೃಷ್ಟಿಯಿಂದ ಈ ಎರಡೂ ತಿಟ್ಟುಗಳಲ್ಲಿ ಮುಖ್ಯವಾದಂತಹ ವ್ಯತ್ಯಾಸಗಳಿವೆ.

ಪ್ರಾಚೀನ ಕಾಲದಿಂದಲೂ ತುಳುನಾಡಿನಲ್ಲಿ ಕೆಲವು ಜನಪದ ಕಲಾತ್ಮಕ ವಿನೋದಗಳು ಜನಜೀವನದಲ್ಲಿ ಹಾಸುಹೊಕ್ಕಾಗಿವೆ. ಕೋಳಿಅಂಕ, ಕಂಬಳ, ಮೊಸರು ಕುಡಿಕೆ, ಚೆಂಡಿನ ಉತ್ಸವ,

ತೆಂಗಿನ ಆಟ, ಗೇರು ಬೀಜದ ಆಟ, ಮೊದಲಾದ ಜಾನಪದ ಕಲಾ ಪ್ರಕಾರಗಳು ಜನರಿಗೆ ಮನೋರಂಜನೆಯನ್ನು ಒದಗಿಸುತ್ತವೆ. ಧಾರ್ಮಿಕ ಕಲಾ ಪ್ರಕಾರಗಳಾದ ದೇವಸ್ಥಾನಗಳ ಉತ್ಸವ, ಮೂರ್ತಿದರ್ಶನ, ಬಲಿ, ಒರ್ತೆಕೋಲ, ಕೊರಗ ತನಿಯ ಪೂಜೆ, ಭಗವತಿಯ ಕೋಲಾಟ, ಕುಣಿತಗಳು ಇಲ್ಲಿನ ಜನರ ಧಾರ್ಮಿಕ ಪ್ರಜ್ಞೆಯ ಜೊತೆಗೆ ಸೌಂದರ್ಯ ದೃಷ್ಟಿಗೂ ಜೀವನದ ಉಲ್ಲಾಸ ಪ್ರವೃತ್ತಿಗೂ ನಿದರ್ಶನವಾಗಿದೆ. ಹರಿಜನರ ಜಾನಪದ ಕುಣಿತಗಳಾದ ದುಡಿಕುಣಿತ, ಡೋಲಿನ ಕುಣಿತ, ಮಾದರಚೆನ್ನನ ಕುಣಿತ ಇತ್ಯಾದಿಗಳು ಸಮಾಜದ ಕೆಳವರ್ಗದ ಜನರಲ್ಲೂ ಕಲೆಯ ಶ್ರೀಮಂತಿಕೆ ಅಡಗಿದೆ ಎನ್ನುವುದನ್ನು ತೋರಿಸುತ್ತದೆ.

ವಿರಾಮದ ವೇಳೆಯಲ್ಲಿ ತುಳುವರು ಕೆಲ ಜನಪದ ಆಟಗಳನ್ನು ಆಡುತ್ತಾರೆ. ಗಂಡಸರು ಪಗಡೆ, ಚದುರಂಗ, ಹುಡುಗರು, ಕುಟ್ಟಿದೊಣ್ಣೆ, ಬುಗುರಿ, ಪೇಟ್ಳೆ, ಕಬ್ಬಡ್ಡಿ ಮುಂತಾದವು. ಚೆನ್ನಮಣೆ ಆಟವನ್ನು ಮಹಿಳೆಯರು ಮತ್ತು ಹೆಣ್ಣು ಮಕ್ಕಳು ಆಡುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಕರಾವಳಿಯ ಈ ಪ್ರದೇಶವು ವೇಗವಾಗಿ ಅಭಿವೃದ್ಧಿ ಹೊಂದುತ್ತಿರುವುದು ಕಂಡುಬರುತ್ತದೆ. ಮಾತೃ ಮೂಲವಾದ ಅಳಿಯಕಟ್ಟು ತುಳುನಾಡಿನ ಅನೇಕ ಜನಾಂಗಗಳಲ್ಲಿ ಪ್ರಚಲಿತದಲ್ಲಿದೆ. ಇದು ಈ ಪ್ರದೇಶದಲ್ಲಿಯ ಹೆಣ್ಣಿಗೆ ನೀಡಿರುವ ಸ್ಥಾನಮಾನಗಳಿಗೆ ಸಾಕ್ಷಿಯಾಗಿದೆ. ತುಳು ಜನಪದ ಸಾಹಿತ್ಯದ ಕೆಲವು ಪ್ರಕಾರಗಳಲ್ಲಿ ಇದರ ಉಲ್ಲೇಖವಿರುವುದನ್ನು  ಗಮನಿಸಬಹುದು. "ತುಳುಸಿರಿ" ಸಂಧಿಯಲ್ಲಿನ ಸಿರಿಯಕಥೆ ಮಾವನ ಆಸ್ತಿಗೆ ಅಳಿಯನೇ ಹಕ್ಕುದಾರನಾಗುತ್ತಾನೆ. ಇದು ಪ್ರಮುಖವಾಗಿ ಕರಾವಳಿಯ ಬಂಟ ಜನಾಂಗಗಳಲ್ಲಿ ಮತ್ತಿತರ ಕೆಲವು ಜಾತಿಗಳಲ್ಲಿ ಕಂಡು ಬರುತ್ತದೆ. ಇಲ್ಲಿ ಸ್ತ್ರೀಗೆ ಪ್ರಾಧಾನ್ಯತೆ ಹೆಚ್ಚು. ಕುಟುಂಬದ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವ ಅಧಿಕಾರವಿರುವುದು ಹೆಣ್ಣಿಗೆ ಮಾತ್ರ ಗಂಡಿಗೆ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವ ಅಧಿಕಾರವಿರುವುದಿಲ್ಲ.

**೨.೬ ಕೊಳ್ಳೆಗಾಲ ಪರಿಸರದ ಭೌಗೋಳಿಕ ಹಿನ್ನೆಲೆ:**

ಚಾಮರಾಜನಗರ ಜಿಲ್ಲೆಯಲ್ಲಿರುವ ತಾಲೂಕು ಪ್ರದೇಶವಾದ ಕೊಳ್ಳೆಗಾಲ ೧೯೫೬ರವರೆಗೆ ಮದ್ರಾಸ್ ಪ್ರಸಿಡೆನ್ಸಿ ಆಡಳಿತಕ್ಕೊಳಪಟ್ಟಿತ್ತು. ಇದು ಕೊಯಿಮತ್ತೂರು ಜಿಲ್ಲೆ ಮಂಡಳಿಯ ಆಡಳಿತ ವ್ಯಾಪ್ತಿಗೆ ಈ ಪ್ರದೇಶ ಒಳಪಟ್ಟಿತ್ತು. ಭಾಷಾವಾರು ಪ್ರಾಂತದ ವಿಂಗಡನೆಯಾದ ನಂತರ ಕೊಳ್ಳೆಗಾಲವು ಕರ್ನಾಟಕ ರಾಜ್ಯದ ವ್ಯಾಪ್ತಿಗೆ ಒಳಪಟ್ಟಿತು. ಕೊಳ್ಳೆಗಾಲದಿಂದ ಸುಮಾರು ಎಂಬತ್ತು ಕಿ.ಮೀ. ಪ್ರಯಾಣ ಬೆಳೆಸಿದರೆ ತಮಿಳುನಾಡು ರಾಜ್ಯ ಪ್ರಾರಂಭವಾಗುತ್ತದೆ. ಕರ್ನಾಟಕದ ಕೊನೆ ಪ್ರದೇಶ ಹೊಗೆನಕಲ್. ಕೊಳ್ಳೆಗಾಲದಿಂದ ೮೯ ಕಿ. ಮೀ. ದೂರದಲ್ಲಿ ಮಲೆಮಾದೇಶ್ವರ ಬೆಟ್ಟ ಹಾಗು ೫೬ ಕಿ.ಮೀ. ದೂರದಲ್ಲಿ ಬಿಳಿಗಿರಿರಂಗನ ಬೆಟ್ಟ ಸಿಗುತ್ತದೆ.

ಕೊಳ್ಳೆಗಾಲದ ಪ್ರದೇಶವು ಹೆಚ್ಚಾಗಿ ತಮಿಳು ಸಂಸ್ಕೃತಿಯ ಪ್ರಭಾವವನ್ನು ಹೊಂದಿದೆ ಎಂದು ಹೇಳಿದರೆ ತಪ್ಪಾಗಲಾರದು. ಇಲ್ಲಿಯ ಕನ್ನಡ ಭಾಷೆಯ, ಮೇಲೆ ತಮಿಳು ಭಾಷೆ ಪ್ರಭಾವ ಬೀರಿದೆ. ಹೀಗಾಗಿ ಕನ್ನಡ ಶಬ್ದಗಳ ಕೊನೆಗೆ "ಡ" ಅಕ್ಷರದ ಬಳಕೆಯಾಗುತ್ತಿರುವುದು ಸಾಮಾನ್ಯವಾಗಿದೆ.

"ಬಾ ಎಂಬುದಕ್ಕೆ 'ಬುಡ' ಎಂದು ಹೋಗುಡ, ತಿಂದಡ, ಎನ್ಮಾಡಿದಡ" ಮುಂತಾದವುಗಳನ್ನು ಉದಾಹರಿಸಬಹುದಾಗಿದೆ.

ಕೊಳ್ಳೆಗಾಲವು ಪಶ್ಚಿಮ ಘಟ್ಟದ ಪ್ರದೇಶದಲ್ಲಿದ್ದು ಈ ಘಟ್ಟವು ತಮಿಳುನಾಡಿನತ್ತ ಸಾಗುತ್ತದೆ. ಕೊಳ್ಳೆಗಾಲವನ್ನು ಬೆಟ್ಟದ ಸಾಲುಗಳು ಆವರಿಸಿಕೊಂಡಿವೆ. ಭಾಷಿಕವಾಗಿ, ಸಾಂಸ್ಕೃತಿಕವಾಗಿ, ಈ ಪ್ರದೇಶದ ಮೇಲೆ ತಮಿಳು ಪ್ರಭಾವ ಹೆಚ್ಚಾಗಿದೆ. ಕೊಳ್ಳೆಗಾಲ ಪ್ರದೇಶದ ಜನರ ವ್ಯಾಪಾರ ವಹಿವಾಟುಗಳೆಲ್ಲಾ ತಮಿಳುನಾಡಿನ ಕೊಯಿಮುತ್ತೂರು ಹಾಗು ಸೇಲಂ ಪ್ರದೇಶಗಳಲ್ಲಿ ನಡೆಯುತ್ತವೆ. ತಮಿಳಿಗರು ಕೊಳ್ಳೆಗಾಲವನ್ನು ತಮ್ಮ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಬಳಸಿಕೊಳ್ಳುತ್ತಿದ್ದಾರೆ. ತಮಿಳುನಾಡಿನಲ್ಲಿ ಬೆಳೆಯುತ್ತಿರುವ ಬಾಳೆ ಹಣ್ಣುಗಳನ್ನು ಕೊಳ್ಳೆಗಾಲಕ್ಕೆ ತಂದು ಮಾರಾಟ ಮಾಡುತ್ತಾರೆ ಹಾಗು ಕೊಳ್ಳೆಗಾಲದಲ್ಲಿ ಬೆಳೆಯುತ್ತಿರುವ ರಾಗಿ, ರೇಷ್ಮೆ, ಹುಚ್ಚೆಳ್ಳು ಕಡಲೆಕಾಯಿ ಮುಂತಾದ ವಸ್ತುಗಳನ್ನು ಖರೀದಿಸಿಕೊಂಡು ತಮಿಳುನಾಡಿಗೆ ರಫ್ತು ಮಾಡುತ್ತಾರೆ. ಕೊಳ್ಳೆಗಾಲದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಳೆಯಾಗುತ್ತಿದ್ದರೂ ಇಲ್ಲಿ ಬೋರವೆಲ್‌ಗಳ ಮೂಲಕ ನೀರಾವರಿ ವ್ಯವಸ್ಥೆ ಮಾಡಿಕೊಂಡು ಭತ್ತ, ಕಬ್ಬು, ರೇಷ್ಮೆ, ಬಾಳೆ, ತೆಂಗು ಮುಂತಾದ ಫಸಲುಗಳನ್ನು ಬೆಳೆಯುತ್ತಾರೆ. ರಾಗಿ ಹಾಗೂ ರೇಷ್ಮೆ ಇಲ್ಲಿಯ ಪ್ರಮುಖ ಬೆಳೆಗಳು. ಕೆಲವರು ಅರಿಶಿಣವನ್ನು ಬೆಳೆಯುತ್ತಾರೆ. ಹುರುಳಿ, ಅವರೆ, ಜೋಳ ಇವುಗಳನ್ನು ಬೆಳೆಯುತ್ತಾರೆ. ಇಲ್ಲಿಯ ಜನ ಹೆಚ್ಚಾಗಿ ರಾಗಿಯನ್ನು ಆಹಾರಕ್ಕಾಗಿ ಬಳಸುತ್ತಾರೆ.

ಬಿಳಿಗಿರಿರಂಗನ ಬೆಟ್ಟ ಹಾಗೂ ಬೂದಬಾಳು ಇವು ವೈಷ್ಣವ ಧರ್ಮದ ಪ್ರಮುಖ ಕೇಂದ್ರಗಳಾಗಿವೆ. ನಂಜನಗೂಡಿನ ನಂಜುಂಡೇಶ್ವರ, ಮಲೆಮಾದೇಶ್ವರ ಶೈವ ಧರ್ಮದ ಪ್ರಮುಖ ಆರಾಧನಾ ಕೇಂದ್ರಗಳಾಗಿವೆ. ಕೊಳ್ಳೆಗಾಲದಲ್ಲಿ ಮಾತೃಪ್ರಧಾನ ದೇವತೆಗಳ ಆರಾಧನೆ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಮಗೂರಿನ ತಿಬ್ಬಾದೇವಿ, ಚಾಮರಾಜನಗರದ ರಾಜರಾಜೇಶ್ವರಿ ಪ್ರಮುಖ ದೇವತೆಗಳಾಗಿದ್ದಾರೆ ಹಾಗೂ ಪ್ರತಿ ಊರಿನಲ್ಲಿ ಮಾರಮ್ಮ, ಎಲ್ಲಮ್ಮ, ದುರ್ಗಮ್ಮನಂತಹ ಊರದೇವತೆಗಳ ಆರಾಧನೆ ಕಂಡು ಬರುತ್ತದೆ.

ಕೊಳ್ಳೆಗಾಲದ ಪ್ರದೇಶದಲ್ಲಿ ಮಲೆಯಮಾದೇಶ್ವರನ ಆರಾಧನೆ ಪ್ರಮುಖವಾಗಿ ಕಂಡುಬರುತ್ತದೆ. ಮಲೆಮಾದೇಶ್ವರ ಬೆಟ್ಟ ಚಿಕ್ಕಲೂರಿನಲ್ಲಿರುವ ಸಿದ್ದಪ್ಪಾಜಿ ಗದ್ದುಗೆ, ಕಪ್ಪಡಿಯಲ್ಲಿರುವ ರಾಚಪ್ಪಾಜಿ ಗದ್ದುಗೆ, ಬೊಪ್ಪೇಗೌಡನಪುರದಲ್ಲಿರುವ ಮಂಟೇಸ್ವಾಮಿ ಗದ್ದುಗೆ ಮುಂತಾದ ಧಾರ್ಮಿಕ ಕೇಂದ್ರಗಳು ಕಂಡು ಬರುತ್ತವೆ. ಈ ಪ್ರದೇಶದಲ್ಲಿ ಮಂಟೇಸ್ವಾಮಿಯ ಒಕ್ಕಲಿನವರಾದ ದೇವರ ಗುಡ್ಡರು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತಾರೆ. ಚಾಮರಾಜನಗರ ಜಿಲ್ಲೆಯ ಯಳಂದೂರು, ಮಡಿಗುಂಡಿಯಲ್ಲಿರುವ ಜೈನ ಕೇಂದ್ರಗಳು ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದ ಸ್ಥಳಗಳಾಗಿವೆ.

ಹಲಗೂರು ಕಮ್ಮಾರಿಕೆಗೆ ಅತ್ಯಂತ ಪ್ರಸಿದ್ಧವಾದ ಸ್ಥಳವಾಗಿದ್ದ ಬಗ್ಗೆ ಮಾಹಿತಿ ದೊರೆಯುತ್ತಿದೆ. ಅಲಗೂರು ಯುದ್ಧಗಳಿಗೆ ಬೇಕಾಗುತ್ತಿದ್ದ ಪ್ರಸಿದ್ಧವಾದ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕೇಂದ್ರವಾಗಿತ್ತು

ಎಂದು ತಿಳಿಯುತ್ತದೆ. ಅಲಗು ಎಂಬ ಹೆಸರೆ ಖರ್ಡ, ಬರ್ಚಿ, ಬಾಣ, ಚೂರಿ, ಮುಂತಾದವುಗಳನ್ನು ತಯಾರಿಸುವುದು ಎಂದು ಹೇಳಲಾಗುತ್ತದೆ. ಅಲಗೂರು ಮಂಟೇಸ್ವಾಮಿ ಕಾಲಕ್ಕೆ ಕಬ್ಬಿಣದ ವಸ್ತುಗಳನ್ನು ಸಿದ್ಧಪಡಿಸುವ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ. ಇತ್ತೀಚೆಗೆ ಸಂಶೋಧಕರು ಟಿ. ನರಸೀಪುರದಲ್ಲಿ ಕಬ್ಬಿಣ ಸಂಸ್ಕರಿಸುವ ಕುಲುಮೆಗಳು ಇದ್ದವು ಎಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಹಲಗೂರಿನ ಕಮ್ಮಾರರು ಟಿ ನರಸೀಪುರದಿಂದ ಕಬ್ಬಿಣವನ್ನು ತಂದು ಆಯುಧಗಳನ್ನು ಸಿದ್ಧಪಡಿಸುತ್ತಿರಬಹುದು. ಮಂಟೇಸ್ವಾಮಿಯ ಕಾವ್ಯ ಒಂದು ರೀತಿಯಲ್ಲಿ ಕಮ್ಮಾರಿಕೆ ಹಾಗೂ ಕಬ್ಬಿಣದ ಮಹತ್ವವನ್ನು ಕುರಿತು ಉತ್ತಮವಾದ ಮಾಹಿತಿಯನ್ನು ಕೊಡುತ್ತದೆ. ಸಿದ್ದಪ್ಪಾಜಿಯು ಸಹ ಕಮ್ಮಾರ ಕುಟುಂಬದಿಂದ ಬಂದವನಾಗಿದ್ದರಿಂದ ಅವನು ಕಬ್ಬಿಣದ ಮಹತ್ವವನ್ನು ಅರತು ಕೊಂಡವನಾಗಿದ್ದ.

ಕೊಳ್ಳೆಗಾಲದಲ್ಲಿ ಲಿಂಗಾಯಿತರು ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಒಕ್ಕಲಿಗರು, ಕುರುಬರು, ಪರಿಶಿಷ್ಟ ಜಾತಿಯವರು ಕಂಡು ಬರುತ್ತಾರೆ. ಸೋಲಿಗ ಕಾಡುಕುರುಬ, ಜೇನುಕುರುಬ, ವಕೈಕುರುಬ, ಕಮ್ಮಾರ ಮುಂತಾದ ಆದಿವಾಸಿ ಸಮುದಾಯಗಳು ಈ ಪ್ರದೇಶದಲ್ಲಿ ವಾಸಿಸುತ್ತವೆ.

**೨.೭ ಕಮ್ಮಾರರ ಭೌಗೋಳಿಕ ನೆಲೆಗಳು:**

ಕಮ್ಮಾರಿಕೆಯ ವೃತ್ತಿ ಸಾಮಾನ್ಯವಾಗಿ ಹಳ್ಳಿ ಪ್ರದೇಶಗಳಲ್ಲಿ ಸಮೃದ್ಧವಾಗಿ ಕಂಡುಬರುತ್ತದೆ. ಹಳ್ಳಿಗರ ಮೂಲವೃತ್ತಿ ಕೃಷಿ. ಕೃಷಿಗೆ ಬೇಕಾಗುವ ಕಬ್ಬಿಣದ ಉಪಕರಣಗಳನ್ನು ಸಿದ್ಧಪಡಿಸುವವನೇ ಕಮ್ಮಾರ ಹೀಗಾಗಿ ಕೃಷಿ, ಕಮ್ಮಾರಿಕೆ ಹಾಗೂ ಬಡಗಿತನ ಈ ಮೂರು ವೃತ್ತಿಗಳು ಒಂದಕ್ಕೊಂದು ಅವಿನಾಭಾವ ಸಂಬಂಧಗಳನ್ನು ಹೊಂದಿವೆ ಎಂದು ಹೇಳಬಹುದು. ಉತ್ತರ ಕರ್ನಾಟಕದ ಯಾವುದೇ ಹಳ್ಳಿಯನ್ನು ಪ್ರವೇಶಿಸಿದರೆ ಅಲ್ಲಿ ಕಮ್ಮಾರರ ಹಾಗೂ ಬಡಿಗೇರರ ಕನಿಷ್ಟ ಒಂದು ಕುಟುಂಬವಾದರೂ ಇದ್ದೇ ಇರುತ್ತದೆ. ಈ ಕುಶಲ ಕರ್ಮಿಗಳು ಇರದೇ ಇದ್ದರೆ ಆ ಗ್ರಾಮಕ್ಕೆ ಜೀವಕಳೆಯೇ ಇಲ್ಲದಂತಾಗಿರುತ್ತದೆ ಎಂದು ಹೇಳಬಹುದು. ಮಂಗಳೂರು ಉಡುಪಿ ಜಿಲ್ಲೆಗಳಲ್ಲಿ ಕೃಷಿಗೆ ಉತ್ತರ ಕರ್ನಾಟಕದಷ್ಟು ಸಮೃದ್ಧವಾದ ಭೂಮಿ ಇಲ್ಲ .ಹೀಗಾಗಿ ಉತ್ತರ ಕರ್ನಾಟಕವನ್ನು ಹೋಲಿಸಿದರೆ ಉಡುಪಿ ಮಂಗಳೂರು ಜಿಲ್ಲೆಗಳಲ್ಲಿ ಕೃಷಿ ಚಟುವಟಿಕೆಗಳು ಕಡಿಮೆ ಎಂದೇ ಹೇಳಬೇಕಾಗುತ್ತದೆ. ಈ ಕಾರಣಗಳಿಂದ ಉಡುಪಿ ಹಾಗೂ ಮಂಗಳೂರು ಜಲ್ಲೆಗಳ ಗ್ರಾಮೀಣ ಪ್ರದೇಶಗಳಲ್ಲಿ ಎರಡು ಅಥವಾ ಮೂರು ಗ್ರಾಮಗಳಿಗೆ ಸೇರಿ ಒಂದು ಅಥವಾ ಎರಡು ಕಮ್ಮಾರರ ಕುಟುಂಬಗಳಿರುವುದು ಕಂಡು ಬರುತ್ತದೆ. ಒಂದು ಕಾಲದಲ್ಲಿ ರಾಜ್ಯದಲ್ಲಿರುವ ಎಲ್ಲಾ ಕೃಷಿಕರು ಬೆಳೆಯುತ್ತಿರುವ ಎಲ್ಲ ಬೆಳೆಗಳಲ್ಲಿ ಕಮ್ಮಾರರು ಮತ್ತು ಬಡಿಗೇರರು ಪಾಲುದಾರರಾಗಿದ್ದರು. ಹೀಗಾಗಿ ಉತ್ತರ ಕರ್ನಾಟಕದಲ್ಲಿ ಇವರನ್ನು **ಆಯಗಾರರು** ಎಂದು ಕರೆಯುತ್ತಿದ್ದರು.

ಕೆಲ ಗ್ರಾಮಗಳಲ್ಲಿ ಕಮ್ಮಾರರು ಖಾಯಂ ನಿವಾಸಿಗಳಾಗಿ ಕಂಡು ಬಂದರೆ ಮತ್ತೆ ಕೆಲ ಪ್ರದೇಶಗಳಲ್ಲಿ ಅಲೆಮಾರಿಗಳಾಗಿ ಕಂಡುಬರುತ್ತಾರೆ. ಈ ಅಲೆಮಾರಿ ಕಮ್ಮಾರರು ಮುಂಗಾರು

ಮಳೆ ಪ್ರಾರಂಭವಾದ ಮೇಲೆ ಯಾವ ಯಾವ ಹಳ್ಳಿಗಳಲ್ಲಿ ಕಮ್ಮಾರರ ಕುಟುಂಬಗಳು ಇರುವುದಿಲ್ಲವೋ ಆ ಹಳ್ಳಿಗಳಿಗೆ ಹೋಗಿ ಊರ ಹೊರಗೆ ಟೆಂಟ್ ಹಾಕಿಕೊಂಡು ಕೃಷಿಗೆ ಬೇಕಾದ ಉಪಕರಣಗಳನ್ನು ಸಿದ್ಧಪಡಿಸಿಕೊಟ್ಟು ಅವರಿಂದ ಹಣ, ಬಟ್ಟೆ, ಹಾಗು ಧಾನ್ಯಗಳನ್ನು ಪಡೆದುಕೊಂಡು ಜೀವನ ಸಾಗಿಸುತ್ತಾರೆ. ಹೀಗಾಗಿ ಇವರಿಗೆ ಅಲೆಮಾರಿ ಕಮ್ಮಾರರು ಅಥವಾ "ಬೈಲ ಕಮ್ಮಾರರು", "ಬೈಲಗಂಬಾರರು" ಎಂದು ಕರೆಯುತ್ತಾರೆ. ಈ ಅಲೆಮಾರಿ ಕಮ್ಮಾರರು ಪ್ರತಿ ವರ್ಷ ಯಾವ ಯಾವ ಊರುಗಳಿಗೆ ಹೋಗಿ ಕಾರ್ಯನಿರ್ವಹಿಸಬೇಕು ಎಂಬುದರ ಬಗ್ಗೆ ತಮ್ಮ ತಮ್ಮಲ್ಲಿಯೇ ಚರ್ಚಿಸಿರುತ್ತಾರೆ. ಇತ್ತಿತ್ತವಾಗಿ ಅಲೆಮಾರಿ ಕಮ್ಮಾರರು ಖಾಯಂ ಕಮ್ಮಾರರಿರುವ ಹಳ್ಳಿಗಳಿಗೂ ಹೋಗುತ್ತಿರುವುದು ಕಂಡುಬರುತ್ತದೆ. ಚಾಮರಾಜನಗರದ ಕೊಳ್ಳೆಗಾಲ ತಾಲೂಕಿನಲ್ಲಿಯೂ ಸಹ ಪ್ರತಿಯೊಂದು ಗ್ರಾಮದಲ್ಲಿ ಕಮ್ಮಾರರಿರುವುದು ಕಂಡುಬರುವುದಿಲ್ಲ. ಎರಡು ಊರುಗಳಿಗೊಬ್ಬರಂತೆ ಕಬ್ಬಿಣದ ಕೆಲಸ ನಿರ್ವಹಿಸುವ ಆಚಾರಿಗಳು ಇರುವುದು ಕಂಡು ಬರುತ್ತದೆ.

ಗ್ರಾಮೀಣ ಪ್ರದೇಶಗಳಲ್ಲಿರುವ ಕಮ್ಮಾರರ ಮನೆಗಳು ಕೆಲವು ಊರುಗಳಲ್ಲಿದ್ದರೆ ಮತ್ತೆ ಕೆಲವು ಊರ ಹೊರಗೆ ಇರುವುದು ಕಂಡು ಬರುತ್ತದೆ. ಕೆಲ ಕಮ್ಮಾರರು ತಮ್ಮ ವಾಸಸ್ಥಳವನ್ನು ಊರ ಒಳಗೆ ಮಾಡಿಕೊಂಡು ಕಬ್ಬಿಣ ಕೆಲಸ ಮಾಡುವುದಕ್ಕಾಗಿ ಊರ ಹೊರಗೆ ಕುಲುಮೆಯುಳ್ಳ ಟೆಂಟ್‌ನ್ನು ಹಾಕಿಕೊಂಡಿರುತ್ತಾರೆ. ಕಮ್ಮಾರರ ಕೆಲಸ ಬಹಳ ಒರಟಾಗಿರುವುದು. ಕಬ್ಬಿಣವನ್ನು ಚೆನ್ನಾಗಿ ಕಾಯಿಸಿ, ದೊಡ್ಡ ದೊಡ್ಡ ಸುತ್ತಿಗೆಗಳಿಂದ ಕಾದ ಕಬ್ಬಿಣವನ್ನು ಜೋರಾಗಿ ಹೊಡೆಯುವುದರಿಂದ ಅದರಿಂದ ಠಣ್ ಠಣ್ ಎಂಬ ಶಬ್ಧ ಬರುತ್ತದೆ. ಒಂದೊಂದು ಸಲ ಈ ಶಬ್ಧವು ಕಿವಿಯ ಕರ್ಣಪಟಲವನ್ನು ಹರಿಯುತ್ತದೆಯೇನೋ ಎಂಬ ಭಾವನೆ ಮೂಡುತ್ತದೆ. ಈ ಕಾರಣಗಳಿಂದ ಕಮ್ಮಾರರು ಇತರೆ ಕುಟುಂಬದವರಿಗೆ ತೊಂದರೆ ಆಗಬಾರದು ಎಂಬ ಉದ್ದೇಶದಿಂದ ಮತ್ತು ಮುಂಗಾರು ಮಳೆ ಪ್ರಾರಂಭವಾದ ಮೇಲೆ ಈ ಕಮ್ಮಾರರು ಹಗಲೂ ರಾತ್ರಿಯನ್ನದೆ ಕಾರ್ಯ ಮಾಡಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದ ತನ್ನ ಕಾರ್ಯವನ್ನು ಊರಹೊರಗೆ ಮಾಡಲು ಒಂದು ಸೆಡ್ಡನ್ನು ಹಾಕಿಕೊಡಿರುತ್ತಾರೆ. ಕೆಲ ಊರುಗಳಲ್ಲಿ ಕಮ್ಮಾರರು ಊರಿನ ಮಧ್ಯದಲ್ಲಿ ಇರುವ ತಮ್ಮ ಮನೆಯ ಹೊರಾಂಗಣದಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಉಡುಪಿ, ಮಂಗಳೂರು, ಹಾಗೂ ಕೊಳ್ಳೆಗಾಲ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕಮ್ಮಾರರ ಮನೆಗಳು ಸಾಮಾನ್ಯವಾಗಿ ಊರಿನ ಒಳಗೆ ಇದ್ದು ಅವರ ಕಾರ್ಯಾಗಾರ ಮಾತ್ರ ಊರ ಹೊರಗೆ ಇರುವುದು ಕಂಡುಬಂದಿದೆ.

ಕಮ್ಮಾರಿಕೆ ವೃತ್ತಿಗೆ ಅತೀ ಮಖ್ಯವಾದ ವಸ್ತು ಎಂದರೆ ಕುಲುಮೆ. ಈ ಕುಲುಮೆಯಲ್ಲಿ ಅತ್ಯಂತ ಪ್ರಖರವಾದ ಬೆಂಕಿ ಇರುತ್ತದೆ. ಹೊರಗಿನಿಂದ ಗಾಳಿ ಕುಲುಮೆಯ ಹತ್ತಿರ ಸುಳಿಯದಂತೆ ಸುತ್ತಲೂ ಇಟ್ಟಂಗಿ ಅಥವಾ ಮಣ್ಣಿನಿಂದ ತಯಾರಿಸಿದ ಹೆಂಡಿಗಳನ್ನು ಬಳಸಿ ಗೋಡೆ ಕಟ್ಟಿರುತ್ತಾರೆ. ತಿದಿ ಊದಿದಾಗ ಮೇಲಿಂದ ಮೇಲೆ ಬೆಂಕಿ ಮೇಲೆ ಏರುತ್ತಿರುತ್ತದೆ. ಹೀಗಾಗಿ ಈ ಕಮ್ಮಾರರು ತಮ್ಮ ಕಾರ್ಯಾಗಾರಗಳಿರುವ ಮನೆಯ ಮೇಲೆ ಸಾಮಾನ್ಯವಾಗಿ ಹೆಂಚು ಹಾಕಿರುತ್ತಾರೆ. ಈ

Work Shop ಮೇಲೆ ಹುಲ್ಲು ಹಾಕಿದರೆ ಬೆಂಕಿ ಹತ್ತುವ ಪ್ರಸಂಗಗಳೇ ಹೆಚ್ಚು. ಇದರಿಂದ ಅನೇಕ ಅನಾಹುತಗಳಾಗುತ್ತವೆ ಎಂಬ ಕಾರಣಕ್ಕೆ Work Shop ಮೇಲೆ ಹುಲ್ಲಿನ ಬದಲಾಗಿ ಕಬ್ಬಿಣ ತಗಡು ಅಥವಾ ಹೆಂಚುಗಳನ್ನು ಹಾಕಿರುತ್ತಾರೆ. Work Shop ಸುತ್ತಲೂ ಕಟ್ಟಿರುವ ಗೋಡೆ ಸುಮಾರು ೫ ರಿಂದ ೬ ಅಡಿ ಮಾತ್ರ ಎತ್ತರವಿರುತ್ತದೆ. ಉಳಿದಂತೆ ಕುಲುಮೆಯಿಂದ ಬರುವ ಬೆಂಕಿಯ ತಾಪ ಹೊರಗೆ ಹೋಗಲು ಬಿಟ್ಟಿರುತ್ತಾರೆ. ಹೊರಗಿನ ಗಾಳಿ ಒಳಗೆ ಬರಬೇಕು. ಆದರೆ ಕುಲುಮೆ ಉರಿಯುತ್ತಿರುವ ಪ್ರದೇಶಕ್ಕೆ ಅದು ತಾಗಬಾರದ ಹಾಗೆ ಕಾರ್ಯಾಗಾರದ ಮನೆಯನ್ನು ಸಿದ್ಧಪಡಿಸಿಕೊಂಡಿರುತ್ತಾರೆ. ಈ Work Shopಗೆ ಕೆಲವರು ಬಾಗಿಲು ಹಚ್ಚಿರುತ್ತಾರೆ ಮತ್ತೆ ಕೆಲವರು ಬಾಗಿಲನ್ನು ಹಚ್ಚದೆ ಹಾಗೆ ಬಿಟ್ಟಿರುತ್ತಾರೆ. ಕೊಳ್ಳೆಗಾಲದ ತಾಲೂಕಿನಲ್ಲಿ ವಾಸಿಸುತ್ತಿರುವ ಕಮ್ಮಾರರು ತಾವು ವಾಸಿಸುವ ಗುಡಿಸಿಲುಗಳ ಮೇಲ್ಛಾವಣಿಗೆ ಹುಲ್ಲನ್ನು ಹೊಚ್ಚಿದ್ದಾರೆ. ಆದರೆ ಅವರ ಕಾರ್ಯನಿರ್ವಹಿಸುತ್ತಿರುವ ಮನೆಗಳ ಮೇಲ್ಛಾವಣಿಗೆ ಹೆಂಚುಗಳನ್ನು ಹಾಕಿದ್ದಾರೆ. ಉಡುಪಿ ಹಾಗೂ ಮಂಗಳೂರು ಜಿಲ್ಲೆಯ ಹಳ್ಳಿಗಳಲ್ಲಿ ವಾಸಿಸುತ್ತಿರುವ ಕಮ್ಮಾರರ Work Shopಗಳನ್ನು ಮಂಗಳೂರು ಹೆಂಚಿನಿಂದ ಅಥವಾ ತಗಡಿನ ಶೀಟಿನಿಂದ ಮೇಲ್ಛಾವಣಿಯನ್ನು ಮುಚ್ಚಿದ್ದಾರೆ.

ಉತ್ತರ ಕರ್ನಾಟಕದಲ್ಲಿ ಕಂಡುಬರುವ ಅಲೆಮಾರಿ ಕಮ್ಮಾರರು ಊರ ಹೊರಗೆ ಹಾಕಿಕೊಂಡ ಟೆಂಟಿನ ಮುಂದೆಯೇ ಚಿಕ್ಕದಾದ ಕುಲುಮೆಯನ್ನು ಅದರ ಮುಂದೆ ಅಡಿಗಲ್ಲನ್ನು ಹಾಕಿಕೊಂಡು ಕೆಲಸ ಮಾಡುತ್ತಿರುವುದನ್ನು ಕಾಣುತ್ತೇವೆ. ಕೊಳ್ಳೆಗಾಲ, ಮಂಗಳೂರು, ಉಡುಪಿ ಜಿಲ್ಲೆಯ ಕಮ್ಮಾರರು, ಕುಲುಮೆಗಳಿಗೆ ಗಾಳಿಯನ್ನು ಒದಗಿಸಲು ದೊಡ್ಡದಾದ ಗಾಳಿ ಬೀಸುವ ಯಂತ್ರವನ್ನು ಹಾಕಿಕೊಂಡಿರುತ್ತಾರೆ. ಇದಕ್ಕೆ ಅವರು "ತಿದಿ" ಎನ್ನುತ್ತಾರೆ. ಕೆಲ ಕಮ್ಮಾರರು ತಮ್ಮ ಮನೆಯ ಪಕ್ಕದಲ್ಲಿಯೇWork Shop ಮಾಡಿಕೊಂಡಿರುವುದನ್ನು ಉಡುಪಿ ಜಿಲ್ಲೆಯಲ್ಲಿ ಕಾಣುತ್ತೇವೆ.

ಸಾಮಾನ್ಯವಾಗಿ ಕಮ್ಮಾರರು ತಮ್ಮ ಕೆಲಸದ ಮನೆಗಳನ್ನು ಚೌಕಾಕಾರದಲ್ಲಿ ರಚಿಸಿಕೊಂಡಿರುತ್ತಾರೆ. ತಿದಿಯ ಮೂಲಕ ಹೆಚ್ಚಿನ ಪ್ರಮಾಣದ ಗಾಳಿಯನ್ನು ಕುಲುಮೆಗೆ ಬರುವಂತೆ ಮಾಡಿ ಬೆಂಕಿ ಪ್ರಜ್ವಲವಾಗಿ ಉರಿಯುತ್ತಿದ್ದರೆ, ಆ ಬೆಂಕಿ ಮಾಳಿಗೆಗೆ ತಗಲಬಾರದು ಎಂಬ ಉದ್ದೇಶದಿಂದ ಮಾಳಿಗೆಯನ್ನು ಎತ್ತರದಲ್ಲಿ ನಿರ್ಮಿಸಿರುತ್ತಾರೆ. ಕೆಲಸದ ಮನೆಯಲ್ಲಿ ನಾಲ್ಕೈದು ಜನರು ಕುಳಿತುಕೊಳ್ಳುವಷ್ಟು ಸ್ಥಳಾವಕಾಶ ಮಾತ್ರ ಮಾಡಿಕೊಂಡಿರುತ್ತಾರೆ. ಈ ಕಾರ್ಯಗಾರದಲ್ಲಿ ಕಮ್ಮಾರನ ತಿದಿ ಊದುವವ, ದೊಡ್ಡ ದೊಡ್ಡ ಗನ್ನುಗಳಿಂದ (ಸುತ್ತಿಗೆಗಳಿಂದ) ಕಾದ ಕಬ್ಬಿಣ ಬಡಿಯುವವ, ಕೆಲಸ ಮಾಡಿಸಲು ಬಂದಿರುವವ, ಮತ್ತು ಒಬ್ಬಿಬ್ಬರು ಮಾತ್ರ ಕುಳಿತುಕೊಳ್ಳಲು ಅಥವಾ ನಿಂತುಕೊಳ್ಳಲು ಸ್ಥಳಾವಕಾಶವಿರುತ್ತದೆ. ಇಲ್ಲಿ ಕಾಲಹರಣ ಮಾಡುವ ಮತ್ತು ಹರಟೆ ಹೊಡೆಯುವ ವ್ಯಕ್ತಿಗಳಿಗೆ ಅವಕಾಶವಿಲ್ಲ. ಬೆಂಕಿ ಹಾಗು ಕಾದ ಕಬ್ಬಿಣದ ಜೊತೆ ಕಾರ್ಯನಿರ್ವಹಿಸುವಾಗ ಕಮ್ಮಾರ ಬಹಳ ಎಚ್ಚರಿಕೆಯಿಂದಿರಬೇಕಾಗುತ್ತದೆ. ದೃಷ್ಟಿ ಅಥವಾ ಚಿತ್ತ ಬೇರೆಕಡೆ ತಿರುಗಿದರೆ ಅಪಾಯ ಕಟ್ಟಿಟ್ಟದ್ದೆ. ಈ ಕಾರಣಕ್ಕೆ ಕಮ್ಮಾರರು ವೃತ್ತಿಯಲ್ಲಿ ನಿರತರಾದಾಗ ಹೆಚ್ಚಾಗಿ ಮಾತನಾಡುವುದು ಕಡಿಮೆ.

ಈ Work Shop ದ ಒಳಗೆ ತಿದಿ, ಕುಲುಮೆ, ನೀರಿಗಾಗಿ ಚಿಕ್ಕದಾದ ದೋಣಿ, ಕಬ್ಬಿಣದ ಅಥವಾ ಕಟ್ಟಿಗೆಯ ಕಪಾಟ ಇರುತ್ತದೆ. ಕೆಲ ಕಮ್ಮಾರರು ಕೆಲಸದ ಮನೆಯ ಗೋಡೆಗಳಲ್ಲಿಯೇ ಕಪಾಟ ಮಾಡಿಕೊಂಡಿದ್ದಾರೆ. ಈ ಕಪಾಟುಗಳಲ್ಲಿ ತಮ್ಮ ವೃತ್ತಿಗೆ ಬೇಕಾದ ಇಕ್ಕಳ, ಅರ, ಚಾನ, ಸುತ್ತಿಗೆ, ಗನ್ನು ಮುಂತಾದ ವಸ್ತುಗಳನ್ನು ಇಟ್ಟುಕೊಂಡಿರುತ್ತಾರೆ.

ನಾನು ಕ್ಷೇತ್ರಕಾರ್ಯ ಮಾಡಿದ ಕಮ್ಮಾರರ ಕುಟುಂಬಗಳು ಆರ್ಥಿಕವಾಗಿ ಬಳಲುತ್ತಿರುವ ಕುಟುಂಬಗಳೇ ಆಗಿವೆ. ಹೀಗಾಗಿ ತಮ್ಮ ಮನೆಗಳನ್ನು ಅತ್ಯಂತ ಸರಳವಾಗಿ ರಚಿಸಿಕೊಂಡಿದ್ದನ್ನು ಕಾಣುತ್ತೇವೆ. ಇವರು ವಾಸಿಸುತ್ತಿರುವ ಮನೆಗಳಲ್ಲಿ ಸಾಮಾನ್ಯವಾಗಿ ಅಡುಗೆ ಮನೆ ಮತ್ತು ದೇವರ ಮನೆ ಬೇರೆ ಬೇರೆಯಾಗಿರುತ್ತವೆ. ಉಳಿದಂತೆ ಸ್ನಾನದ ಮನೆ, ಮನೆಯ ಹಿಂದೆ ಇರುತ್ತದೆ. ಕೆಲವರು ಅಡುಗೆ ಮನೆಯಲ್ಲಿಯೇ ಚಿಕ್ಕದಾದ ಬಚ್ಚಲು ಮನೆ ಮಾಡಿಕೊಂಡಿದ್ದಾರೆ. ಮಲಗುವುದಕ್ಕಾಗಿಯೇ ವಿಶೇಷ ಕೊಠಡಿಗಳನ್ನು ನಿರ್ಮಿಸಿಕೊಂಡಿರುವ ಕುಟುಂಬಗಳಿರುವುದು ಅಪರೂಪ. ಶೌಚಾಲಯಕ್ಕೆ ಇವರು ಊರ ಹೊರಗೆ ಹೋಗುತ್ತಾರೆ. ಬೆರಳೆಣಿಕೆಯ ಜನ ಮಾತ್ರ ಅದರಲ್ಲೂ ಮಂಗಳೂರು ಮತ್ತು ಉಡುಪಿ ಜಿಲ್ಲೆಯ ಕಮ್ಮಾರರು ಶೌಚಾಲಯಗಳನ್ನು ಕಟ್ಟಿಸಿಕೊಂಡಿದ್ದಾರೆ.

**೨.೮ ಜನಸಂಖ್ಯೆ:**

ಭಾರತ ಸರ್ಕಾರವು ಕರ್ನಾಟಕ ರಾಜ್ಯದ ಮಂಗಳೂರು, ಉಡುಪಿ ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನಲ್ಲಿ ವಾಸಿಸುತ್ತಿರುವ ಕಮ್ಮಾರ ಸಮುದಾಯದ ಕುಟುಂಬಗಳನ್ನು ಮಾತ್ರ ೧೯೫೬ ರಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿದ್ದಾರೆ. ಇದರ ಪ್ರಾದೇಶಿಕ ಮಿತಿಯನ್ನು ಇನ್ನು ಸಡಿಲಿಸಿಲ್ಲ. ಈ ಕಮ್ಮಾರ ಸಮುದಾಯ ೧೯೫೦ರಲ್ಲಿಯೇ ಮದ್ರಾಸ್ ರಾಜ್ಯದಲ್ಲಿ (ತಮಿಳುನಾಡಿನಲ್ಲಿ) ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿದೆ. ಆದರೆ ಈ ಸಮುದಾಯದ ಬಗ್ಗೆ ಇದುವರೆಗೆ ನಿಖರವಾದ ಮಾಹಿತಿಗಳು ಸಿಕ್ಕಿಲ್ಲ.



ನಾನು ಕಮ್ಮಾರರ ಬದುಕಿನ ಸ್ಥಿತ್ಯಂತರಗಳು ಈ ಅಧ್ಯಯನಕ್ಕಾಗಿ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಕುಂದಲೂರು, ಶಿರೂರು, ಕಮಲಶೈಲಿ ಬಸರೂರು, ಬೈಂದೂರು, ಪಡುಬಿದ್ರೆ, ಹಬ್ರಿ, ಸಾಣೂರು, ನಾಯಕವಾಡಿ, ತ್ರಾಸಿ, ಬೈಂದೂರು, ಪಡುವರಿ, ಹೆಮ್ಮಂಜೆ, ನಡಾ, ಗ್ರಡ್ಡಯ್ಯನ ಗಾದಿ, ಶಿವನಾಗರ, ಸೇನಾಪುರ, ಕಂದಲೂರು, ಬಸರೂರು, ನೆಲ್ಲಿಕಟ್ಟೆ, ಚಿತ್ರಮಕ್ಕಿ, ಶಂಕರ ನಾರಾಯಣ, ಆನೆಸಾಲಿ, ಹಲಡಿ, ಬೆನಗೇರೆ, ಗುಜ್ಜಾಡಿ, ನಾಡುಬೆಟ್ಟು, ನಾಚಿಯ್ಯವಾಡಿ, ವಡೇರಹೊಬ್ಳಿ, ಸಲ್ವಾಡಿ, ಹುಣುಸೇಮಕ್ಕಿ, ಬಿಡಲಕಟ್ಟೆ, ನೆರಂಬಳ್ಳಿ, ಕೋನಿ, ಕೋಟೇಶ್ವರ, ನಾಗೂರು, ಕಿರು ಮಂಜೇಶ್ವರ, ಹೋಲಿಕ್ರಾಸ್, ತ್ರಾಸಿ, ಮರವಂತ, ಸಚಿತಕಟ್ಟೆ, ಆಲೂರು, ಪಡುಕೋಣೆ, ಬಡಕೇರಿ, ಕುಂದ ಬರನಾಡಿ, ಹಕ್ಲಾಡಿ, ಹಲ್ಲೂರು, ನೀರ‍್ಕುರೆ, ಗಂಗೆಬಯಲು, ಆರ್ತೆ, ಗ್ರಾಸಿ, ಗಿಲ್ಲೂರು, ಬಿಜಾಡಿ, ಕೋಟೇಶ್ವರ, ಗೋಪಾಡಿ, ಗಿಕ್ಕಟ್ಟೆ, ಸಂತೆಕಟ್ಟೆ, ಗುಡ್ಡಯಂಗಡಿ, ಬಿದ್ಕಲ್ ಕಟ್ಟೆ,

ನೇರಂಬಳ್ಳಿ, ಕೋಣೆ, ಗೋಪಾಡಿ, ಈ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ಕಮ್ಮಾರರ ೭೭ ಕುಟುಂಬಗಳು ಕಂಡುಬಂದಿವೆ.

ಉಡುಪಿ ತಾಲೂಕಿನ ಮಾರಪಲ್ಲಿ, ಯರಮಲ, ಬಡಾ, ಹುಳುವಳ್ಳಿ, ಕಜೆಗಿ, ಕಳ್ತೂರು, ಸಂತೆಕಟ್ಟೆ, ಬಾರ್ಕೂರು, ಅದಮಾರು, ಹೆಜಮಾಡಿ, ಮಾರ್ಪಳ್ಳು, ಮತ್ತು ಎರ್ಮಾಳು ಈ ಊರುಗಳಲ್ಲಿ ಒಟ್ಟು ೧೫ ಕುಟುಂಬಗಳಿವೆ.

ಕಾರ್ಕಳ ತಾಲೂಕಿನ ಮುದಾರ, ನಲ್ಲೂರು, ಆತುರು, ಬೊಬ್ಬಲಾ, ಮಿಚಿಯಾರ್, ಹೆಬ್ರಿ, ರಾಗಿಹಾಕ್ಲು, ಮುದ್ರಾಡಿ, ಮನಿಯಾಲ, ಬೆಲ್ಲಗುಡ್ಡಿ, ಈಡ್ತು ನಕ್ರೆ, ಹೊಕ್ಕಲು ಮನೆ, ಮುಳ್ಳುಗಡ್ಡೆ, ಮಾವಿನ ಕಟ್ಟೆ, ಶಿವಪುರ, ಎಲ್ಲಾರೆ, ಹೊನ್ನೆಕಟ್ಟೆ, ಬಿಜಗೋಳಿ, ಮತ್ತು ಪಲ್ಲಿ ಈ ಗ್ರಾಮಗಳಲ್ಲಿ ೨೯ ಕುಟುಂಬಗಳಿವೆ.

ಬೆಳ್ತಂಗಡಿ ತಾಲೂಕಿನ ನಿಡಿಗಲ್ಲು, ಮುಂಡಾಜೆ, ಉಜರೆಯಲ್ಲಿ ೫ ಕುಟುಂಬಗಳು, ಸುಳ್ಯ ತಾಲೂಕಿನ ಸುಬ್ರಮಣ್ಯ ಜಲಸೂರು, ಕುಕ್ಕಂದೂರು ಮತ್ತು ದೇವರಗದ್ದೆಯಲ್ಲಿ, ಒಟ್ಟು ೯ ಕುಟುಂಬಗಳು, ಪುತ್ತೂರು ತಾಲೂಕಿನ ಕೊಕ್ಕಡ, ಕುಂಟ್ಯಾನ, ಈಶ್ವರ ಮಂಗಳ, ಕೆಮ್ಮಾಯಿ, ಸೇಡಿಯಾಪು ಮತ್ತು ನಿಡ್ಯದಲ್ಲಿ ೧೩ ಕುಟುಂಬಗಳು, ಮಂಗಳೂರು ತಾಲೂಕಿನ ಕೋಟೆ, ಸಂಪಿಗೆ, ಸೂರಿಂಜೆ, ತೆಕ್ಕೊಟ್ಟು ಮತ್ತು ಕಾರ್ನಾಡು ಈ ಪ್ರದೇಶದಲ್ಲಿ ಕಮ್ಮಾರರ ೭ ಕುಟುಂಬಗಳು ಕಂಡು ಬಂದಿವೆ.

ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಕೊಳ್ಳೆಗಾಲ, ಬಾಪೂಜಿನಗರ, ಹಾನಾಪುರ, ಕಣ್ಣೂರು, ದೊಡ್ಡಹಿಂದವಾಡಿ, ಕಾಮಗೆರೆ, ಹನೂರು, ನರಸೀಪುರ, ಸತ್ಯಗಾಲ, ಪಾಳ್ಯ, ಹುಗ್ನ, ಅಣಗಳ್ಳಿ, ಚಿಕ್ಕಲೂರು, ಅಣಗಳ್ಳಿ, ಪ್ರಕಾಶನ ಪಾಳ್ಯ, ಪಾಳ್ಯ, ತೆಳ್ಳನೂರು, ಭೈರನಹಳ್ಳಿ, ಕೊತ್ತನಹಳ್ಳಿ, ತಿಮ್ಮರಜ್ಜಿಪುರ, ಸುರಪುರ, ಹಿಂದವಾಡಿ, ಕುತ್ತನೂರು, ಲೊಕ್ಕನಹಳ್ಳಿ, ಆರ್.ಎಸ್. ದೊಡ್ಡಿ, ಬೆಲ್ತೂರು, ಚೆನ್ನಲಿಂಗನಹಳ್ಳಿ ಮತ್ತು ಗೆಜ್ಜಲನತ್ತಿಯಲ್ಲಿ ಕಮ್ಮಾರ ಸಮುದಾಯದ ೪೭ ಕುಟುಂಬಗಳು ವಾಸಿಸುತ್ತಿರುವುದು ಕಂಡು ಬರುತ್ತವೆ.

ಭಾರತ ಸರ್ಕಾರದ ಜನಸಂಖ್ಯೆಯ ಅಂಕಿಸಂಖ್ಯೆಗಳ ಪ್ರಕಾರ ೧೯೭೧ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ಕಮ್ಮಾರರ ಜನಸಂಖ್ಯೆ ೧೮೫ ಎಂದು ದಾಖಲೆಯಾಗಿದೆ. ೧೯೮೧ರ ಜನಗಣತಿಯ ಪ್ರಕಾರ ಕಮ್ಮಾರ ಸಮುದಾಯದ ಜನಸಂಖ್ಯೆ ೮೪೪ ಎಂದು ತಿಳಿಯುತ್ತದೆ. ೧೯೯೧ ರ ಜನಗಣತಿಯ ಪ್ರಕಾರ ೬೨೯ ಇದ್ದು ಇದರಲ್ಲಿ ೩೨೧ ಪುರುಷರು ೩೦೮ ಮಹಿಳೆಯರು ಇರುವ ಬಗ್ಗೆ ದಾಖಲೆ ಇದೆ. ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೪೪೩ ಜನಸಂಖ್ಯೆ ಇದ್ದು ೨೨೦ ಪುರುಷರು ೨೨೩ ಮಹಿಳೆಯರಿದ್ದದ್ದು ಕಂಡುಬರುತ್ತದೆ. ನಗರ ಪ್ರದೇಶದಲ್ಲಿ ಒಟ್ಟು ೧೮೬ ಜನಸಂಖ್ಯೆ ಕಂಡು ಬಂದಿದ್ದು ಅದರಲ್ಲಿ ೧೦೧ ಪುರುಷರು ಹಾಗೂ ೮೫ ಮಹಿಳೆಯರಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ.

೨೦೦೧ರ ಜನಗಣತಿಯ ಮಾಹಿತಿಯ ಪ್ರಕಾರ ಒಟ್ಟು ಕಮ್ಮಾರರ ಜನಸಂಖ್ಯೆ ೩೮ ಎಂದು ದಾಖಲಾಗಿದೆ. ಇದರಲ್ಲಿ ೨೦ ಪುರುಷರು ೧೮ ಮಹಿಳೆಯರೆಂದು ತಿಳಿಯುತ್ತದೆ. ಗ್ರಾಮೀಣ

ಪ್ರದೇಶದಲ್ಲಿ ಒಟ್ಟು ೩೧ ಜನಸಂಖ್ಯೆ ಇದ್ದು ಇದರಲ್ಲಿ ೧೩ ಪುರುಷರು ಹಾಗು ೧೮ ಮಹಿಳೆಯರೆಂದು ದಾಖಲೆಗಳು ಹೇಳುತ್ತವೆ.

ನಾನು ಕ್ಷೇತ್ರಕಾರ್ಯ ಮಾಡುವಾಗ ಕಮ್ಮಾರರಲ್ಲಿ ಕಮ್ಮಾರಿಕೆ ಮಾಡುತ್ತಿರುವ ಕುಟುಂಬಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯ ಮಾಡಿದ್ದೇನೆ. ನಾನು ಕ್ಷೇತ್ರಕಾರ್ಯ ಮಾಡಿದ ಕೊಳ್ಳೆಗಾಲ ತಾಲೂಕಿನ ೪೭ ಕುಟುಂಬಗಳಲ್ಲಿ ಒಟ್ಟು ೧೯೭ ಜನಸಂಖ್ಯೆ ಇರುವುದು ಗೋಚರಿಸುತ್ತದೆ. ಇದರಲ್ಲಿ ೧೦೩ ಗಂಡಸರು ಹಾಗೂ ೯೪ ಹೆಂಗಸರು ಇರುವುದು ಕಂಡುಬರುತ್ತದೆ. ಉಡುಪಿ, ಮಂಗಳೂರು ಜಿಲ್ಲೆಯಲ್ಲಿರುವ ಮತ್ತು ನಾನು ಕ್ಷೇತ್ರಕಾರ್ಯ ಮಾಡಿದ ಒಟ್ಟು ೧೫೫ ಕುಟುಂಬಗಳಲ್ಲಿಯ ಒಟ್ಟು ಜನಸಂಖ್ಯೆ ೬೭೫ ಇದ್ದು ಇದರಲ್ಲಿ ೩೬೦ ಗಂಡಸರು ಹಾಗೂ ೨೯೫ ಹೆಂಗಸರು ಕಂಡುಬಂದಿದ್ದಾರೆ.

ಉಡುಪಿ ಮತ್ತು ಮಂಗಳೂರು ಜಿಲ್ಲೆಯಲ್ಲಿರುವ ಕಮ್ಮಾರ ಸಮುದಾಯದವರು ಜನಗಣತಿಯ ಸಂದರ್ಭದಲ್ಲಿ ಕಮ್ಮಾರ ಎಂದು ನಮೂದಿಸದೆ ವಿಶ್ವಕರ್ಮ, ಪಂಚಾಳ, ವಿಶ್ವಬ್ರಾಹ್ಮಣ ಮುಂತಾದ ಹೆಸರುಗಳಿಂದ ದಾಖಲಿಸುತ್ತಿದ್ದಾರೆ. ಈ ಪ್ರದೇಶದಲ್ಲಿಯ ಕಮ್ಮಾರರ ಸಮುದಾಯವನ್ನು ಪರಿಶಿಷ್ಟ ಪಂಗಡದಲ್ಲಿ ಗುರುತಿಸಿದ್ದಾರೆ ಎಂಬುದು ಅನೇಕರಿಗೆ ಈ ವಿಷಯ ತಿಳಿದಿಲ್ಲ. ತಿಳಿದವರು ಇಂದು ಕಮ್ಮಾರ ಎಂದು ದಾಖಲಿಸುತ್ತಿಲ್ಲ. ಕಮ್ಮಾರ ಎಂದು ದಾಖಲಿಸಿದರೆ ನಮ್ಮ ಸಾಮಾಜಿಕ ಜೀವನದ ಮೇಲೆ ದುಷ್ಪರಿಣಾಮ ಬೀರುತ್ತದೆ ಎಂಬ ಅಂಜಿಕೆಯಿಂದ ದಾಖಲಿಸುತ್ತಿಲ್ಲ. ಈ ಪ್ರದೇಶದ ವಿಶ್ವಕರ್ಮರು ವೈದಿಕ ಧರ್ಮದ ಪ್ರಭಾವಕ್ಕೆ ಒಳಗಾಗುತ್ತಿದ್ದುದರಿಂದ ಅವರನ್ನು ವೈದಿಕ ಧರ್ಮದ ತೆಕ್ಕೆಗೆ ಎಳೆದುಕೊಳ್ಳಲಾಗುತ್ತಿದೆ. ಒಂದು ಕಾಲದಲ್ಲಿ ಚಿನ್ನ, ಬೆಳ್ಳಿ, ಮೂರ್ತಿಕೆತ್ತನೆ ಮಾಡುತ್ತಿದ್ದ ವರ್ಗದವರು ಕಮ್ಮಾರಿಕೆ ವೃತ್ತಿ ಮಾಡುತ್ತಿರುವವರನ್ನು ಕಂಡರೆ ದೂಷಿಸುತ್ತಿದ್ದರು. ಅವರ ಜೊತೆಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿರಲಿಲ್ಲ. ಇದಕ್ಕೆ ಕಾರಣ ಕಮ್ಮಾರಿಕೆ ವೃತ್ತಿ. ಕಮ್ಮಾರರು ಬೆಳಗ್ಗೆ ಎದ್ದ ತಕ್ಷಣ ಕೃಷಿಕರಿಗೆ ಕೃಷಿಗೆ ಬೇಕಾಗುವ ವಸ್ತುಗಳನ್ನು ಸಿದ್ಧಪಡಿಸಿಕೊಡುವುದಕ್ಕೋಸ್ಕರ ಸ್ನಾನ, ಜಪ, ತಪ, ಸಂಧ್ಯಾವಂದನೆ ಮುಂತಾದ ವೈದಿಕ ಧರ್ಮದ ಆಚರಣೆಗಳನ್ನು ಅನುಸರಿಸದೆ ಕುಲುಮೆ, ತಿದಿ ಹಾಗೂ ಅಡಿಗಲ್ಲನ್ನು ಪೂಜಿಸಿ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಿದ್ದರು ಮತ್ತು ಕಠಿಣವಾದ ಮತ್ತು ಹೆಚ್ಚು ಶ್ರಮವಹಿಸಿ ಮಾಡುವ ಈ ಕೆಲಸದ ಜೊತೆಗೆ ಕಮ್ಮಾರರ ಮಾತು ಕಥೆಗಳು, ಸ್ವಭಾವ ಲಕ್ಷಣಗಳೂ ಸಹ ಒರಟಾಗಿರುತ್ತಿದ್ದವು. ದಿನಕ್ಕೆ ೧೦ ರಿಂದ ೧೫ ಗಂಟೆಗಳವರೆಗೆ ಬೆಂಕಿಯ ಮುಂದೆ ಕುಳಿತು ಶ್ರಮವಹಿಸಿ ಕಾರ್ಯಮಾಡುತ್ತಿದ್ದುದರಿಂದ ಇವರ ಶಾರೀರಿಕ ಲಕ್ಷಣದಲ್ಲಿ ತೇಜಸ್ಸು, ಶಾಂತಿ, ಕಾಂತಿ ಅಷ್ಟಾಗಿ ಕಂಡು ಬರುತ್ತಿರಲಿಲ್ಲಿ. ನೋಡಲು ಕಪ್ಪಾಗಿ ಒರಟು ಒರಟಾಗಿ ವರ್ತಿಸುತ್ತಿದ್ದರು. ಈ ಕಾರಣದಿಂದ ಅವರನ್ನು ನಾವು ಸ್ವಲ್ಪಪ್ರಮಾಣದಲ್ಲಿ ದೂರವಿಟ್ಟಿದ್ದೆವು. ಇತ್ತಿತ್ತಲಾಗಿ ಕುಲುಮೆ ಕೆಲಸಗಳು ಕಡಿಮೆಯಾಗಿ ಅವರು ಸಹ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ವೈದಿಕ ಧರ್ಮದ ಆಚರಣೆ, ಪರಂಪರೆ, ಸಂಪ್ರದಾಯಗಳನ್ನು ಅನುಸರಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ

ಐದು ವೃತ್ತಿಗಳನ್ನು ಅನುಸರಿಸುವ ವಿಶ್ವಕರ್ಮರೆಲ್ಲರೂ ನಾವು ಒಂದೇ ಎಂಬ ಭಾವನೆ ಎಲ್ಲರಲ್ಲೂ ಮೂಡುತ್ತಿದೆ. ಸಮಾಜದಲ್ಲಿ ನಾವು ಒಳ್ಳೆಯ ಸ್ಥಾನ ಮಾನಗಳನ್ನು ಪಡೆದುಕೊಂಡಿದ್ದೇವೆ. ಹೀಗಾಗಿ ನಾವು ಕಮ್ಮಾರ ಎಂದು ಜನಗಣತಿಯ ದಾಖಲೆಯಲ್ಲಿ ನಮೂದಿಸಿ ಸರ್ಕಾರದ ಸೌಲಭ್ಯವಾದ ಪರಿಶಿಷ್ಟ ಪಂಗಡಗಳಲ್ಲಿ ನಮ್ಮನ್ನು ಗುರುತಿಸಿಕೊಂಡರೆ ನಮ್ಮ ಸಾಮಾಜಿಕ ಸ್ಥಾನ ಮಾನಗಳಿಗೆ ಧಕ್ಕೆ ಬರುತ್ತದೆ. ಈ ಕಾರಣಗಳಿಗಾಗಿ ನಾವು ಈ ಸೌಲಭ್ಯವನ್ನು ಪಡೆಯುತ್ತಿಲ್ಲ ಎಂದು ವಕ್ತ್ರಗಳು ಹೇಳುತ್ತಾರೆ. ಕೆಲವರು ಪರಿಶಿಷ್ಟ ಪಂಗಡದ ಸೌಲಭ್ಯವನ್ನು ಪಡೆದವರು ಸೌಲಭ್ಯವನ್ನು ಪಡೆದ ಬಗ್ಗೆ ಯಾರ ಮುಂದೆ ಹೇಳುತ್ತಿಲ್ಲ. ಕೆಲವರು ಈ ಪ್ರದೇಶಗಳಿಂದ ದೂರ ಹೋಗಿ ಶೈಕ್ಷಣಿಕವಾಗಿ, ಆರ್ಥಿಕವಾಗಿ ಪ್ರಭಲರಾಗಿ ಬದುಕುತ್ತಿದ್ದಾರೆ ಎಂದು ಹೇಳುತ್ತಾರೆ.

ಬೆಳಗ್ಗೆಯಿಂದ ರಾತ್ರಿಯವರೆಗೆ ಕುಲುಮೆಯ ಮುಂದೆ ಕುಳಿತು ನೂರು ರುಪಾಯಿಗಳನ್ನು ಗಳಿಸಲು ಸಾಧ್ಯವಾಗದ ಸ್ಥಿತಿಯಲ್ಲಿರುವ ಕಮ್ಮಾರರು, ಆರ್ಥಿಕವಾಗಿ ಮುಂದುವರೆಯುತ್ತಿರುವ ಇತರೆ ವೃತ್ತಿಯವರ ಮಾತುಗಳಿಗೆ ಅವರ ಪ್ರಭಾವಗಳಿಗೆ ಒಳಗಾಗದೆ ತಿನ್ನಲಿಕ್ಕೆ ಒಂದು ಹೊತ್ತಿನ ಊಟವಿಲ್ಲದಿದ್ದರೂ, ಸಾಮಾಜಿಕ ಸಮಸ್ಯೆಗಳಿಗೆ ಅಂಜಿ ಸರ್ಕಾರದ ಸೌಲಭ್ಯಗಳನ್ನು ಪಡೆಯಲಿಕ್ಕೆ ಅಂಜುತ್ತಿದ್ದಾರೆ ಮತ್ತು ಜನಗಣಿತಿ ಮಕ್ಕಳ ಜಾತಿ ದಾಖಲಾತಿಯಲ್ಲಿ "ಕಮ್ಮಾರ" ಎಂದು ಬರೆಯಿಸಲು ಹಿಂದೇಟು ಹಾಕುತ್ತಿದ್ದಾರೆ. ಈ ಕಾರಣದಿಂದ ಕಮ್ಮಾರರ ಜನಸಂಖ್ಯೆ ಜನಗಣತಿಯಲ್ಲಿ ಕಡಿಮೆಯಾಗುತ್ತಾ ಸಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅನೇಕ ಕಮ್ಮಾರ ಸಮುದಾಯದ ಹಿರಿಯರನ್ನು ಪ್ರಶ್ನಿಸಿದಾಗ ಮನಸ್ಸಿನಲ್ಲಿ ಪರಿಶಿಷ್ಟ ಪಂಗಡದ ಸೌಲಭ್ಯ ಪಡೆಯಬೇಕೆಂಬ ಆಸೆ ಇದ್ದರೂ ಅದನ್ನು ಮುಕ್ತವಾಗಿ ಸಮಾಜದ ಮುಂದೆ ಅವರಿಗೆ ಹೇಳಲಿಕ್ಕೆ ಸಾಧ್ಯವಾಗುತ್ತಿಲ್ಲ

**೨.೯ ವಲಸೆ:**

ಮದ್ರಾಸ್ ಕರ್ನಾಟಕ ಆಡಳಿತಕ್ಕೊಳಪಟ್ಟ ಪ್ರದೇಶವಾದ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಕಮ್ಮಾರರು ನಾವು ಮೂಲತಃ ಇದೇ ಪ್ರದೇಶದಲ್ಲಿ ವಾಸಿಸುತ್ತಾ ಬಂದಿದ್ದೇವೆ ಎಂದು ತಿಳಿಸುತ್ತಾರೆ. ಇಲ್ಲಿ ವಾಸಿಸುತ್ತಿರುವ ಕಮ್ಮಾರ ಸಮುದಾಯದವರು ಸುಮಾರು ಎರಡು ಮೂರು ತಲೆಮಾರುಗಳ ಹಿಂದೆ ಇವರ ಪೂರ್ವಜರು ಕೇರಳ ಹಾಗು ತಮಿಳುನಾಡಿನ ಕೆಲ ಪ್ರದೇಶಗಳಿಂದ ಇಲ್ಲಿಗೆ ಬಂದು ಕಮ್ಮಾರಿಕೆ ವೃತ್ತಿಯನ್ನು ಕೈಗೊಂಡಿದ್ದಾರೆ ಎಂದು ಇತರೆ ಸಮುದಾಯದ ಮಾಹಿತಿದಾರರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲ ವ್ಯಕ್ತಿಗಳು ಇಲ್ಲಿಯ ಕಮ್ಮಾರರಲ್ಲಿ ಕೆಲವರು ವೈನಾಡು ಹಾಗೂ ಕಣ್ಣಾನೂರು ಜಿಲ್ಲೆಗಳಿಂದ ವಲಸೆ ಬಂದಿರುವ ಸಾಧ್ಯತೆಗಳಿವೆ ಎಂದು ಹೇಳುತ್ತಾರೆ. ಕೊಳ್ಳೆಗಾಲ ತಾಲೂಕಿನ ಕಮ್ಮಾರರು ಒಂದು ಘಟ್ಟದಲ್ಲಿ ಅಲೆಮಾರಿಗಳಾಗಿದ್ದರು. ಕೃಷಿ ಚಟುವಟಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದ ಪ್ರದೇಶಗಳಿಗೆ ಹೋಗಿ ಅಲ್ಲಿ ತಮ್ಮ ಕಮ್ಮಾರಿಕೆ ವೃತ್ತಿಯನ್ನು ಮಾಡುತ್ತಿದ್ದರು. ಈ ಪ್ರದೇಶದ ಕಮ್ಮಾರರು ಹತ್ತಾರು ದಶಕಗಳಿಂದ ಕೊಳ್ಳೆಗಾಲದ

ಗ್ರಾಮೀಣ ಪ್ರದೇಶಗಳಲ್ಲಿ ನೆಲೆಕಂಡುಕೊಂಡಿದ್ದಾರೆ. ಇವರ ಸಂಬಂಧಗಳು ತಮಿಳುನಾಡಿನಲ್ಲಿರುವುದು ಕೇಳಿ ಬರುತ್ತದೆ.

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿರುವ ಕಮ್ಮಾರರು ಮುಲತಃ ಕರ್ನಾಟಕದವರು ಎಂಬುದಕ್ಕೆ ಅನೇಕ ಪುರಾವೆಗಳನ್ನು ನೀಡುತ್ತಾರೆ. "ನಾವು ಈ ಪ್ರದೇಶದ ಮೂಲ ನಿವಾಸಿಗಳು. ನಮ್ಮ ಪೂರ್ವಜರು ಕುದುರೆಮುಖದಿಂದ ಕಬ್ಬಿಣದ ಅದಿರನ್ನು ಸಂಗ್ರಹಿಸಿ ತಂದು ಅದನ್ನು ಸಂಸ್ಕರಿಸಿ ಆ ಕಬ್ಬಿಣದಿಂದ ಕೃಷಿ ಉಪಕರಣಗಳನ್ನು, ಮನೆ ಉಪಯೋಗಿ ವಸ್ತುಗಳನ್ನು, ಆಯುಧಗಳನ್ನು ಸಿದ್ಧಪಡಿಸುವಲ್ಲಿ ಸಿದ್ಧಹಸ್ತರಾಗಿದ್ದರು. ಒಂದು ಕಾಲಕ್ಕೆ ಕೆಲವರು ಕೋವಿಗಳನ್ನು ತಯಾರಿಸುವ ಕಲೆಯನ್ನೂ ಬಲ್ಲವರಾಗಿದ್ದರು. ಇಂದು ಕೋವಿಯನ್ನು ತಯಾರಿಸುವವರು ಕಂಡು ಬರುವುದಿಲ್ಲ" ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಅನೇಕ ಕಮ್ಮಾರರ ಕುಟುಂಬಗಳು ಈ ಜಿಲ್ಲೆಗಳಲ್ಲಿಯೇ ಅಲೆಮಾರಿಗಳಾಗಿ ಬದುಕುತ್ತಿದ್ದುದರ ಬಗ್ಗೆ ಮಾಹಿತಿ ದೊರೆಯುತ್ತದೆ. ಯಾವ ಪ್ರದೇಶಗಳಲ್ಲಿ ಕಮ್ಮಾರರ ಕುಟುಂಬಗಳು ಕಂಡುಬರುವುದಿಲ್ಲವೋ ಆ ಪ್ರದೇಶಗಳಿಗೆ ಹೋಗಿ ಅಲ್ಲಿ ಕೃಷಿಗೆ ಬೇಕಾಗುವ ವಸ್ತುಗಳನ್ನು ಸಿದ್ಧಪಡಿಸಿ ಕೊಡುತ್ತಿದ್ದರು. ಇತ್ತಿತ್ತಲಾಗಿ ಈ ಅರೆ ಅಲೆಮಾರಿತನವು ಮಾಯವಾಗಿದೆ. ಆಧುನಿಕ ಉಪಕರಣಗಳ ಹಾವಳಿಯಿಂದ ಗ್ರಾಮೀಣ ಪ್ರದೇಶಗಳಲ್ಲಿ ಕಮ್ಮಾರಿಕೆ ವೃತ್ತಿಯನ್ನು ಮಾಡುತ್ತಿದ್ದ ಅನೇಕ ಕುಟುಂಬಗಳು ಇಂದು ತಾಲೂಕು ಹಾಗೂ ನಗರ ಪ್ರದೇಶಗಳಿಗೆ ಹೋಗುತ್ತಿರುವುದು ಕಂಡುಬರುತ್ತದೆ.

ಕೃಷಿಗೆ ಸಂಬಂಧಿಸಿದ ಎಲ್ಲ ಉಪಕರಣಗಳು ಇಂದು ಕಾರ್ಖಾನೆಗಳಲ್ಲಿ ಸಿದ್ಧವಾಗಿ ನೇರವಾಗಿ ಮಾರುಕಟ್ಟೆಗಳಿಗೆ ಬರುತ್ತಿವೆ. ಕೃಷಿಕರು ಕಮ್ಮಾರರ ಹತ್ತಿರ ಹೋಗಿ ಗಂಟೆಗಟ್ಟಲೆ ಕಾಯ್ದು ಅವರಿಗೆ ಬೇಕಾದ ವಸ್ತುಗಳನ್ನು ಸಿದ್ಧಪಡಿಸಿಕೊಳ್ಳಲು ಆಸಕ್ತಿ ತೋರುತ್ತಿಲ್ಲ. ಸಣ್ಣ ಪುಟ್ಟ ಕೆಲಸಗಳಿಗೆ ಮಾತ್ರ ಕಮ್ಮಾರರ ಹತ್ತಿರ ಹೋಗುತ್ತಾರೆ. ಉಳಿದಂತೆ ಕೃಷಿ ಎಲ್ಲ ಆಧುನಿಕ ಉಪಕರಣಗಳು ವ್ಯಾಪಾರಿ ಮಳಿಗೆಗಳಲ್ಲಿ ಸಿಗುತ್ತವೆ. ಈ ಎಲ್ಲ ಕಾರಣಗಳಿಂದ ಕಮ್ಮಾರಿಕೆ ವೃತ್ತಿಗೆ ಬೆಲೆ ಇಲ್ಲದಂತಾಗಿದೆ. ಈ ಎಲ್ಲ ಸಮಸ್ಯೆಗಳಿಂದ ಕಮ್ಮಾರರ ಅನೇಕ ಕುಟುಂಬಗಳು ನಗರದತ್ತ ವಲಸೆ ಹೋಗುತ್ತಿವೆ.

ಕೃಷಿ ಚಟುವಟಿಕೆಗಳು ಸಮೃದ್ಧವಾಗಿದ್ದು ಮತ್ತು ಅಲ್ಲಿಯೇ ಬದುಕಲು ಬೇಕಾದ ಆದಾಯ ಸಿಗುತ್ತಿದ್ದರೆ ಮಾತ್ರ ಕಮ್ಮಾರರ ಕುಟುಂಬಗಳು ಆ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಇಂದು ಕೃಷಿ ಚಟುವಟಿಕೆಗಳು ವರ್ಷವಿಡಿ ಇರದೆ ಇದ್ದುದ್ದರಿಂದ ಕಮ್ಮಾರಿಕೆ ವೃತ್ತಿಯನ್ನು ಅವಲಂಬಿಸಿಕೊಂಡು ಬದುಕುವುದು ಕಷ್ಟವಾಗುತ್ತದೆ ಎಂಬ ಕಾರಣದಿಂದ ಅನೇಕ ಕಮ್ಮಾರರ ಯುವಕರು ಬಾರ್ ಬೆಂಡಿಗ್ ಹಾಗೂ ಇತರೆ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸುವುದಕ್ಕಾಗಿ ನಗರ ಪ್ರದೇಶಗಳಿಗೆ ಹೋಗುತ್ತಿದ್ದಾರೆ. ಸಾಮಾನ್ಯವಾಗಿ ಕಮ್ಮಾರರು ಸ್ವಂತ ಭೂಮಿಯನ್ನು ಹೊಂದಿರುವವರಲ್ಲ. ಭೂಮಿ ಇಲ್ಲದೆ ಇರುವ ಕಮ್ಮಾರರ ಕುಟುಂಬಗಳು ನಗರಗಳಿಗೆ ವಲಸೆ ಹೋಗಿ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಕಮ್ಮಾರರಲ್ಲಿ

ಕಬ್ಬಿಣದಿಂದ ವಿವಿಧ ವಸ್ತುಗಳನ್ನು ಸಿದ್ಧಪಡಿಸುವ ಶಕ್ತಿ ಇದೆ. ಆದರೆ ಅವುಗಳಿಗೆ ಬೇಡಿಕೆ ಇಲ್ಲ. ಈ ಕಾರಣಗಳಿಂದ ಕಮ್ಮಾರಿಕೆ ಅಳಿವಿನ ಅಂಚಿನಲ್ಲಿ ಉಳಿದುಕೊಂಡಿದೆ ಎಂದು ಹೇಳಿದರೆ ತಪ್ಪಾಗಲಾರದು.

**೨.೧೦ ಆರಾಧನಾ ಕೇಂದ್ರಗಳು:**

ಕಬ್ಬಿಣದ ಅದಿರನ್ನು ಕಂಡುಹಿಡಿದು ಅದನ್ನು ಸಂಸ್ಕರಿಸಿ ಕ್ರಿ. ಪೂ. ಯುಗದಿಂದ ಈ ವಿಶ್ವಕ್ಕೆ, ಉತ್ಪಾದನಾ ವ್ಯವಸ್ಥೆಗೆ ಕಮ್ಮಾರ ಸಮುದಾಯ ತನ್ನದೆ ಆದ ಕೊಡುಗೆಗಳನ್ನು ನೀಡುತ್ತಲೇ ಬಂದಿದೆ. ಮೂಲ ಮಾನವ ಕೃಷಿಯ ಮೂಲಕ ಆಹಾರ ಉತ್ಪಾದನೆ ಪ್ರಾರಂಭಿಸಿದ ಮೇಲೆ ಅವನ ಉತ್ಪಾದನೆಗೆ ಬೇಕಾಗುವಂತಹ ಅನೇಕ ಉಪಕರಣಗಳನ್ನು ಸೃಷ್ಟಿಸಿಕೊಡುವ ಮೂಲಕ ಕಮ್ಮಾರರು ಅಥವಾ ವಿಶ್ವಕರ್ಮರು ತಮ್ಮ ಅಸ್ಥಿತ್ವಗಳನ್ನು ಗುರುತಿಸಿಕೊಳ್ಳತೊಡಗಿದರು. ಪ್ರಕೃತಿಯ ಕೊಡುಗೆಯಾದ ಬೆಂಕಿಯನ್ನು ಬಳಸಿಕೊಂಡು ಸಾವಿರಾರು ವರ್ಷಗಳವರೆಗೆ ಅನೇಕ ನಿಕ್ಷೇಪಗಳನ್ನು ಪತ್ತೆಹಚ್ಚಿ ಅದನ್ನು ಸಂಸ್ಕರಿಸುವುದರಲ್ಲಿ ಯಶಸ್ವಿಯಾದರು. ಅಂದು ಇವರು ನೀಡಿದ ಕೊಡುಗೆ ಅವಿಸ್ಮರಣೀಯವಾದದ್ದು. ಖನಿಜ ಸಂಪತ್ತುಗಳ ಶೋಧನೆ ಮತ್ತು ಸಂಸ್ಕರಣೆ ಕಂಡುಕೊಂಡ ಮೇಲೆ ಉತ್ಪಾದನಾ ವ್ಯವಸ್ಥೆ ಮತ್ತು ವಿಶ್ವಕರ್ಮರ ಘನತೆ ಗೌರವಗಳು ಅಭಿವೃದ್ಧಿ ಹೊಂದತೊಡಗಿದವು. ಭಾರತದ ಮೂಲ ನಿವಾಸಿಗಳಾದ ಇವರು ಬೆಂಕಿಯ ಉಪಯೋಗ ಕಂಡುಕೊಂಡ ಮೇಲೆ ಇವರ ಜೀವನದ ದಿಕ್ಕು ಬದಲಾಯಿತು. ಹೀಗಾಗಿ ಇವರು ಬೆಂಕಿಯನ್ನು ಶಕ್ತಿ, ಶಕ್ತಿದೇವತೆ ಎಂದು ಆರಾಧಿಸತೊಡಗಿದರು. ಪ್ರಕೃತಿಯನ್ನೇ ಶಕ್ತಿ ಎಂದು ಆರಾಧಿಸುತ್ತಿದ್ದ ಜನತೆಗೆ ಆ ಶಕ್ತಿಯನ್ನು ಮೂರ್ತಿ ರೂಪದಲ್ಲಿ ಸೃಷ್ಟಿಸಿದವರು ಪಂಚಾಳರು.

"ಹಳೇ ಶಿಲಾಯುಗದಿಂದಲೇ ಮಾತೃದೇವತೆಗಳ ಆರಾಧನೆ ಪ್ರಾರಂಭವಾಗಿತ್ತು ಎಂಬುದಕ್ಕೆ ಅನೇಕ ಆಧಾರಗಳನ್ನು ವಿದ್ವಾಂಸರು ಪ್ರಕಟಿಸಿದ್ದಾರೆ. ಮಾತೃ ದೇವತಾ ಆರಾಧನೆ ಬೃಹತ್ ಶಿಲಾಯುಗದಲ್ಲಿ ವಿಕಾಸ ಹೊಂದುತ್ತಾ ನಡೆಯಿತು." ಸಿಂಧೂ ಸಂಸ್ಕೃತಿಯಲ್ಲಿ ಮಾತೃ ದೇವತೆಯನ್ನು ಈ ಭೂಮಿಯ ತಾಯಿಯೆಂದು, ಮಾನವರ ಮಾತೆಯೆಂದು, ದೇವತೆಗಳ ತಾಯಿಯೆಂದು, ಅರಣ್ಯ, ಪ್ರಾಣಿ, ಧಾನ್ಯ ಪಕ್ಷಿ, ಇವುಗಳ ಮಾತೃವೆಂದು ಪೂಜಿಸಲಾಗಿದೆ. ಸ್ತನ, ಗರ್ಭ, ಯೋನಿ ಇವು ಮಾತೃದೇವತೆಯ ಸಂಕೇತಗಳೆಂದು ಅವರು ಭಾವಿಸಿದ್ದರು. ಈ ಮೂರು ಅಂಗಗಳು ಮೂರು ಮುಖ್ಯ ಚಟುವಟಿಕೆಗಳನ್ನು ಮಾಡುತ್ತವೆ. ಅವು ಪಾಲನೆ, ಧಾರಣೆ, ಮತ್ತು ಸೃಷ್ಟಿ."[೧೪] "ಮಾತೃದೇವತೆ ಆರಾಧನೆ ವಿಶ್ವದ ಅನೇಕ ಭಾಗಗಳಲ್ಲಿ ಆಚರಣೆಯಲ್ಲಿದ್ದ ಬಗೆಗೆ ಅನೇಕ ಉಲ್ಲೇಖಗಳನ್ನು ಸಂಶೋಧಕರು ವ್ಯಕ್ತಪಡಿಸಿದ್ದಾರೆ ಮತ್ತು ಪ್ರಪಂಚದಲ್ಲಿರುವ ಎಲ್ಲ ದೇವತೆಗಳು ಈ ದೇವತೆಯಿಂದ ಸೃಷ್ಟಿಯಾದವು ಎಂಬ ನಂಬಿಕೆಗಳು ಬೆಳೆಯತೊಡಗಿದವು. "ಮಾತೃ ಪ್ರಧಾನ ವ್ಯವಸ್ಥೆಯ ಅನೇಕ ಸಮಾಜಗಳ ಪಿತೃವಿಲ್ಲದ ನೂರಾರು ದೇವತೆಗಳು ಕಂಡು ಬಂದರೂ ಮಾತೃವಿಲ್ಲದ ಒಂದು ದೇವತೆಯನ್ನು ಕಾಣಲಾರೆವು. ಜೀವಸೃಷ್ಟಿಗೆ ಮಾತೆಯೇ ಕಾರಣ ಎನ್ನುವ ಮನೋಧರ್ಮವೇ ಇದಕ್ಕೆ ಕಾರಣವಿರಬಹುದು. ಹೀಗಾಗಿ ಪ್ರತಿ ಜನಾಂಗಕ್ಕೂ ಒಬ್ಬ ಮಾತೆ ಇರುತ್ತಾಳೆ".[೧೫] ಈ

ಕಮ್ಮಾರ ಸಮುದಾಯದವರಿಗೆ ಅಥವಾ ವಿಶ್ವಕರ್ಮರಿಗೆ ಈ ಮಾತೆಯ ಸ್ಥಾನವನ್ನು ಕಾಳಮ್ಮ ಅಥವಾ ಕಾಳಿಕಾಂಬೆ ಅಲಂಕರಿಸಿದ್ದಾಳೆ.

ಕಮ್ಮಾರರು ದ್ರಾವಿಡ ಸಂಸ್ಕೃತಿಯ ಮೂಲದವರು. ಈ ದ್ರಾವಿಡ ಸಮುದಾಯಕ್ಕೆ ಶಕ್ತಿ ಮತ್ತು ಶಿವ ಇಬ್ಬರು ಆರಾಧ್ಯ ದೈವಗಳು. ಇವರಿಂದಲೇ ಮಾನವ ಸಂತತಿ. ಸೃಷ್ಟಿ, ಸ್ಥಿತಿ ಮತ್ತು ಮೂಲ ಉದ್ಯೋಗಗಳ ಸೃಷ್ಟಿಕರ್ತರು ಎಂಬ ಭಾವನೆ ಇದೆ. ಹೀಗಾಗಿ ಇವರು ಮಾತೃದೇವತೆಯ ಆರಾಧಕರಾಗಿದ್ದಾರೆ. ಇವರು ಆರಾಧಿಸುವ ಮಾತೃದೇವತೆ ಕಾಳಮ್ಮ ಅಥವಾ ಕಾಳಿಕಾಂಬ. ಕಮ್ಮಾರರು ಕಾಳಿಯನ್ನು ಯಾವ ಘಟ್ಟದಿಂದ ತಮ್ಮ ಆರಾಧ್ಯ ದೇವತೆಯಾಗಿ ಪಡೆದುಕೊಂಡರು ಎಂಬುದನ್ನು ವಿಶ್ಲೇಷಿಸುವ ಅಗತ್ಯತೆ ಇದೆ. ಮೂಲ ಮಾನವ ಬೇಟೆ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಕಾಲಿಟ್ಟ ಸಂದರ್ಭದಲ್ಲಿಯೇ ಕಮ್ಮಾರರು ಹಾಗು ಇತರ ಕುಶಲಕರ್ಮಿಗಳು ಹಂತ ಹಂತವಾಗಿ ತಮ್ಮ ಅಸ್ಥಿತ್ವವನ್ನು ಗುರುತಿಸಿಕೊಳ್ಳತೊಡಗಿದರು. ಕೃಷಿಯ ಆರಂಭದ ಘಟ್ಟದಲ್ಲಿ ಕೃಷಿಗೆ ಬೇಕಾದ, ಪ್ರಾಣಿಗಳ ಬೇಟೆಯಾಡಲು, ಮಾನವನ ರಕ್ಷಣೆಗಾಗಿ ಆಯುಧ ಹಾಗೂ ಇತರೆ ಸಲಕರಣೆಗಳನ್ನು ಪೂರೈಸುವ ಕಾರ್ಯಗಳನ್ನು ಇವರು ವಹಿಸಿಕೊಂಡರು ಯಾವಾಗ ತಾಮ್ರ, ಹಿತ್ತಾಳೆ, ಕಬ್ಬಿಣ ಮುಂತಾದ ನಿಕ್ಷೇಪಗಳನ್ನು ಗುರುತಿಸಿ ಅದನ್ನು ಬೆಂಕಿಯ ಮೂಲಕ ಪರಿಷ್ಕರಿಸುವ ತಂತ್ರವನ್ನು ಕಂಡು ಹಿಡಿದರೋ ಅಂದಿನಿಂದ ಬೆಂಕಿಯನೇ ಶಕ್ತಿಯಂದು ಆರಾಧಿಸತೊಡಗಿದರು. ತಾಮ್ರ, ಹಿತ್ತಾಳೆ, ಕಬ್ಬಿಣ, ಬೆಳ್ಳಿ ಮತ್ತು ಬಂಗಾರದ ಅದಿರನ್ನು ಕಂಡು ಹಿಡಿದು ಅದನ್ನು ಬೆಂಕಿಯ ಮೂಲಕ ಶುದ್ಧಗೊಳಿಸುವಲ್ಲಿ ಇವರು ಪಟ್ಟ ಶ್ರಮ ಅಪೂರ್ವವಾದದ್ದು. ಈ ತಂತ್ರವನ್ನು ಕಂಡುಕೊಂಡ ಮೇಲೆ ಅವರ ಜೀವನ ಕ್ರಮಗಳು ಮತ್ತು ಉತ್ಪಾದನೆ ವ್ಯವಸ್ಥೆ ವಿಶಿಷ್ಟ ರೂಪ ಪಡೆದುಕೊಂಡಿತು. ಈ ಸಂಶೋಧನೆಯಿಂದ ಅನೇಕ ವೃತ್ತಿಗಳು ಹುಟ್ಟಿಕೊಂಡವು. ಅವರ ಸಂಶೋಧನೆಯ ಕಾರ್ಯತಂತ್ರ ರೂಪಿಸಲು ಬೆಂಕಿ ಪ್ರಮುಖ ಪಾತ್ರವಹಿಸಿತು. ಬೆಂಕಿ ಅವರ ಅಸ್ಥಿತ್ವ ಗುರುತಿಸಿಕೊಳ್ಳಲು ಕಾರಣವಾದ ಹಿನ್ನೆಲೆಯಲ್ಲಿ ಬೆಂಕಿಯನ್ನು ಆರಾಧಿಸತೊಡಗಿದರು. ಬೆಂಕಿಯಲ್ಲಿ Power ಹೇಗೆ ಅಡಗಿದೆ ಎಂಬುದನ್ನು ತಮ್ಮ ಅನುಭವಗಳಿಂದ ಕಂಡುಕೊಂಡರು.

"ಕಮ್ಮಾರರು ಅಥವಾ ವಿಶ್ವಕರ್ಮರು ಕುಲುಮೆ ಮತ್ತು ಅಗಿಷ್ಟಿಗೆಯನ್ನು "ಕಾಳಮ್ಮ" ಎಂದೇ ಪೂಜಿಸುವುದನ್ನು ಕಾಣುತ್ತೇವೆ. ವಿಶ್ವಕರ್ಮರ ಐದು ವೃತ್ತಿಗಳಿಗೆ ಬೆಂಕಿ ಅತ್ಯವಶ್ಯಕ. ವಿಶ್ವಕರ್ಮರ ವಿಕಾಸದ ಮೊದಲ ಘಟ್ಟದಲ್ಲಿಯೇ ಅವರು ಖನಿಜಗಳನ್ನು ಪತ್ತೆ ಹಚ್ಚಿ ಸಂಸ್ಕರಿಸುವಂತಹ ಸಾಹಸದ ಕೆಲಸದಲ್ಲಿ ಸಫಲರಾದರು. ಇದನ್ನೆ ಅವರ ಬದುಕಿನ ಸಂಕ್ರಮಣ ಕಾಲ ಎಂದು ಹೇಳಬಹುದು. ಈ ಘಟ್ಟಕ್ಕೆ ಅವರು ತಲುಪಬೇಕಾದರೆ ಅದೆಷ್ಟೋ ಕಾಲಮಾನಗಳು ಗತಿಸಿದವು. ತಾಮ್ರ, ಹಿತ್ತಾಳೆ, ಕಬ್ಬಿಣ, ಬೆಳ್ಳಿ, ಬಂಗಾರ ಸೀಸ ಕರಗಿಸುವ ತಂತ್ರಜ್ಞಾನವನ್ನು ಅವರು ಕಂಡುಕೊಂಡು ಅನೇಕ ಆಯುಧ, ಕೃಷಿಗೆ ಬೇಕಾದ ಸಲಕರಣೆ, ಮೂರ್ತಿಶಿಲ್ಪ, ಶಿಲಾಶಿಲ್ಪಗಳ ರಚನೆಯನ್ನು ಅಭಿವೃದ್ಧಿ ಪಡಿಸುತ್ತಲೇ ಬಂದಿದ್ದಾರೆ. ಪರಿಣಾಮವಾಗಿ ಹರಪ್ಪ ಮೆಂಹೆಂಜೊದಾರೊ ಕಾಲಕ್ಕೆ ಅನೇಕ

ವಿಗ್ರಹಗಳು ಕಂಡು ಬಂದವು. ಈ ಬೆಂಕಿಯಲ್ಲಿ ಪ್ರಕೃತಿಯನ್ನು ಕಂಡ ಇವರು ಅದರ Power ಏನೆಂಬುದನ್ನು ಅರ್ಥೈಸಿಕೊಂಡರು. ಪ್ರಕೃತಿಯನ್ನು ಮಾತೃದೇವತೆ ಎಂಬ ಅರ್ಥದಲ್ಲಿ ಪೂಜಿಸುತ್ತಿದ್ದವರು ಪ್ರಕೃತಿಯೇ ನೀಡಿದ ವರದಾನವಾದ ಬೆಂಕಿಯನ್ನು "ಶಕ್ತಿಮಾತೆ, ಶಕ್ತಿದೇವತೆ " ಎಂದು ಆರಾಧಿಸ ತೊಡಗಿದರು."[೧೬] ಬೆಂಕಿ ಶುದ್ಧಗೊಳಿಸುವ, ನಾಶಗೊಳಿಸುವ, ಮತ್ತು ಅತ್ಯಂತ ರೋಷದಿಂದ ಕೂಡಿದ ಗುಣಗಳನ್ನು ಅಂದರೆ, ಸೃಷ್ಟಿಸುವ, ಶುದ್ಧಗೊಳಿಸುವ, ಪ್ರಜ್ವಲಿಸುವ, ಅಭಿವೃದ್ಧಿಪಡಿಸುವ ಮತ್ತು ನಾಶಗೊಳಿಸುವ ಈ ಎಲ್ಲ ಅಂಶಗಳು ಶಕ್ತಿಯಲ್ಲಿ ಅಡಗಿವೆ ಎಂಬುದನ್ನು ಕಂಡುಕೊಂಡು ಆ ಶಕ್ತಿ ದೇವತೆಯನ್ನೇ ಕಾಳಿಮಾತೆ ಎಂದು ಹೆಸರಿಸಿದರು. ಈ ಕಾಳಿಯ ಗರ್ಭದಲ್ಲಿ ವಿಶ್ವವೇ ಅಡಗಿದೆ. ಅವಳ ಆದೇಶದಿಂದಲೇ ವಿಶ್ವ ಚಲಿಸುತ್ತದೆ. ಅಂದರೆ "ಕಾಲಿಯಿಂದಲೇ ಕಾಲ ಚಲಿಸುತ್ತದೆ ಆ ಕಾಲವೇ ಜಗತ್ತನ್ನು ಆಳುತ್ತದೆ. ಜಗತ್ತು ಕಾಲದ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ ಎಂಬ ಪರಿಕಲ್ಪನೆಗಳಿವೆ. ಈ ಶಕ್ತಿ ಮಾತೆ ತನ್ನಲ್ಲಿರುವ ಆಧಿಶಕ್ತಿ, ಪರಾಶಕ್ತಿ, ಇಚ್ಚಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿಯನ್ನು ವಿಶ್ವಕರ್ಮನ ಮೂಲಕ ಸಾನಗ, ಸನಾತನ, ಅಹಭೂವನ, ಪ್ರತ್ನಸ ಮತ್ತು ಸುವರ್ಣ ಗೋತ್ರದ ಪಂಚಕರ್ಮಿಗಳಾದ ಕಬ್ಬಿಣ, ಕಟ್ಟಿಗೆ , ಲೋಹ, ಶಿಲ್ಪ, ಸುವರ್ಣ ಶಿಲ್ಪಿಗಳಿಗೆ ಕ್ರಮವಾಗಿ ನೀಡಿದಳೆಂದು ತಿಳಿಯುತ್ತದೆ. ಹೀಗಾಗಿ ವಿಶ್ವಕರ್ಮರಲ್ಲಿ ಕಾಳಿಯ ಶಕ್ತಿಯ ರೂಪಗಳಿವೆ. ಈ ಎಲ್ಲ ಕಾರಣಗಳಿಂದ ವಿಶ್ವಕರ್ಮರು ಕಾಳಿಯನ್ನು ಕುಲದೇವತೆಯಾಗಿ ಅರಾಧಿಸುತ್ತಿರುವುದು ಕಂಡು ಬರುತ್ತದೆ.

"ಭಾರತ ದೇಶದಲ್ಲಿ ಬುದ್ಧಿಜೀವಿಗಳು ಎಂದು ಹಣೆಪಟ್ಟಿ ಕಟ್ಟಿಕೊಂಡವರು ಮಾತೃ ದೇವತೆಗಳ ಆರಾಧನೆಯನ್ನು ವಿರೋಧಿಸಿದರು. ಕಾಳಿಎಂದರೆ ಕ್ಷುದ್ರ ದೇವತೆ ಎಂದು ಅವರು ಅರ್ಥೈಸಿಕೊಂಡಂತಿದೆ. ಸ್ವಾಮಿ ವಿವೇಕಾನಂದರುKali is Brahman in action ಎಂದಿದ್ದಾರೆ. ಕಾರ್ಯಶೀಲವಾದ ಬ್ರಹ್ಮಶಕಿಯೇ ಕಾಳಿ. ಲಕ್ಷಿ ಎಂದರೆ ಸೌಂದರ್ಯ ಮತ್ತು ಐಶ್ವರ್ಯಗಳಿರಬಹುದು. ಗೌರಿ ಎಂದರೆ ಶುಭಮಂಗಳೆ ಇರಬಹುದು. ಸರಸ್ವತಿ ಎಂದರೆ ವಿದ್ಯೆ ಜ್ಞಾನಗಳಿರಬಹುದು. ಆದರೆ ಐಶ್ವರ್ಯ ವಿದ್ಯೆ, ಜ್ಞಾನ ಮತ್ತು ಮಂಗಳ ಇವೆಲ್ಲಕ್ಕೂ ಕ್ರಿಯಾಶಕ್ತಿ ಮೂಲ. ಈ ಕ್ರಿಯಾಶಕ್ತಿಯೇ ಕಾಳಿ. ನಮಗೆ  ಅವಳು ತಿಳಿಯದ ತನಕ ಅಗೋಚರೆ. ಕತ್ತಲೆಯಲ್ಲಿರುವಳು. ನಮ್ಮನ್ನು ಕಾಪಾಡಿ ಗೌರವಿಸುವ ಗೌರಿ, ಐಶ್ವರ್ಯ ಸೌಂದರ್ಯಗಳನ್ನು ಕೊಡುವ ಲಕ್ಷ್ಮಿಯಾಗುತ್ತಾಳೆ."[೧೭] "ಕೇವಲ ಕಾಳಿ, ಲಕ್ಷ್ಮಿ, ಸರಸ್ವತಿ ಎಂದರೆ ಶಿವ, ವಿಷ್ಣು, ಬ್ರಹ್ಮನ ಪತ್ನಿಯರು ಎಂಬ ಪರಿಕಲ್ಪನೆ ಇರಬಹುದು. ಆದರೆ ಮಹಾಕಾಳಿ, ಮಾಹಾಲಕ್ಷ್ಮಿ, ಮಹಾ ಸರಸ್ವತಿ ಎಂದರೆ ತ್ರಿಮೂರ್ತಿಗಳ ಸತಿಯರಲ್ಲ. ವಿಶ್ವದ ಸೃಷ್ಟಿಕರ್ತೆಯ ವಿವಿಧ ಶಕ್ತಿ ರೂಪಗಳು ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ. ಈ ಶಕ್ತಿ ದೇವತೆ ಯನ್ನು ಕುರಿತು ಅನೇಕ ಪುರಾಣಗಳಿವೆ. ಮಾರ್ಕಂಡೇಯ ಪುರಾಣದಲ್ಲಿ ಶಕ್ತಿದೇವತೆಯನ್ನು ಕುರಿತು ಶಕ್ತಿ ದೇವತೆಯು ಸೃಷ್ಟಿ ಮಾಡಲು ಮಹಾಕಾಳಿಯಾಗುತ್ತಾಳೆ. ಸಂಪತ್ತು ನೀಡಲು ಮಹಾಲಕ್ಷ್ಮಿಯಾಗುತ್ತಾಳೆ. ಅರಿವು ನೀಡಲು ಮಹಾಸರಸ್ವತಿಯಾಗುತ್ತಾಳೆ. ಸಂಹಾರಕ್ಕಾಗಿ

ಮಹಾಮಾರಿಯಾಗುತ್ತಾಳೆ ಹೀಗೆ ಪರಾಶಕ್ತಿ ಒಂದೇ ಆದರೂ ಅದರಲ್ಲಿ ಹಲವಾರು ಶಕ್ತಿಗಳು ಅಡಕವಾಗಿವೆ. ಒಟ್ಟಿನಲ್ಲಿ ಈ ಶಕ್ತಿದೇವತೆಯು ರುದ್ರ-ಭದ್ರ- ಕಾಳಿ"[೧೮]

ಕಮ್ಮಾರರು ಮಾತೃದೇವೋಪಾಸಕರು. ಪುರಾತನ ಕಾಲದಿಂದಲೂ ಕಾಳಿಕಾಂಬೆ (ಕಾಳಮ್ಮ) ಇವರ ಅಧಿದೇವತೆ ಕರ್ನಾಟಕದ ಪ್ರತಿಯೊಂದು ಗ್ರಾಮ ಪಟ್ಟಣಗಳಲ್ಲಿ ಮಾತೃದೇವತೆಗಳು ಇರುವುದು ಕಂಡುಬರುತ್ತದೆ. ಈ ಮಾತೃದೇವತೆಗಳನ್ನು ವಿಶ್ವಕರ್ಮರೆ ಸಿದ್ಧಪಡಿಸಿ ಪ್ರತಿಷ್ಠಾಪಿಸಿ ಪೂಜೆ ಆರಾಧನೆ ಮಾಡುತ್ತಾ ಬಂದಿರುವುದನ್ನು ಪ್ರಾಚೀನ ಕಾಲದಿಂದಲೂ ಕಾಣುತ್ತೇವೆ. ಅನ್ಯ ಸಮುದಾಯದವರೂ ಈ ಮಾತೃದೇವತೆಗಳಿಗೆ ಪೂಜೆ ಹರಕೆ ಸಲ್ಲಿಸುತ್ತಿರುವುದನ್ನು ಕಾಣುತ್ತೇವೆ. ಕಾಳಮ್ಮ ಶಾಕ್ತ ಮೂಲದ ದೇವತೆಯಾಗಿದ್ದಾಳೆ. ಎಲ್ಲಿಯ ವರೆಗೆ ಸೃಷ್ಟಿ ಕ್ರಿಯೆ ನಿರಂತರವಾಗಿ ಇರುತ್ತದೆಯೋ ಅಲ್ಲಿಯವರೆಗೆ ಮಾತೃಪ್ರಧಾನ ದೇವತೆಗಳ ಆರಾಧನಾ ವ್ಯವಸ್ಥೆ ನಮ್ಮ ಸಂಸ್ಕೃತಿಯಲ್ಲಿ ಇರುತ್ತದೆ. ಇಂದೊಂದು ನಿರಂತರ ಕ್ರಿಯೆ. ಈ ಸೃಷ್ಟಿ ಕ್ರಿಯೆ ನಾಶವಾದರೆ ಮಾತ್ರ ಶಕ್ತಿ ಆರಾಧನೆ ನಾಶವಾಗುತ್ತದೆ.

ಕಮ್ಮಾರರು ಕಾಳಿಯನ್ನು ಮಾತೃದೇವತೆ ಅಥವಾ ಕುಲದ ದೇವತೆಯಾಗಿ ಆರಾಧನೆ ಮಾಡಿದರೆ ವಿಶ್ವಕರ್ಮನನ್ನು ವೃತ್ತಿ ದೈವವಾಗಿ ಆರಾಧನೆ ಮಾಡುತ್ತಾರೆ. ವಿಶ್ವಕರ್ಮನ ಪಂಚ ಮುಖಗಳಿಂದ ಪಂಚಶಿಲ್ಪಿಗಳು ಹುಟ್ಟಿಕೊಂಡರು. ಇವರಿಂದ ಒಂದೊಂದು ವೃತ್ತಿ ಹುಟ್ಟಿಕೊಂಡಿತು. ಅದರಲ್ಲಿ ಲೊಹಶಿಲ್ಪಿ (ಕಮ್ಮಾರ) ಕಾಷ್ಠಶಿಲ್ಪಿ(ಬಡಿಗ) ಕಾಂಸ್ಯ ಕಂಚು (ಕಂಚುಗಾರ) ಶಿಲಾಶಿಲ್ಪಿ, ಸ್ವರ್ಣಶಿಲ್ಪಿ (ಅಕ್ಕಸಾಲಿ) ವೃತ್ತಿಗಳು ಪ್ರಾರಂಭವಾದವು ಎಂದು ಅರ್ಥೈಸಿಕೊಂಡು ವಿಶ್ವಕರ್ಮನನ್ನು ಆರಾಧಿಸುತ್ತಾರೆ.

ಕಮ್ಮಾರರಲ್ಲಿ ಅಂದರೆ ವಿಶ್ವಕರ್ಮರ ಸಮುದಾಯದಲ್ಲಿ ಹುಟ್ಟಿ ಸಾಂಸ್ಕೃತಿಕ ನಾಯಕರಾಗಿ ಬೆಳೆದ ತಿಂಥಣಿ ಮೌನೇಶ್ವರ ನವಲಗುಂದದ ನಾಗಲಿಂಗ, ಸಿದ್ದಪ್ಪಾಜಿ ಮುಂತಾದವರನ್ನು ಆರಾಧಿಸುವ ಪರಂಪರೆಯನ್ನು ಇವರಲ್ಲಿ ಕಾಣುತ್ತೇವೆ. ಕೇವಲ ಈ ದೇವತೆಗಳಲ್ಲದೆ ಇತರೆ ದೈವಗಳನ್ನು ಆರಾಧಿಸುವ ಪರಂಪರೆ ಕಮ್ಮಾರರಲ್ಲಿ ಅಥವಾ ವಿಶ್ವಕರ್ಮರಲ್ಲಿ ಕಾಣುತ್ತೇವೆ.

ಮಂಗಳೂರು, ಉಡುಪಿ, ಹಾಗೂ ಕೊಳ್ಳೆಗಾಲ ಪರಿಸರದ ಕಮ್ಮಾರರು ಅಥವಾ ವಿಶ್ವಕರ್ಮರು ತಮ್ಮ ಊರುಗಳಲ್ಲಿ ಕಾಳಿಕಾಂಬೆಯ, ವಿಶ್ವಕರ್ಮನ, ಮೌನೇಶ್ವರನ ಹಾಗೂ ನಾಗಲಿಂಗ ಸ್ವಾಮಿಯ ದೇವಸ್ಥಾನಗಳನ್ನು ಹೊಂದಿದ್ದಾರೆ. ಇಲ್ಲಿ ಪೂಜೆ ವಿವಿಧ ಆಚರಣೆಗಳನ್ನು ಹರಕೆಗಳನ್ನು ಸಲ್ಲಿಸುತ್ತಾ ಬಂದಿದ್ದಾರೆ.ಮಂಗಳೂರು ಮತ್ತು ಉಡುಪಿ ಜಿಲ್ಲೆಯ ಕಮ್ಮಾರರು ಕಲ್ಕುಡ ಹಾಗೂ ಕಲ್ಲುರ್ಟಿ ಎಂಬ ಭೂತಗಳನ್ನು ಆರಾಧಿಸುತ್ತಾರೆ.

ಕಮ್ಮಾರರಲ್ಲಿ ಆಚಲವಾದಂತಹ ದೈವಭಕ್ತಿ ಇರುವುದು ಎದ್ದು ಕಾಣುತ್ತದೆ. ಪ್ರತಿ ದಿನ ಮುಂಜಾನೆ ಸಂಧ್ಯಾವಂದನೆ ಮಾಡಿದ ನಂತರವೇ ತಮ್ಮ ದೈನಂದಿನ ಬದುಕೆಗೆ ತೊಡಗಿಸಿಕೊಳ್ಳುತ್ತಾರೆ. ಮತ್ತು ತಮ್ಮ ಕುಲದೇವತೆಯಾದ ಕಾಳಿಕಾಂಬ ದೇವಾಲಯಕ್ಕೆ ಹೋಗಿ ಭಕ್ತಿ ಭಾವದಿಂದ ಅವಳನ್ನು ಸ್ಮರಿಸಿಕೊಂಡು ಬರುತ್ತಾರೆ. ಕಮ್ಮಾರರು ವಾಸಿಸುತ್ತಿರುವ ಪ್ರದೇಶಗಳಲ್ಲಿ ಕಾಳಮ್ಮನ ದೇವಸ್ಥಾನಗಳಿಲ್ಲದಿದ್ದರೆ ತಮ್ಮ ಮನೆಯ ಜಗಲಿಯ ಮೇಲಿರುವ ಕಾಳಮ್ಮನ, ವಿಶ್ವಕರ್ಮನ ಮೂರ್ತಿಗೆ

ಪೂಜೆ ಸಲ್ಲಿಸಿ ನಂತರ ಕುಲುಮೆಯನ್ನು ಕಾಳಿಯ ರೂಪದಲ್ಲಿ ಪೂಜಿಸಿ ನಿತ್ಯದ ಕೆಲಸಗಳನ್ನು ಪ್ರಾರಂಭಿಸುವುದು ಅವರ ಸಂಪ್ರದಾಯ.

**೨.೧೧ ಮಂಗಳೂರು ಮತ್ತು ಉಡುಪಿ ಜಿಲ್ಲೆಗಳಲ್ಲಿರುವ ವಿಶ್ವಕರ್ಮ ಕಮ್ಮಾರರ ಆರಾಧನಾ ಕೇಂದ್ರಗಳು:**

**೨.೧೧.೧. ಕಾಳಿಕಾಂಬ ವಿನಾಯಕ ದೇವಸ್ಥಾನ ಮಂಗಳೂರು :**

ಕಾಳಿಕಾಂಬ ವಿನಾಯಕ ದೇವಸ್ಥಾನ ಮಂಗಳೂರಿನ ಪ್ರಾಚೀನ ದೇವಾಲಯಗಳಲ್ಲಿ ಒಂದು. ಈ ಕಾಳಿಕಾಂಬೆಯ ಶಿಲ್ಪಕ್ಕೆ ೧೦೦೦ ವರ್ಷಕ್ಕೂ ಪ್ರಾಚೀನವಾದ ಇತಿಹಾಸವಿದೆ ಎಂದು ತಿಳಿಯುತ್ತದೆ. ಮಂಗಳೂರಿನ ಹೃದಯ ಭಾಗದಲ್ಲಿರುವ ರಥ ಬೀದಿಯ ಪಶ್ಚಿಮ ದಿಕ್ಕಿನ ಕೊನೆಯಲ್ಲಿರುವ ಶ್ರೀ ಕಾಳಿಕಾಂಬ ದೇವಸ್ಥಾನ ವಿಶ್ವಕರ್ಮರ ಧಾರ್ಮಿಕ ಮತ್ತು ಆಧ್ಯಾತ್ಮಿಕ ಕೇಂದ್ರ, ಪ್ರಶಾಂತ ಹಾಗೂ ಸ್ವಚ್ಛ ಸುಸಂಸ್ಕೃತ ವಾತಾವರಣ ಈ ಕಾಳಿಕಾಂಬ ದೇವಸ್ಥಾನದಲ್ಲಿದೆ. ಮುದ್ದಾದ ಮಂಗಳಮೂರ್ತಿ, ಚತುರ್ಭುಜಗಳ ಶಾಂತ ಮುಖ ಮುದ್ರೆಯ ಮಾತೆ ಕಾಳಿಕಾಂಬೆ ಪ್ರತಿದಿನ ಬರುವ ಭಕ್ತರನ್ನು ಹರಸುತ್ತಿದ್ದಾಳೆ. ದೇವಾಲಯದ ಮೂಲಮೂರ್ತಿ ಶ್ರೀ ವಿನಾಯಕನೆಂದು, ಕಾಳಿಕಾಮಾತೆಯನ್ನು ಆನಂತರ ಪ್ರತಿಷ್ಠಾಪಿಸಿದ್ದೆಂದು ಹೇಳಲಾಗಿದೆ. ಗಣೇಶ ವಿಗ್ರಹ ಬಹಳ ಪ್ರಸನ್ನತೆ, ತೇಜಸ್ಸು, ವರ್ಚಸ್ಸಿನಿಂದ ಕೂಡಿದೆ.

ಮಂಗಳೂರಿನ ಈ ಕಾಳಿಕಾಂಬ ದೇವಸ್ಥಾನದಲ್ಲಿ ನವಗ್ರಹ ಗುಡಿಯನ್ನು ಕಾಣುತ್ತೇವೆ. ದಕ್ಷಿಣ ಕನ್ನಡದ ದೇವಸ್ಥಾನಗಳಲ್ಲಿ ಬಹುತೇಕ ನವಗ್ರಹ ಗುಡಿಗಳು ಕಡಿಮೆ ಇದ್ದರೂ ಅಪರೂಪ. ಕಾಳಿಕಾಂಬ ದೇವಸ್ಥಾನದ ಹೊರಗಿನ ಆವರಣದಲ್ಲಿ ಎಡಕ್ಕೆ ನವಗ್ರಹ ಗುಡಿ ಇದೆ. ಇದನ್ನು ವಿಶ್ವಕರ್ಮ ಸಮಾಜದ ಹಿಂದಿನ ಸ್ವಾಮಿಗಳಾದ ಸಿದ್ಧಲಿಂಗ ಸ್ವಾಮಿಗಳು ಪ್ರತಿಷ್ಠಾಪಿಸಿದ್ದು ಇಲ್ಲಿ ನವಗ್ರಹ ಪೂಜೆಯು ವಿಶೇಷವಾಗಿ ನಡೆಯುತ್ತಿರುತ್ತದೆ. ಈ ನವಗ್ರಹದ ಗುಡಿಯ ಹಿಂದೆ ನಾಗಬನವಿದೆ. ಈ ನಾಗಬನಕ್ಕೆ ಬಹಳ ಮಹತ್ವವಿದೆ. ಸುಬ್ರಮಣ್ಯಕ್ಕೆ ಸ್ವತಃ ಪೂಜೆ ಮಾಡಲು ಹೋದ ನಾಗಲಿಂಗ ಸ್ವಾಮಿಗಳೊಂದಿಗೆ ಬಿಲ್ವ ಪಾತ್ರೆಯ ರೂಪದಲ್ಲಿ ಸುಬ್ರಮಣ್ಯ ಇಲ್ಲಿಗೆ ಬಂದು ನೆಲೆಸಿದ ಎಂಬ ಐತಿಹ್ಯವಿದೆ. ಈ ನಾಗಬನಕ್ಕೆ ವಿಶೇಷ ಶಕ್ತಿ ಇರುವುದಾಗಿ ಹೇಳಲಾಗುತ್ತದೆ. ಉತ್ಸವದ ವೇಳೆ ಉತ್ಸವಮೂರ್ತಿ ಕಾಳಿಕಾಂಬೆಯೊಂದಿಗೆ ಸುಬ್ರಮಣ್ಯನ ವಿಗ್ರಹವು ಹೊರಡುತ್ತದೆ. ನಾಗಬನದಲ್ಲಿ ಒಂದು ಸಂಪಿಗೆ ಮರ ವಿಸ್ಮಯಕಾರಿಯಾಗಿ ಮಲಗಿ ನಭೋ ಮಂಡಲಕ್ಕೆ ತಲೆ ಎತ್ತಿದೆ. ಇದು ದೊಡ್ಡ ನಾಗವೊಂದು ಉದ್ದಕ್ಕೆ ಮಲಗಿ ಹೆಡೆ ಎತ್ತಿದಂತೆ ಭಾಸವಾಗುತ್ತದೆ. ಇದೊಂದು ನಿಸರ್ಗ ಸೃಷ್ಟಿಸಿದ ಕೌತುಕ.

ಶ್ರೀ ಕಾಳಿಕಾಂಬ ದೇಗುಲದ ಎಡಭಾಗಕ್ಕೆ ಗುರುಮಠವಿದೆ. ಇಲ್ಲಿಯ ಮೂಲ ದೇವರು ವೀರಭದ್ರ, ಸಿದ್ಧಲಿಂಗಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟ ವಿಶ್ವಕರ್ಮನ ಮೂರ್ತಿ ಇದೆ. ನಾಗಲಿಂಗ

ಸ್ವಾಮಿಗಳ ಪವಿತ್ರ ಪಾದುಕೆಗಳು ಹಾಗೂ ನಾಗಲಿಂಗ ಸ್ವಾಮಿಗಳ ಶಿಲ್ಪವನ್ನು ಇಲ್ಲಿ ಪ್ರತಿಷ್ಠಾಪಿಸಿದ್ದಾರೆ. ಹೀಗಾಗಿ ವಿಶ್ವಕರ್ಮರಿಗೆ ಈ ಗುರುಮಠ ಪ್ರತ್ಯೇಕ ಮತ್ತು ಸ್ವತಂತ್ರ ವಾಗಿರುವಂತೆ ಕಂಡು ಬಂದರೂ ಅದು ಶ್ರೀ ಕಾಳಿಂಕಾಂಬ ದೇವಸ್ಥಾನದ ಒಂದು ಭಾಗವಾಗಿದೆ. ಸಾಂಸ್ಕೃತಿಕ ಹಾಗೂ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಗಿದೆ.

೨೦೦೦-೨೦೦೧ ರ ಅವಧಿಯಲ್ಲಿ ಈ ದೇವಸ್ಥಾನದ ಗಣಪತಿ ಮತ್ತು ಶ್ರೀ ಕಾಳಿಕಾಂಬ ದೇವತೆಯ ಗರ್ಭಗುಡಿಯನ್ನು ಸಾಂಪ್ರದಾಯಿಕ ಶಿಲ್ಪ ಶಾಸ್ತ್ರದ ನೆಲೆಯಲ್ಲಿ ಜೀರ್ಣೋದ್ಧಾರಗೊಳಿಸಿ, ದೇವರ ಪುನರ್ ಪ್ರತಿಷ್ಠೆ ಹಾಗೂ ಬ್ರಹ್ಮಕಲಶೋತ್ಸವ ಮಾಡಲಾಗಿದೆ. ಪ್ರತಿ ವರ್ಷವೂ ದೇವಸ್ಥಾನದಲ್ಲಿ ಸಾರ್ವತ್ರಿಕ ಕೆಲಸಗಳು ನಿರಂತರವಾಗಿ ನಡೆದಿರುತ್ತವೆ. ಶ್ರೀ ಕ್ಷೇತ್ರಕ್ಕೆ ಪ್ರತಿನಿತ್ಯ ಬರುವ ಭಕ್ತರಿಗೆ ಇಲ್ಲಿನ ಆಡಳಿತ ಮಂಡಳಿಯು ಸರ್ವ ಸೌಲಭ್ಯವನ್ನು ಒದಗಿಸುತ್ತದೆ.

**೨.೧೧.೨. ಶ್ರೀ ಗುರುಮಠ ಹಾಗೂ ಕಾಳಿಕಾಂಬ ದೇವಸ್ಥಾನ ಮೂಡುಬಿದ್ರೆ :**

ಈ ದೇವಸ್ಥಾನವು ಸುಮಾರು ೩೫೦ ವರ್ಷಗಳ ಹಿಂದೆ ಸ್ಥಾಪನೆಯಾಗಿದೆ ಎಂದು ತಿಳಿಯುತ್ತದೆ. ಇದು ಕಾರ್ಕಳ-ಮಂಗಳೂರು ರಸ್ತೆಯಲ್ಲಿ ಮೂಡುಬಿದರೆಯಿಂದ ಒಂದು ಕಿ.ಮೀ. ದೂರದಲ್ಲಿ ಉತ್ತರ ದಿಕ್ಕಿನಲ್ಲಿದೆ. ಶ್ರೀ ಕಾಳಿಕಾಂಬೆಯ ಮೂರ್ತಿಯು ೧೯೬೧ ರವರೆಗೆ ಸಣ್ಣ ಗುಡಿಯೊಂದರಲ್ಲಿ ಪೂಜಿಸಲ್ಪಡುತ್ತಿತ್ತು. ೧೯೬೨ ರಲ್ಲಿ ಜೀರ್ಣೋದ್ಧಾರಗೊಂಡ ಬ್ರಹ್ಮಕಲಶೋತ್ಸವ ನೆರವೇರಿತು. ಗರ್ಭಗುಡಿಯ ಎದುರು ತೀರ್ಥಮಂಟಪವಿದ್ದು ಸುತ್ತ ಗೋಪುರವಿದೆ. ಗರ್ಭಗುಡಿಯ ಎಡಭಾಗದಲ್ಲಿ ಸಣ್ಣ ಪಾಕಶಾಲೆಯೊಂದಿದೆ. ಬಲಭಾಗದಲ್ಲಿ ನೈವೇದ್ಯದ ಕೋಣೆಯಿದೆ ವೀರಭದ್ರ, ಕಾಳಿಕಾಂಬೆ ಇಲ್ಲಿನ ಪ್ರಧಾನ ದೇವತೆಗಳು. ಜೊತೆಗೆ ವೀರಭದ್ರನಿಗೆ ಪೂಜೆ ಸಲ್ಲುತ್ತದೆ. ಗರ್ಭಗುಡಿಯ ಬಲಪಾರ್ಶ್ವದಲ್ಲಿ ಪಂಜುರ್ಲಿ ದೈವದ ಗುಡಿ ಇದೆ. ದೇವಾಲಯದ ಪೂರ್ವದಿಕ್ಕಿನಲ್ಲಿ ಸುಮಾರು ಐವತ್ತು ಅಡಿ ಅಂತರದಲ್ಲಿರುವ ಕಟ್ಟೆಯ ಮೇಲೆ ಹನುಮಂತನ ವಿಗ್ರಹವಿದೆ. ಈ ದೇವಸ್ಥಾನವು ನಾಗಬನವನ್ನು ಹೊಂದಿದೆ.

**೨.೧೧.೩. ವೇಣುಗಿರಿ ಕಟಪಾಡಿ ವಿಶ್ವಕರ್ಮೇಶ್ವರ ದೇವಸ್ಥಾನ:**

ರಜತ ಪೀಠವೆಂದು ಪ್ರಖ್ಯಾತವಾದ ಉಡುಪಿ ಪಟ್ಟಣದಿಂದ ಸುಮಾರು ೬ ಕಿ.ಮೀ ದೂರದಲ್ಲಿ ದಕ್ಷಿಣಕ್ಕೆ ಮಂಗಳೂರು-ಉಡುಪಿ ಕರಾವಳಿ ರಸ್ತೆ ಅಂಚಿನ ಕಟಪಾಡಿ ಪೇಟೆಯಿಂದ ಪೂರ್ವಾಭಿಮುಖವಾಗಿ ಕವಲೊಡೆದ ಮಂಚಕಲ್ ರಸ್ತೆಯ ಉತ್ತರಕ್ಕೆ ಶ್ರೀ ವೇಣುಗಿರಿ ಕ್ಷೇತ್ರವಿದೆ. ಪೂರ್ವ ಕಾಲದಲ್ಲಿ ವೇಣುಗಿರಿ ಕ್ಷೇತ್ರವು ಬಿದಿರಿನ ತೋಪುಗಳಿಂದಲೂ, ಪರ್ಣಕುಟೀರಗಳಿಂದಲೂ, ಫಲ ಪುಷ್ಪಗಳಿಂದಲೂ ಕೂಡಿದ ಅಶ್ರಮ ಸ್ಥಳವಾಗಿತ್ತೆಂದು ಐತಿಹ್ಯವಿದೆ. ಪುರಾತನ ಕಾಲದಿಂದಲೂ ಇದು ಧರ್ಮಕರ್ಮ ನಿರತ ವಿಶ್ವಕರ್ಮರ ನೆಲೆವೀಡು. ಶ್ರೀ ವೇಣುಗಿರಿಯಲ್ಲಿ ಈಗ ಕಂಗೊಳಿಸುತ್ತಿರುವ ದೇವಸ್ಥಾನದ ಪಶ್ಚಿಮಕ್ಕಿರುವ ಮೂರು ಗದ್ದೆಗಳನ್ನು ದಾಟಿದಾಗ ಅಲ್ಲಿ ಒಂದು ತೋಟವು ಕಾಣಿಸುತ್ತದೆ. ಅಲ್ಲಿ ಹಿಂದೆ ಇದ್ದ ಒಂದು ಚಿಕ್ಕದೇವರ ಮನೆಯಲ್ಲಿ ಪುರಾತನ ಕಾಲದಿಂದಲೂ ಈ ಅಗ್ರಹಾರದ

ವಿಶ್ವ ಬ್ರಾಹ್ಮಣರು ಕಲಾಪೂರ್ಣವಾದ ಪಂಚಲೋಹ ನಿರ್ಮಿತ ಶ್ರೀ ಕಾಳಿಕಾ ದೇವಿಯ ಮೂರ್ತಿಯನ್ನು ಆರಾಧಿಸಿಕೊಂಡು ಬರುತ್ತಿದ್ದರು. ಇದೇ ಮೂರ್ತಿಯು ಈಗ ಉತ್ಸವ ಮೂರ್ತಿಯಾಗಿ ವಿಜೃಂಭಿಸುತ್ತಿದೆ.

**೨.೧೧.೪. ಬಾರಕೂರು ಶ್ರೀ ಕಾಳಿಕಾಂಬ ದೇವಸ್ಥಾನ:**

ಬಾರಕೂರು ಶ್ರೀ ಕಾಳಿಕಾಂಬ ದೇವಸ್ಥಾನವು ಅತೀ ಪುರಾತನ ಕಾಲದಿಂದಲೂ ವಿಶ್ವಕರ್ಮರ ಆರಾಧನಾ ಕೇಂದ್ರವಾಗಿದೆ. ಈ ದೇವಸ್ಥಾನಕ್ಕೆ ಸುಮಾರು ೧೦೦೦ ವರ್ಷಗಳ ಇತಿಹಾಸವಿದೆ. ಶಿಲ್ಪ ಕಾರ್ಯಗಳಿಗಾಗಿ ಬಾರಕೂರಿನಲ್ಲಿ ನೆಲೆಸಿದ ವಿಶ್ವ ಬ್ರಾಹ್ಮಣರು ತಮ್ಮ ದೈನಂದಿನ ಉಪಾಸನೆಗಾಗಿ ಅನೆಗುಂದಿ ಸಂಸ್ಥಾನಕ್ಕೆ ಸಂಬಂಧಪಟ್ಟ ಗುರುಗಳ ಮಾರ್ಗದರ್ಶನದಂತೆ ಕಲಾಮಾತೆಯಾದ ಶ್ರೀ ಕಾಳಿಕಾಂಬೆ ವಿಗ್ರಹ ಪ್ರತಿಷ್ಠಾಪನೆ ಮಾಡಿ ವಿಧಿವತ್ತಾದ ಪೂಜೆ ಉತ್ಸವಾದಿಗಳನ್ನು ನಡೆಸಿಕೊಂಡು ಬಂದರು. ಈ ದೇವಸ್ಥಾನದ ಮೂಲ ಮೂರ್ತಿಯನ್ನು ನಿಲಾಂಜನ ಶಿಲೆಯಿಂದ ನಿರ್ಮಿಸಲಾಗಿದೆ. ಉತ್ತರಾಭಿಮುಖವಾಗಿ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿರುತ್ತಾರೆ. ದೇವಿಯ ಪಾಣಿಪೀಠದಲ್ಲಿ ಒಂಟೆಯ ಲಾಂಛನವಿರುವುದು ವೈಶಿಷ್ಟ್ಯ. ಖ್ಯಾತಿ ಸಂಶೋಧಕ ಡಾ. ಗುರುರಾಜಭಟ್ಟರ ಅಭಿಪ್ರಾಯದಂತೆ ಶ್ರೀ ಕಾಳಿಕಾಂಬ ದೇವರ ಮೂರ್ತಿಯು ಸುಮಾರು ೧೪ನೇ ಶತಮಾನಕ್ಕೆ ಸೇರಿದ್ದಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪಂಜುರ್ಲಿ, ಕಲ್ಲುಕುಟಿಕ, ನಾಗದೇವತೆ, ಕ್ಷೇತ್ರಪಾಲ(ವೀರಭದ್ರ) ಶ್ರೀ ದೇವಿಯ ಪರಿವಾರ ದೈವಗಳು. ಕಾರ್ತಿಕ ಮಾಸದಲ್ಲಿ ರಂಗ ಪೂಜೆ, ದೀಪೋತ್ಸವ ಹಾಗೂ ಮೇಷ ಮಾಸದಲ್ಲಿ ರಥೋತ್ಸವಗಳು ನಡೆಯುತ್ತವೆ.

ಬಾರಕೂರು ಶ್ರೀ ಕಾಳಿಕಾಂಬ ದೇವಸ್ಥಾನಕ್ಕೆ ೧೨ ಮಾಗಾಣೆಯ ಪರಿವ್ಯಾಪ್ತಿಯಿದೆ. (ಬಾರಕೂರು, ಕೋಟ, ಕೋಟೇಶ್ವರ, ಹಾಲಾಡಿ, ಹೆಬ್ರಿ, ಸೂರಾಲು, ಉಡುಪಿ, ಪೆರ್ಡೂರು ಹಿರಿಯಡ್ಕ, ಕಾಪು, ಪಡುಬಿದ್ರೆ ಹಾಗೂ ಹೆಜಮಾಡಿ) ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳ ಹೊರಗೆ ವಾಸವಾಗಿರುವ ವಿಶ್ವಕರ್ಮ ಬಂಧುಗಳು ಸಹ ಈ ದೇವಸ್ಥಾನಕ್ಕೆ ಸಾಮೂಹಿಕವಾಗಿ ನಡೆದುಕೊಳ್ಳುತ್ತಿದ್ದಾರೆ. ಶೃಂಗೇರಿ, ಕೊಪ್ಪ, ಹೊಸನಗರ, ತೀರ್ಥಹಳ್ಳಿ, ಶಿವಮೊಗ್ಗದಲ್ಲಿಯ ವಿಶ್ವಕರ್ಮರು ಸಹ ಈ ದೇವಾಲಯಕ್ಕೆ ಆಗಮಿಸುತ್ತಾರೆ. ೧೯೯೫ರಲ್ಲಿ ಪುರಾತನ ಗರ್ಭಗುಡಿಯು ಶಿಥಿಲಗೊಂಡಿರುವುದನ್ನು ಗಮನಿಸಿ ಜೀರ್ಣೋದ್ಧಾರ ಸಮೀತಿಯನ್ನು ರಚಿಸಿಕೊಂಡು ಗರ್ಭಗುಡಿಯ ನವೀಕರಣ ಯೋಜನೆಯನ್ನು ಖ್ಯಾತ ಶಿಲ್ಪಿ ಎಸ್.ಕೆ. ಆಚಾರ್ಯರ ಸುಪುತ್ರ ದಕ್ಷಿಣ ಮೂರ್ತಿಆಚಾರ್ಯರು ನಡೆಸಿಕೊಟ್ಟರು.

ಶ್ರೀ ದೇವಸ್ಥಾನದ ವತಿಯಿಂದ ೧೯೯೭ರಲ್ಲಿ ವಿಶ್ವಬ್ರಾಹ್ಮಣ ವಿದ್ಯಾಪೀಠವನ್ನು ಉಡುಪಿ ಸಮೀಪದ ಕೊಡಂಕೂರಿನಲ್ಲಿ ಪ್ರಾರಂಭಿಸಲಾಗಿದೆ. ಸಂಸ್ಕೃತ, ಪೌರೋಹಿತ್ಯ, ಜ್ಯೋತಿಷ್ಯ ಹಾಗೂ ಆಗಮಗಳನ್ನು ಅಲ್ಲಿ ಬೋಧಿಸಲಾಗುತ್ತದೆ. ಇಡೀ ಕರ್ನಾಟಕದಲ್ಲಿ ಈ ರೀತಿಯ ವಸತಿ ಶಾಲೆಯನ್ನು ನಡೆಸುವ ವಿಶ್ವ ಬ್ರಾಹ್ಮಣರ ದೇವಸ್ಥಾನ ಬಾರುಕೂರು ಶ್ರೀ ಕಾಳಿಕಾಂಬ ದೇವಸ್ಥಾನ ಮಾತ್ರವೆಂಬುದು ಅಭಿಮಾನದ ಸಂಗತಿ. ಈ ದೇವಸ್ಥಾನದಲ್ಲಿ ಒಂದು ಗ್ರಂಥ ಭಂಡಾರವಿದೆ. ಸುಮಾರು ೩೦

ಸಾವಿರ ರೂ. ಮೌಲ್ಯದ ಆಧ್ಯಾತ್ಮಿಕ ಗ್ರಂಥಗಳಿವೆ. ಇಲ್ಲಿ ಸಾಮೂಹಿಕ ಉಪನಯನ, ವಿದ್ಯಾರ್ಥಿ ಶಿಬಿರ, ಗ್ರಾಮ ಮೊಕ್ತೇಸರರಿಗೆ ತರಬೇತಿ, ಅಸಂಘಟಿತ, ದುರ್ಬಲ ಹಾಗೂ ಹಿಂದುಳಿದ ವಿಶ್ವಕರ್ಮ ಬಂಧುಗಳನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನ ಮಾಡಲಾಗುತ್ತದೆ.

**೨.೧೧.೫. ಶ್ರೀ ಕಾಳಿಕಾಂಬ ದೇವಸ್ಥಾನ ಕೊಲಕಾಡಿ:**

ಮಂಗಳೂರು ತಾಲೂಕಿನ ಮೂಲ್ಕಿಯಿಂದ ಕಾರ್ನಾಡು ಮಾರ್ಗವಾಗಿ ಸುಮಾರು ೩ ಕಿ.ಮೀ ಸಾಗಿದಾಗ ಕೊಲಕಾಡಿ ಎಂಬ ಊರಿಗೆ ತಲುಪಬಹುದು. ರಸ್ತೆಯ ಪಕ್ಕದಲ್ಲಿರುವ ವಿಶ್ವಕರ್ಮ ಸಮಾಜಕ್ಕೆ ಸೇರಿದ ಶ್ರೀ ಕಾಳಿಕಾಂಬ ದೇವಸ್ಥಾನವಿದೆ. ಇಲ್ಲಿಯೂ ಕಾಳಿಕಾಂಬೆಯನ್ನು ವಿಶ್ವಕರ್ಮರು ಬಹಳ ಭಯ-ಭಕ್ತಿಯಿಂದ ಪೂಜಿಸಿಕೊಂಡು ಬರುತ್ತಿದ್ದಾರೆ.

ಸುಮಾರು ೧೫೦ ವರ್ಷಗಳಿಗೂ ಪೂರ್ವದಲ್ಲಿ ಕೊಲಕಾಡಿಗೆ ಹತ್ತಿರದಲ್ಲಿ ಕೂಲದೇವಿ ಕಾಳಿಕಾಂಬೆ ಗುಡಿಯಾಗಲಿ ದೇವಸ್ಥಾನವಾಗಲಿ ಇಲ್ಲದಿದ್ದುದರಿಂದ ಕೊಲಕಾಡಿ ಮತ್ತು ಕಕ್ವ ಗ್ರಾಮಗಳಲ್ಲಿ ಇರುವ ವಿಶ್ವಕರ್ಮ ಬಂಧುಗಳು ಒಟ್ಟು ಸೇರಿ ವರ್ಷದಲ್ಲಿ ಎರಡು ಬಾರಿ ಯಾರಾದರೊಬ್ಬರ ಮನೆಯಲ್ಲಿ ಮಣ್ಣಿನಿಂದ ಮಾಡಿದ ದೇವಿಯನ್ನು ಕೂರಿಸಿ "ದುರ್ಗಾಪೂಜೆ" ಎಂಬ ಹೆಸರಿನಲ್ಲಿ ಪೂಜಿಸುತ್ತಿದ್ದು, ಪೂಜಾ ನಂತರ ಗ್ರಾಮದ ಶಾಂಭವಿ ನದಿಯಲ್ಲಿ ದೇವಿಯ ಮೂರ್ತಿಯನ್ನು ವಿಸರ್ಜಿಸುತ್ತಿದ್ದರಂತೆ. ಈ ಪೂಜೆಯಲ್ಲಿ ಗ್ರಾಮದ ಎಲ್ಲಾ ವಿಶ್ವಕರ್ಮರು ಭಾಗವಹಿಸುತ್ತಿದ್ದರು. ಇಲ್ಲಿ ಶ್ರೀ ದೇವಿಯ ಗುಡಿಯನ್ನು ಕಟ್ಟಿ ಅಲ್ಲಿ ನಿತ್ಯ ಪೂಜೆಗೆ ವ್ಯವಸ್ಥೆ ಮಾಡಬೇಕೆಂದು ಅಭಿಪ್ರಾಯಕ್ಕೆ ಬಂದು ಅಲ್ಲಿ ಒಂದು ದೇವಾಲಯ ನಿರ್ಮಾಣ ಮಾಡಿದ್ದಾರೆ. ಅದು ಈಗ ಒಂದು ಸುಂದರ ದೇವಾಲಯವಾಗಿ ಕಂಗೊಳಿಸುತ್ತಿದೆ. ಪರಿವಾರ ದೇವತೆಗಳಾದ ಶ್ರೀ ಸತ್ಯದೇವತೆ ಶ್ರೀ ಭದ್ರಕಾಳಿಶಕ್ತಿ ಇವರುಗಳ ಕಾರಣಿಕಗಳಿಂದ ಕ್ಷೇತ್ರ ಹೆಚ್ಚು ಪ್ರಸಿದ್ಧಿಗೆ ಬರುತ್ತಿದೆ.

ಇಲ್ಲಿಯ ಜಾತ್ರೆ ಉತ್ಸವಾದಿಗಳು:

೧. ಪ್ರತಿ ವರ್ಷ ಪಾಲ್ಗುಣ ಬಹುಳ ಬಿದಿಗೆಯೆಂದು ಮಹೋತ್ಸವ

೨. ಶ್ರಾವಣ ಮಾಸದಲ್ಲಿ ಪುಷ್ಪ ವರಮಹಾಲಕ್ಷ್ಮಿ ಪೂಜೆ

೩. ಉಪಾಕರ್ಮ

೪. ಕನ್ಯಾ ಸಂಕ್ರಮಣದಲ್ಲಿ ಶ್ರೀ ವಿಶ್ವಕರ್ಮ ಪೂಜೆ

೫. ಅಶ್ವಿಜ ಮಾಸದಲ್ಲಿ ನವರಾತ್ರಿ ಪೂಜೆ, ನವಮಿಯಂದು ಚಂಡಿಕಾಹೋಮ

೬. ದೀಪಾವಳಿಗೆ ಬಲಿಹೊರಡುವುದು.

೭. ಪ್ರತಿ ಶುಕ್ರವಾರ ಭಜನಾ ಸೇವೆ. ಇತ್ಯಾದಿಗಳು ವಿಜ್ರಂಭಣೆಯಿಂದ ನಡೆಯುತ್ತವೆ.

**೨.೧೧.೬. ಕೋಟಿಕಾರು ನೆಲ್ಲಿ ಸ್ಥಳ ಶ್ರೀ ಕಾಳಿಕಾಂಬ ದೇವಾಸ್ಥಾನ:**

ಸುಮಾರು ಐನೂರು ವರ್ಷಗಳ ಇತಿಹಾಸವಿರುವ ನೆಲ್ಲಿ ಸ್ಥಳ ಶ್ರೀ ಕಾಳಿಕಾಂಬ ದೇವಸ್ಥಾನವು ಮಂಗಳೂರು ಸಮೀಪವಿರುವ ಕೋಟೆಕಾರು ಎಂಬಲ್ಲಿ ಈ ದೇವಸ್ಥಾನವಿದೆ. ಇದನ್ನು ವಿಶ್ವಕರ್ಮ

ಸಮಾಜದವರು ನಿರ್ಮಿಸಿದ್ದಾರೆ. ಹಿಂದೆ ಈ ಕ್ಷೇತ್ರವು ಸೋಮೇಶ್ವರ ಮಠವೆಂದು ಪ್ರಸಿದ್ಧಿ ಪಡೆದಿತ್ತು. ಕಾಲಾನಂತರ ಅಂತಃ ಕಲಹದಿಂದ ಜೀರ್ಣಾವಸ್ಥೆಗೆ ಈಡಾದ ಈ ಕ್ಷೇತ್ರವು ೧೯೪೬ ರಲ್ಲಿ ಕೋಟೇಕಾರು ನೆಲ್ಲಿ ಸ್ಥಳ ಶ್ರೀಕಾಳಿಕಾಂಬ ವಿಶ್ವಕರ್ಮ ಬ್ರಾಹ್ಮಣರ ಸಂಘ ಇದರ ಸ್ಥಾಪನೆಯೊಂದಿಗೆ ಪುನಃಶ್ಚೇತನಗೊಂಡಿತು.

ಏಪ್ರಿಲ್ ೨೨, ೧೯೭೭ ರ ವೈಶಾಖ ಪಂಚಮಿಯಂದು ಮೈಸೂರಿನ ಶಿಲ್ಪಿ ಸಿದ್ಧಾಂತಿ ಶ್ರೀ ಮಹಾದೇವ ಸ್ವಾಮಿ ಇವರೊಂದಿಗೆ ಕುಲಗುರು ಶ್ರೀ ವಿಶ್ವಕರ್ಮ ದೇವರು ಶ್ರೀ ಗಣಪತಿ ಶ್ರೀ ನಾಗದೇವರು ಮತ್ತು ಆರಾಧ್ಯ ದೈವಗಳಾದ ಶ್ರೀ ಧೂಮವತಿ ದೈವಗಳ ಪ್ರತಿಷ್ಠಾಪನೆಯಾಯಿತು.

ಕೋಟೆಕಾರು ನೆಲ್ಲಿ ಸ್ಥಳವು ಹಿಂದೆ ವೃಕ್ಷಗಳ ವನವೇ ಆಗಿದ್ದು ಹಿಂದೆ ಕಾಳಮ್ಮ ಎಂಬ ಸಾಧ್ವಿ ಭಕ್ತೆಯು ಶ್ರೀ ದೇವಿಗೆ ನಿತ್ಯವು ಆಯ್ದು ನೆಲ್ಲಿಗಳನ್ನು ಅರ್ಪಿಸಿ ಆರಾಧಿಸುತ್ತಿದ್ದಳೆಂದೂ ಶ್ರೀ ದೇವಿಯ ಕೃಪೆಗೆ ಪಾತ್ರಳಾದ ಈಕೆಯ ಈ ಆರಾಧನಾ ನೆಲೆಯು ನೆಲ್ಲಿ ಸ್ಥಳ ಆಯಿತೆಂದು ಪ್ರತೀತಿಯಿದೆ.

೨.೧೧.೭. ಕರಸ್ಥಳ ಜಗದ್ಗುರು ಶ್ರೀನಾಗಲಿಂಗಸ್ವಾಮಿ ಮತ್ತು ಕಾಳಿಕಾಂಬ ದೇವಸ್ಥಾನ ಉಪ್ರಳ್ಳಿ :

ಉಡುಪಿ ಜಿಲ್ಲೆಯ ಕುಂದಾಪುರದಿಂದ ಉತ್ತರಕ್ಕೆ ರಾಷ್ಟ್ರೀಯ ಹೆದ್ದಾರಿ ೧೭ ರಲ್ಲಿ ನಾಗೂರಿನಿಂದ ೫ ಕಿ.ಮೀ. ಪೂರ್ವಕ್ಕೆ ಸಾಗಿದರೆ ಸುಂದರ ಪ್ರಶಾಂತ ಪ್ರದೇಶ ಉಪ್ರಳ್ಳಿಯಲ್ಲಿ "ಕರಸ್ಥಳ ಜಗದ್ಗುರು ಶ್ರೀ ನಾಗಲಿಂಗಸ್ವಾಮಿ ಮತ್ತು ಶ್ರೀ ಕಾಳಿಕಾಂಬ ದೇವಸ್ಥಾನ ಕಂಡು ಬರುತ್ತದೆ. ಈ ದೇವಸ್ಥಾನದ ಇತಿಹಾಸ ಬಹಳ ರೋಚಕ. ಇದು ಪವಾಡ ನಡೆದ ಶಕ್ತಿಪೀಠ. ಮೂಡುಬಿದ್ರೆಯ ದೇವಿ ಮನೆಗೆ ಜಿಲ್ಲೆಯ ಹೊರಗಿನಿಂದ ಬಂದು ಅನೇಕ ಪವಾಡಗಳನ್ನು ಮಾಡಿದ ಜಗದ್ಗುರು ಶ್ರೀ ಕರಸ್ಥಳ ನಾಗಲಿಂಗ ಸ್ವಾಮಿಗಳು ಉಪ್ರಳ್ಳಿಯ ಕ್ಷೇತ್ರಕ್ಕೆ ಬಂದು ವಿಭೂತಿ ಉಂಡೆಗಳನ್ನು ಬಿಟ್ಟು ಹೋದರೆಂಬ ಐತಿಹ್ಯವಿದೆ. ಇಲ್ಲಿ ಸಾಮಾನ್ಯ ಬಂಡೆಗಳಂತೆ ಕಾಡುವ ಐದು ಸಣ್ಣ ವಿಭೂತಿ ಉಂಡೆಗಳನ್ನು "ವಿಶ್ವಕರ್ಮನ ಸ್ವರೂಪ" ಎಂದೂ ಪೂಜಿಸಲಾಗುತ್ತದೆ.(ಇಲ್ಲಿಯ ದೊಡ್ಡ ಉಂಡೆಯು ವರ್ಷದಿಂದ ವರ್ಷಕ್ಕೆ ದೊಡ್ಡದಾಗುತ್ತಾ ಬರುವುದು ರೋಚಕದ ಸಂಗತಿ) ಈಗ ಈ ಎರಡು ವಿಭೂತಿ ಉಂಡೆಗಳನ್ನು ಬೆಳ್ಳಿಯ ಸುಪುಪ್ಪದೊಳಗೆ ಇಟ್ಟು ಪೂಜಿಸಲಾಗುತ್ತದೆ. ಇನ್ನೊಂದು ಲಿಂಗವನ್ನು ಕಾಳಿಕಾಂಬೆಯ ರೂಪವೆಂದು ತಿಳಿದು ಇವುಗಳನ್ನೆಲ್ಲ ಒಂದೇ ಗರ್ಭಗುಡಿಯಲ್ಲಿಟ್ಟು ಪೂಜಿಸಲಾಗುತ್ತದೆ. ಈ ಆರಾಧನೆಗಳು ಪುರಾತನ ಕಾಲದಿಂದ ನಡೆದುಕೊಂಡು ಬಂದಿರಬಹುದು. ಈ ದೇವಾಲಯಕ್ಕೆ ಸುತ್ತು ಪೌಳಿ ಇದೆ. ಹೊರ ಆವರಣದಲ್ಲಿ ನಾಗಬನ ಹಾಗೂ ಪರಿವಾರ ದೈವಗಳು ಇವೆ. ಈ ಕ್ಷೇತ್ರದ ಮಹಿಮೆಯನ್ನು ಅರಿತ ಮಹಾನುಭಾವರಾದ ಮಂಗಳೂರಿನ ಪುಲ್ಕೆ ಬಾಬುರಾಯ ಆಚಾರ್ಯರು ೧೯೪೪ರಲ್ಲಿ ಈ ಕ್ಷೇತ್ರಕ್ಕೆ ಆಗಮಿಸಿ ಪರಭಾರೆಯಾಗಿದ್ದ ದೇವಸ್ಥಾನದ ಸ್ಥಳವನ್ನು ಖರೀದಿಸಿ ಇದರೊಂದಿಗೆ ಅಮೃತಪಡಿ ನಂದಾದೀಪದ ವ್ಯವಸ್ಥೆಗಾಗಿ ಸಾಗುವಳಿ ಜಮೀನನ್ನು ಖರೀದಿಸಿ ಉಂಬಳಿಯಾಗಿ ದೇವಸ್ಥಾನಕ್ಕೆ ಬಿಟ್ಟು ಕೊಟ್ಟಿರುತ್ತಾರೆ. ಈ ದೇವರ ಒಂದು ವೈಶಿಷ್ಟವೆಂದರೆ

ಮದುವೆ ನಿಶ್ಚಯಿಸುವ ಮೊದಲು ಪ್ರಸಾದ(ಭವಿಷ್ಯ) ನೋಡುವ ಕ್ರಮವಿದೆ. ಇದು ಅತೀ ಪ್ರಸಿದ್ಧಿಯಾಗಿದೆ. ಅಡಿಕೆ ಮರದಿಂದ ತೆಗೆದ ನೆಲದ ಮೇಲೆ ಇಟ್ಟಿರದ "ಹಿಂಗಾರ" ವನ್ನು ಕಾಳಿಕಾಂಬೆ ವಿಶ್ವಕರ್ಮ ನಾಗಲಿಂಗ ಸ್ವಾಮಿಯ ಸ್ವರೂಪದ ಮೇಲೆ ಇಟ್ಟು ಪೂಜಿಸಿ, ಭಕ್ತಿಯಿಂದ ಪ್ರಾರ್ಥಿಸಿ ಮಂಗಳಾರತಿ ಮಾಡಲಾಗುತ್ತದೆ. ಮದುವೆಯ ಸಂಬಂಧ ಆಗಬಹುದಾದರೆ, ದೇವರ ಅನುಗ್ರಹ ಇದ್ದರೆ ಹಿಂಗಾರ ನಡುಗಿ ಉದುರಿ ಕೆಳಗೆ ಬೀಳುತ್ತದೆ. ಅನುಗ್ರಹ ಇಲ್ಲದಿದ್ದರೆ ಹಿಂಗಾರ ಇಟ್ಟಂತಹ ಸ್ಥಿತಿಯಲ್ಲಿಯೇ ಇರುತ್ತದೆ. ಹೊಸ ಮದುಮಕ್ಕಳು ಈ ಕ್ಷೇತ್ರಕ್ಕೆ ತಪ್ಪದೆ ದರ್ಶನ ಕೊಡುತ್ತಾರೆ.

ಕುಂದಾಪುರ ತಾಲೂಕಿಗೆ ಸಂಬಂಧಪಟ್ಟಂತಹ ಬಹುತೇಕ ಗ್ರಾಮಗಳ ಕಮ್ಮಾರ ವಿಶ್ವಕರ್ಮ ಸಮಾಜ ಬಾಂಧವರು ಈ ದೇವಸ್ಥಾನದ ವ್ಯಾಪ್ತಿಗೊಳಪಟ್ಟಿರುತ್ತಾರೆ. ಸಾಧಾರಣ ೧೫೦೦ ಮನೆಗಳಿವೆ.೩೫ ಮಾಗಾಣಿಗಳಿವೆ. ಅಲ್ಲಲ್ಲಿ ಗ್ರಾಮ ಮೊಕ್ತೇಸರರು ಇದ್ದು ಅವರ ಮುಖೇನ ದೇವಸ್ಥಾನದ ಅಭಿವೃದ್ಧಿ ಅಗುತ್ತಿದೆ. ಈ ದೇವಸ್ಥಾನದಲ್ಲಿ ಉಪಕರ್ಮ, ಶ್ರಾವಣ ಮಾಸದಲ್ಲಿ ಹೂವಿನ ಪೂಜೆ ಕನ್ಯಾಸಂಕ್ರಮಣದಲ್ಲಿ ವಿಶ್ವಕರ್ಮ ಯಜ್ಞ, ನವರಾತ್ರಿಯಲ್ಲಿ ವಿಶೇಷ ಪೂಜೆ, ಚಂಡಿಕಾ ಯಜ್ಞ ವಿಧಿವತ್ತಾಗಿ ನಡೆಯುತ್ತಿರುತ್ತವೆ.

**೨.೧೨ ಕೊಳ್ಳೆಗಾಲ ಪರಿಸರದ ಕಮ್ಮಾರರ ಆರಾಧನಾ ಕ್ಷೇತ್ರಗಳು :**

ಮಂಟೇಸ್ವಾಮಿಯ ಕಾವ್ಯದಲ್ಲಿ ಬರುವ ಸಾಂಸ್ಕೃತಿಕ ನಾಯಕ ಸಿದ್ದಪ್ಪಾಜಿಯ ಕಥೆ ಸಂಪೂರ್ಣವಾಗಿ ಕಮ್ಮಾರರ ಸಮುದಾಯದ ಚಿತ್ರಣವನ್ನು ನೀಡುತ್ತದೆ. ಮಂಟೇಸ್ವಾಮಿಯ ಕಾಲಕ್ಕೆ ಕಬ್ಬಿಣದ ಮಹತ್ವ ಬಳಕೆ ಜನಪ್ರಿಯವಾಗಿತ್ತು. ಅಂದು ಕಮ್ಮಾರಿಕೆಯ ವೃತ್ತಿಯಲ್ಲಿ ತೊಡಗಿದವರನ್ನು ಶ್ರೇಷ್ಠರು ಎಂಬ ಅರ್ಥದಲ್ಲಿ ಗುರುತಿಸಲಾಗುತ್ತಿತ್ತು. ಮಂಟೇಸ್ವಾಮಿಯ ಕಾವ್ಯದಲ್ಲಿ ಅಂದಿನ ಹಲಗೂರಿನಲ್ಲಿಯ ಕಮ್ಮಾರಿಕೆಗೆ ಏಳೂನೂರಾ ಐವತ್ತು ಒಕ್ಕಲುಗಳಿದ್ದವೆಂದು ತಿಳಿಯುತ್ತದೆ. ಜೊತೆಗೆ ಹಲಗೂರು ಕಬ್ಬಿಣದ ಆಯುಧಗಳನ್ನು ತಯಾರಿಸುವ ಪ್ರಮುಖ ಕೇಂದ್ರವಾಗಿತ್ತು ಮತ್ತು ಇಲ್ಲಿಂದಲೇ ಅನೇಕ ರಾಜರುಗಳಿಗೆ ಶಸ್ತ್ರಾಸ್ತ್ರಗಳ ಪೂರೈಕೆಯಾಗುತ್ತೆಂದು ತಿಳಿಯುತ್ತದೆ. ಈ ಘಟ್ಟದಲ್ಲಿ ಹಲಗೂರಿನ ತಂಬೆಲ್ಲ ಕಮ್ಮಾರಿಕೆ ವೃತ್ತಿ ಮಾಡುತ್ತಿದ್ದವರು ಕಾಣುತ್ತಿದ್ದರು ಮತ್ತು ಇವರು ಬಹಳ ಗರ್ವದಿಂದ ಕೂಡಿದವರಾಗಿದ್ದರು ಎಂಬುದನ್ನು ಮಂಟೇಸ್ವಾಮಿಯ ಕಾವ್ಯದ ಮೂಲಕ ತಿಳಿಯಬಹುದಾಗಿದೆ.

ಮಂಟೇಸ್ವಾಮಿ ನಿರ್ವಾಣ ಹೊಂದುತ್ತಿದ್ದ ಸಂದರ್ಭದಲ್ಲಿ ಸಿದ್ದಪ್ಪಾಜಿಗೆ ಕಬ್ಬಿಣದ ಅವಶ್ಯಕತೆ ಉಂಟಾಗಿ ಕಬ್ಬಿಣ ಭಿಕ್ಷೆ ಬೇಡಲು ಹಲಗೂರಿನ ಕಮ್ಮಾರರ ಹತ್ತಿರ ಬರುತ್ತಾನೆ. ಅಲ್ಲಿಯ ಕುಲುಮೆಗಳ ಒಡೆಯರಾದ ಹುಲ್ಲೋಜ, ತನ್ನೋಜ, ಬೋಲೋಜ, ಬೆಟ್ಟೋಜ, ಕಾಳೋಜ, ಲಿಂಗೋಜ, ಹಾಗೂ ನರಸೋಜ ಇವರು ಸಿದ್ದಪ್ಪಾಜಿಗೆ ಕಬ್ಬಿಣದ ಭಿಕ್ಷೆ ನೀಡಲು ನಿರಾಕರಿಸುತ್ತಾರೆ. ಬಂಗಾರವನ್ನು ಬೇಕಾದರೆ ಕೇಳು ಕೊಡುತ್ತೇವೆ. ಆದರೆ ಕಬ್ಬಿಣ ಕೊಡುವುದಿಲ್ಲ ಎಂದು ಹೇಳುತ್ತಾ ಅವನಿಗೆ ಕೆಂಪಾಗಿ ಕಾಯಿಸಿದ ಕಬ್ಬಿಣ ತುಂಡನ್ನು ಕೊಡುವ ಪ್ರಯತ್ನ ಮಾಡುತ್ತಾರೆ. ಸಿದ್ದಪ್ಪಾಜಿ ಹಲಗೂರಿನ ಕಮ್ಮಾರರನ್ನು ಪರಿಪರಿಯಾಗಿ ಬೇಡಿಕೊಳ್ಳುತ್ತಾನೆ. ಕೊನೆಗೆ ಸಿಟ್ಟಿಗೆದ್ದು ಅವರಿಗೆ ಶಾಪ ಕೊಡುತ್ತಾನೆ.

ಶ್ರೀಮಂತಿಕೆಯಿಂದ ಮೆರೆಯುತ್ತಿದ್ದ ಹಲಗೂರಿನ ಕಮ್ಮಾರರು ಸಿದ್ದಪ್ಪಾಜಿಯ ಶಾಪದಿಂದ ನಿರ್ಗತಿಕರಾಗುತ್ತಾರೆ. ಈ ಕಥೆಯನ್ನು ಗಮನಿಸಿದಾಗ ಆ ಕಾಲಕ್ಕೆ ಕಬ್ಬಿಣದ ಬೇಡಿಕೆ ಯಾವ ಹಂತದಲ್ಲಿತ್ತು ಎಂದು ತಿಳಿಯುತ್ತದೆ.

ಸಿದ್ದಪ್ಪಾಜಿಯ ಶಾಪವನ್ನು ಇನ್ನೂ ನಾವು ಅನುಭವಿಸುತ್ತಿದ್ದೇವೆ ಎಂದು ಹಲಗೂರಿನ ಕಮ್ಮಾರರು ಹೇಳುತ್ತಾರೆ. ಸಿದ್ದಪ್ಪಾಜಿಯ ಶಾಪ ವಿಮೋಚನೆಗಾಗಿ ಕೊಳ್ಳೆಗಾಲ ಪರಿಸರದ ಕಮ್ಮಾರರು, ಪಂಚಾಳರು ಸಿದ್ದಪ್ಪಾಜಿಯ ಆರಾಧನೆ, ಪೂಜೆ, ಹರಕೆ ಹೊರುವುದನ್ನು ಇಲ್ಲಿ ಕಾಣುತ್ತೇವೆ. ಹಲಗೂರಿನಲ್ಲಿ ಸಿದ್ದಪ್ಪಾಜಿಯ ಗದ್ದಿಗೆ ಇದೆ. ಈ ಗದ್ದಿಗೆಗೆ ಪಂಚಾಳರು ನಡೆದುಕೊಳ್ಳುತ್ತಾರೆ.

ಸಿದ್ದಪ್ಪಾಜಿ ನಿರ್ವಾಣ ಹೊಂದಿದ ಗದ್ದಿಗೆ ಚಿಕ್ಕಲೂರಿನಲ್ಲಿದೆ. ಕೊಳ್ಳೆಗಾಲ ಚಾಮರಾಜನಗರ ಪರಿಸರದ ಕಮ್ಮಾರರು ಪೂಜೆಗಾಗಿ ಚಿಕ್ಕಲೂರಿಗೆ ಬರುತ್ತಾರೆ. ಪ್ರತಿ ವರ್ಷಕ್ಕೊಂದು ಸಲವಾದರು ನಾವು ಸಿದ್ದಪ್ಪಾಜಿಯ ಗದ್ದುಗೆಯ ದರ್ಶನವನ್ನು ಪಡೆಯುತ್ತವೆ ಎಂದು ಇಲ್ಲಿಯ ಕಮ್ಮಾರರು ಹೇಳುತ್ತಾರೆ.

**೨.೧೨.೧. ಮಂಟೇಸ್ವಾಮಿ ಗದ್ದುಗೆ ಬಪ್ಪೇಗೌಡನಪುರ:**

ಮಂಟೇಸ್ವಾಮಿ ನಿರ್ವಾಣ ಹೊಂದಿದ ಸ್ಥಳ ಬಪ್ಪೇಗೌಡನಪುರ ಎಂದು ಹೇಳುತ್ತಾರೆ. ಇಲ್ಲಿ ಮಂಟೇಸ್ವಾಮಿಯ ಗದ್ದುಗೆ ಇದೆ ನಿತ್ಯವು ನೂರಾರು ಭಕ್ತರು ಮಂಟೇಸ್ವಾಮಿಯ ಗದ್ದಿಗೆಗೆ ಪೂಜೆ ಸಲ್ಲಿಸುತ್ತಾರೆ. ಕೊಳ್ಳೆಗಾಲ ಪರಿಸರದ ಕಮ್ಮಾರರು ಈ ಗದ್ದಿಗೆಗೆ ನಡೆದುಕೊಳ್ಳುತ್ತಾರೆ.

**೨.೧೨.೨. ರಾಚಪ್ಪಾಜಿಯ ಗದ್ದುಗೆ ಕಪ್ಪಡಿ:**

ಮಂಟೇಸ್ವಾಮಿಯ ಶಿಷ್ಯ ರಾಚಪ್ಪಾಜಿ ನಿರ್ವಾಣ ಹೊಂದಿದ ಸ್ಥಳ ಕಪ್ಪಡಿ ಎಂದು ಹೇಳಲಾಗುತ್ತದೆ. ಇಲ್ಲಿಯೂ ಕಮ್ಮಾರರು ರಾಚಪ್ಪಾಜಿಯನ್ನು ಆರಾಧಿಸುತ್ತಾರೆ.

**೨.೧೨.೩. ಹಲಗೂರಿನ ಕಾಳಮ್ಮ:**

ಸಿದ್ದಪ್ಪಾಜಿಯನ್ನು ಹಲಗೂರಿನ ಕಾಳಮ್ಮನ ಗುಡಿಯಲ್ಲಿ ಕಮ್ಮಾರರು ಬಂಧಿಸಿರುತ್ತಾರೆ ಎಂಬ ಹೇಳಿಕೆಗಳಿವೆ. ಪ್ರಾಚೀನವಾದ ಈ ದೇವಸ್ಥಾನಕ್ಕೆ ಕಮ್ಮಾರರು, ಪಂಚಾಳರು ಪ್ರತಿದಿನ ಪೂಜೆ ಸಲ್ಲಿಸುತ್ತಾರೆ. ಕಮ್ಮಾರರ ಕುಲದೇವತೆಯಾಗಿರುವ ಇವಳ ಜಾತ್ರೆಯನ್ನು ಯುಗಾದಿಯಲ್ಲಿ ಮಾಡುತ್ತಾರೆ.

**೨.೧೨.೪. ಕೊಳ್ಳೆಗಾಲದ ಕಾಳಿಕಾ ದೇವಸ್ಥಾನ:**

ಕೊಳ್ಳೆಗಾಲದಲ್ಲಿ ಕಾಳಿಕಾ ದೇವಸ್ಥಾನವಿದೆ. ಈ ದೇವಸ್ಥಾನದ ಅರ್ಚಕರು ಪಂಚಾಳರೆ ಆಗಿದ್ದಾರೆ. ಪ್ರತಿ ಮಂಗಳವಾರ ಹಾಗು ಶುಕ್ರವಾರ ವಿಷೇಶ ಪೂಜೆಗಳು ಇಲ್ಲಿ ನಡೆಯುತ್ತವೆ. ಕೊಳ್ಳೆಗಾಲದ ಸುತ್ತಮುತ್ತಲಿನ ಪರಿಸರದ ಕಮ್ಮಾರರು, ಪಂಚಾಳರು ಈ ದೇವಸ್ಥಾನಕ್ಕೆ ನಡೆದುಕೊಳ್ಳುತ್ತಾರೆ. ಯುಗಾದಿಯಲ್ಲಿ ಐದು ದಿನಗಳವರೆಗೆ ವಿಷೇಶ ಕಾರ್ಯಕ್ರಮಗಳಾಗುತ್ತವೆ.

ಈ ಕೊಳ್ಳೆಗಾಲದ ಪರಿಸರದಲ್ಲಿರುವ ಕಮ್ಮಾರರು ಪ್ರತಿ ಅಮವಾಸ್ಯೆ ದಿನ ತಮ್ಮ ವೃತ್ತಿಗೆ ರಜೆ ನೀಡುತ್ತಾರೆ. ಅಮಾವಾಸ್ಯೆಯ ದಿನ ಕುಲುಮೆಗಳನ್ನು ಸಾರಿಸಿ ಅದಕ್ಕೆ ರಂಗೋಲಿ ಹಾಕಿ ಪೂಜಿಸಿ, ಕಾಳಮ್ಮ ಗುಡಿಗೆ ಹೋಗಿಬರುವ ಸಂಪ್ರದಾಯವನ್ನು ಬೆಳೆಸಿಕೊಂಡಿದ್ದಾರೆ.

## ೨.೧೩ ಪೌರಾಣಿಕ ಹಿನ್ನೆಲೆ:

ವಿಶ್ವಕರ್ಮರಿಂದಲೇ ಈ ಜಗತ್ತು ಸೃಷ್ಟಿಯಾಯಿತು ಎಂದು ವಿಶ್ವಕರ್ಮರಲ್ಲಿರುವ ವಿಶ್ವಕರ್ಮ ಪುರಾಣ ಮತ್ತು ಮೂಲಸ್ತಂಬ ಪುರಾಣಗಳು ಹೇಳುತ್ತವೆ. "ಪಂಚಾಳರ ಮೂಲ ಪುರುಷನಾದ ವಿಶ್ವಕರ್ಮನಿಗೆ ಐದು ಮುಖಗಳು. ಆ ಐದು ಮುಖಗಳಿಂದ ಸಾನಗ, ಸನಾತನ, ಅಹಭೂವನ, ಪತ್ನ ಮತ್ತು ಸುಪರ್ಣರೆಂಬ ಪಂಚಬ್ರಹ್ಮರು ಪ್ರಕಟಗೊಂಡರು ಇವರಿಗೆ ಮನು, ಮಯ, ತ್ವಷ್ಟ್ರ, ಶಿಲ್ಪ, ವಿಶ್ವಜ್ಞ ಅಥವಾ ರುದ್ರ, ವಿಷ್ಣು, ಬ್ರಹ್ಮ, ಇಂದ್ರ, ಸೂರ್ಯ ಅಥವಾ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾಸನರೆಂಬ ಹೆಸರುಗಳು ಇವೆ.

ಸಾನಗ (ಮನು) ಈ ಮಹರ್ಷಿಯು ಲೋಹ ಶಿಲ್ಪಿ : ಈತನ ಸಂಶೋಧನೆ ಕಬ್ಬಿಣ, ನೇಗಿಲು,ಹಾರೆ, ಪಿಕಾಸಿ, ಬೀಗ, ಖಡ್ಗ, ಚೂರಿ, ಕಬ್ಬಿಣ ಗಾಣ, ಕೃಷಿ ಉಪಕರಣಗಳು, ತೋಪು, ನೀರೆತ್ತುವ ರಾಟೆ, ವಿಮಾನ, ಹಡಗು ಮೊದಲಾದ ಆಶ್ಚರ್ಯಕರ ಯಂತ್ರಗಳ ಸೃಷ್ಟಿ ಮನು ಮಹರ್ಷಿಯದು.

ಸನಾತನ (ಮಯ) ಈ ಮಹರ್ಷಿಯು ಕಾಷ್ಟ ಶಿಲ್ಪಿ : ಈತನ ಸಂಶೋಧನೆ ಮರ, ರಥ, ಪಾಲಕಿ, ಹಡಗು, ದೋಣಿ, ಬಾಗಿಲು, ಕಿಟಕಿ, ಕೃಷಿ ಉಪಕರಣಗಳು ಮರದಲ್ಲಿ ದೇವಾನು ದೇವತೆಗಳ ವಿಗ್ರಹಗಳು ಮುಂತಾದವು ಮಯ ಮಹರ್ಷಿಯ ಕೊಡುಗೆಗಳು.

ಅಹಭೂನ(ತ್ರಷ್ಟ) ಈ ಮಹರ್ಷಿಯ ಎರಕಶಿಲ್ಪಿ: ಈತನ ಸಂಶೋಧನೆ ಕಂಚು, ಹಿತ್ತಾಳೆ, ದೇವಾಲಯಗಳ ಪ್ರಭಾವಳಿ, ಕಳಸ, ಘಂಟೆ, ಧೂಪದಾರತಿ, ಉತ್ಸವ ಮೂರ್ತಿಗಳು, ಯಜ್ಞಕ್ಕೆ ಬೇಕಾಗುವ ಪಾತ್ರೆಗಳು, ದಿನಬಳಕೆಯ ಪಾತ್ರೆಗಳು, ಇವುಗಳಲ್ಲದೇ ಅಹಭೂವನ ಮಹರ್ಷಿ ಆಯುರ್ವೇದ, ಖಗೋಳಶಾಸ್ತ್ರ ಬಲ್ಲವನು.

ಪ್ರತ್ನ(ಶಿಲ್ಪಿ) ಈ ಮಹರ್ಷಿಯು ಶಿಲಾಶಿಲ್ಪಿ: ಈತನ ಸಂಶೋಧನೆ ಶಿಲೆ ಶಿಲೆಯಲ್ಲಿ ಗಂಡು ಶಿಲೆ, ಹೆಣ್ಣು ಶಿಲೆ, ನಪುಂಸಕ ಶಿಲೆ ಎಂಬ ಪ್ರಬೇಧಗಳಿದ್ದು ಅವುಗಳನ್ನು ಕಂಡುಹಿಡಿದು ದೇವಾನುದೇವತೆಗಳ ವಿಗ್ರಹಗಳನ್ನು ತಯಾರಿಸುವುದು. ದೇವಾಲಯಗಳ ನಿರ್ಮಾಣ ಆಣೆಕಟ್ಟುಗಳು, ಕೋಟೆ, ಅರಮನೆ, ಮೊದಲಾದವುಗಳ ನಿರ್ಮಾಣ ಶಿಲಾ ಶಿಲ್ಪಿಯದು.

ಸುಪರ್ಣ (ವಿಶ್ವಜ್ಞ) ಈ ಮಹರ್ಷಿಯು ಚಿನ್ನ, ಬೆಳ್ಳಿ, ಶಿಲ್ಪಿ: ಈತನ ಸಂಶೋಧನೆ ಚಿನ್ನ, ಬೆಳ್ಳಿ, ಸಿಂಹಾಸನ, ಕಿರೀಟ, ರತ್ನಾಭರಣಗಳು, ಚಿನ್ನದರಥ, ದೇವರ ಮೂರ್ತಿಗಳು, ಮಹಿಳೆಯರಿಗೆ ಮಂಗಳಕರವಾದ ತಾಳಿ, ಕಾಲುಂಗುರ, ಓಲೆ, ಕಂಠಿಹಾರ, ಮೊದಲಾದ ಆಭರಣಗಳ ನಿರ್ಮಾಣ ಸುಪರ್ಣ ಮಹರ್ಷಿಯ ಸೃಷ್ಟಿ.

"ಶಿವಸ್ವರೂಪಿಯಾದ ವಿಶ್ವಕರ್ಮನು ಮೊದಲು ಹುಟ್ಟುತ್ತಾನೆ. ನಂತರ ಇಡೀ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಗಾಳಿ, ಬೆಂಕಿ, ನೀರು, ಭೂಮಿ, ಆಕಾಶಗಳನ್ನು ಸೃಷ್ಟಿಸಿ ಆನಂತರ ಮನುಷ್ಯರನ್ನು ಸೃಷ್ಟಿಸಿ ಅವರ ವಾಸಕ್ಕೆ ಯೋಗ್ಯವಾದ ಮನೆ ವ್ಯವಸಾಯಕ್ಕೆ ಬೇಕಾದ ಉಪಕರಣಗಳು ಮುಂತಾದವುಗಳನ್ನು ಸೃಷ್ಟಿಸಿಕೊಡುತ್ತಾನೆ ಎಂಬ ನಂಬಿಕೆ ವಿಶ್ವಕರ್ಮರಲ್ಲಿದೆ."

"ಮನು ನಾಮಕನಾದ ಶಿವನು ಆದಿಶಕ್ತಿಯೊಡಗೂಡಿ ವಿಶ್ವಕರ್ಮನ ಪೂರ್ವಮುಖದಲ್ಲಿ ಜನಿಸಿದನು. ಮಯ ನಾಮಕನಾದ ವಿಷ್ಣುವು ಇಚ್ಚಾಶಕ್ತಿಯುಕ್ತವಾಗಿ ದಕ್ಷಿಣದ ಮುಖದಲ್ಲಿ ಜನಿಸಿದನು. ತ್ವಷ್ಟ್ರ ನಾಮಕನಾದ ಚತುರ್ಮುಖಿ ಬ್ರಹ್ಮನು ಕ್ರಿಯಾಶಕ್ತಿಯೊಡಗೂಡಿ ಪಶ್ಚಿಮದ ಮುಖದಲ್ಲಿ ಹುಟ್ಟಿದನು. ಶಿಲ್ಪಿ ನಾಮಕನಾದ ಇಂದ್ರನು ಮಯಾಶಕ್ತಿಯೊಡಗೂಡಿ ಉತ್ತರ ಮುಖದಲ್ಲಿ ಜನಿಸಿದನು"

"ಆದಿಜಾಂಬವನ ತಾತನ ಮಗ ಸೃಷ್ಟಿಕರ್ತನಾದ ವಿಶ್ವಕರ್ಮ ಎನ್ನುವ ನಂಬಿಕೆ ಕೆಲ ಕಮ್ಮಾರರಲ್ಲಿದೆ. ಆದಿಜಾಂಬವ ತಾತನು ಮೊದಲು ಹುಟ್ಟಿ ನಂತರ ಸಮಸ್ಥ ಜಗತ್ತನ್ನು ಸೃಷ್ಟಿಸಿದ. ನಂತರ ತನ್ನ ಮಗನಿಗೆ ತನ್ನ ಮೈಯ ಎಲುಬುಗಳನ್ನು ತೆಗೆದುಕೊಟ್ಟು ಆಯುಧಗಳನ್ನಾಗಿ ಮಾಡಿಕೊಂಡು ಸೃಷ್ಟಿಕಾರ್ಯದಲ್ಲಿ ನಿರತನಾಗು ಎಂದು ಆಶೀರ್ವದಿಸಿದನು. ಆ ಮೇಲೆ ವಿಶ್ವಕರ್ಮನು ತನ್ನ ಆಯುಧಗಳನ್ನು ಬಳಸಿ ಜಗತ್ತಿನ ಸಮಸ್ತ ಜನೋಪಯೋಗಿ ವಸ್ತುಗಳನ್ನು ನಿರ್ಮಾಣ ಮಾಡಿದನು. ಇಂತಹ ವಿಶ್ವಕರ್ಮನ ಒಂದು ಮುಖವಾಗಿ ಕಂಬಾರರು ಸೃಷ್ಟಿಗೊಂಡು ಲೋಹ ಕೆಲಸದಲ್ಲಿ ತೊಡಗಿದರು ಎಂದು ತಿಳಿಸುತ್ತಾರೆ".[೯]

ಮೂಲತಃ ಕಾಳಿಯೇ ತಮ್ಮ ದೈವ. ತಾವು ಪಾರ್ವತಿಯ ಸ್ವರೂಪಳಾದ ಕಾಳಿಯ ಮಕ್ಕಳು, ಕಬ್ಬಿಣ ತಮ್ಮ ದೈವ, ಕಬ್ಬಿಣವೇ ಕಾಳಿ, ಸೃಷ್ಟಿ ಕಾರ್ಯದ ಪೂರ್ವದಲ್ಲಿ ಕಾಳಿಯ ಕೈವಾಡವಿರದಿದ್ದಲ್ಲಿ ಏನು ಸಾಗದು ಎಂದು ತಿಳಿಸುತ್ತಾರೆ.

ಎ. ಇ. ರಾಬಟ್ ಅವರು ತಮ್ಮ ಕೃತಿಯಾದ Vishvakarma and Descendents ನಲ್ಲಿ"ಸೂರ್ಯವಂಶದ ಕಮ್ಮಾರರು ಸುಮಾರು ಕ್ರಿ.ಪೂ.೬೦೦ರಲ್ಲಿ ಸಿಂಹಳ ದ್ವೀಪದ ಮಹಾಂತೆಯಲ್ಲಿ ಅಂದರೆ ಇಂದಿನ ಮಂಚೊಟ್ಟಿ ಪಟ್ಟಣದಲ್ಲಿ ಆಯಸ್ಕಾಂತ ಕೋಟೆ ಕಟ್ಟಿಕೊಂಡು ಆಳ್ವಿಕೆ ಮಾಡುತ್ತಿದ್ದರೆಂದು ಉಲ್ಲೇಖಿಸಿದ್ದಾರೆ".

"ಸಾಮಾನ್ಯವಾಗಿ ವಿಶ್ವಕರ್ಮರು ಮತ್ತು ಕಮ್ಮಾರರು ತಮ್ಮ ವೃತ್ತಿಯಲ್ಲಿ ಬಳಸುತ್ತಿರುವ ಎಲ್ಲ ವಸ್ತುಗಳನ್ನು ಕಾಳಿ ಎಂದೇ ಕರೆಯುತ್ತಾರೆ. ತಿದಿಯನ್ನು ಸಿಂಹಾಸನವೆಂದು, ಬೆಂಕಿಯನ್ನು ಕಾಳಿ ಎಂದೂ, ಅಡಿಗಲ್ಲನ್ನು ಈಶ್ವರನೆಂದು, ಸುತ್ತಿಗೆಯನ್ನು ಶಿವನ ಢಮರುಗವೆಂದೂ, ಇಕ್ಕಳವನ್ನು ಆದಿಶಕ್ತಿ ಎಂದೂ, ಕಬ್ಬಿಣದ ಕೊಲನ್ನು ತ್ರಿಶೂಲವೆಂದು ತಿಳಿದುಕೊಂಡಿದ್ದಾರೆ." ಎಂದು ಜಾನ್ ಬ್ರೋವರ್ ಅಭಿಪ್ರಾಯ ಪಟ್ಟಿದ್ದಾರೆ.

**ಅಡಿಟಿಪ್ಪಣಿಗಳು:**

೧. Mujamdar G.G and Rajaguru, S N, 1966, Ashamound Excavations at Koppal Page No. 3

೨. Maekenzie, 1938, Ash Mound at Budikanam, Madras Journal of Literature and Science Vol. Ko 7

೩. Mujamdar G.G and Rajaguru, S N, 1966, Ashamound Excavations at Koppal Page No. 3

೪. Ancient India vol.4 Archaeological Survey of India
೫. ಅದೇ ಪು.೧೩
೬. Mudhol M S, 1989, A Technical Study of Matal Object from South India Megaliths, PhD.Thesis M.S.University,Baroda
೭. ವಾಸುದೇವ ಬಡಿಗೇರ, ೧೯೯೭, ಸಂಡೂರು ಪರಿಸರದ ಕಾತಿಕೇಯ ತಪೋವನ, ಪು.೫
೮. ಈಶ್ವರಪ್ಪ, ಎಂ.ಜಿ, ೧೯೯೩, ಪು.೧೩೪
೯. ಚಿದಾನಂದಮೂರ್ತಿ ಎಂ, ೧೯೯೪, ಪು. ೨೫೭
೧೦. ಆರ್.ಬಿ.ಕುಮಾರ, ೨೦೦೪, ಪು. ೩೩
೧೧. ವಾಸುದೇವ ಬಡಿಗೇರ,೧೯೯೭, ಪು. ೪೦
೧೨. ಅದೇ ಪು. ೪೦-೪೧
೧೩. ಅದೇ ಪು. ೪೧
೧೪. ಸಿದ್ಧಲಿಂಗಯ್ಯ, ೧೯೯೭, ಪು. ೩೩
೧೫. ಅದೇ, ಪು. ೩೩
೧೬. ಗಂಗಾಧರ ದೈವಜ್ಞ, ೨೦೦೨. ಪು.೮ ಮತ್ತು ೯
೧೭. ವಿಶ್ವಕರ್ಮಕಲಾ, ಪು.೧೮. ಸಂ.೪, ಸಂ.೪, ಜನವರಿ ೧೯೯೪
೧೮. ನಾಯಕ ಎನ್ ಆರ್, ೧೯೯೩, ಪು.೧೦
೧೯. ಆರ್. ಬಿ. ಕಮಾರ, ೨೦೦೪, ೩೪

## ಸಾಮಾಜಿಕ ಜೀವನ

ಮಾನವ ಹುಟ್ಟಿನಿಂದ ಸಾಯುವವರೆಗೆ ಅನೇಕ ಸಂಸ್ಕಾರಗಳಿಗೆ ಒಳಪಡುತ್ತಾನೆ. ಈ ಸಂಸ್ಕಾರಗಳು ಸಮುದಾಯಗಳಿಂದ ಸಮುದಾಯಗಳಿಗೆ ಭಿನ್ನವಾಗಿರುತ್ತದೆ. ಕಮ್ಮಾರರ ಸಮುದಾಯದವರು ಹುಟ್ಟಿನಿಂದ ಸಾಯುವವರೆಗೆ ಅನೇಕ ಸಂಸ್ಕಾರಗಳನ್ನು ತಮ್ಮದೆ ಆದ ವಿಧಿ ವಿಧಾನಗಳ ಮೂಲಕ ಆಚರಿಸಿಕೊಂಡು ಬರುತ್ತಿದ್ದಾರೆ. ಇಂದು ಕಮ್ಮಾರರು ಆಚರಿಸುವ ಆಚರಣೆಗಳಲ್ಲಿ ವೈದಿಕ ಸಂಪ್ರದಾಯ ತನ್ನ ಪ್ರಭಾವವನ್ನು ಅತ್ಯಂತ ಗಾಢವಾಗಿ ಬೀರಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಈ ಪ್ರದೇಶದಲ್ಲಿರುವ ಪುರೋಹಿತ ಶಾಹಿ ವರ್ಗದವರು ತಾವು ಬದುಕುವುದಕ್ಕಾಗಿ ಅನೇಕ ಸಮುದಾಯಗಳ ಮೇಲೆ ಅವರ ಪ್ರತಿಯೊಂದು ಆಚರಣೆಯಲ್ಲಿಯೂ ವೈದಿಕ ಸಂಪ್ರಾದಯಗಳನ್ನು ಹೇರುವ ಪ್ರಯತ್ನ ಮಾಡುತ್ತಿರುವುದು ಕಂಡುಬರುತ್ತದೆ. ಹೀಗಾಗಿ ಪರಂಪಾರನುಗತವಾಗಿ ಆಚರಿಸಿಕೊಂಡು ಬರುತ್ತಿದ್ದ ಆಚರಣೆಗಳೆಲ್ಲವೂ ಮಾಯವಾಗುತ್ತ ಅವುಗಳ ಸ್ಥಳವನ್ನು ವೈದಿಕ ಸಂಪ್ರಾದಯದ ಆಚರಣೆಗಳು ಆಕ್ರಮಿಸಿಕೊಳ್ಳುತ್ತಿವೆ. ಈ ಕಾರಣಗಳಿಂದ ಮಂಗಳೂರು ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕಮ್ಮಾರರ ಸಮುದಾಯಗಳ ಪ್ರಾಚೀನ ಆಚರಣೆಗಳೆಲ್ಲವೂ ಹೇಳಲಿಕ್ಕೆ ಹೆಸರಿಲ್ಲದಂತೆ ಮಾಯವಾಗುತ್ತಿರುವುದನ್ನು ಕಾಣುತ್ತೇವೆ. ಹುಟ್ಟಿನಿಂದ ಸಾವಿನವರೆಗಿನ ಪ್ರತಿಯೊಂದು ಆಚರಣೆಯನ್ನು ವೈದಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ಆಚರಿಸಬೇಕು ಎಂದು ಹೇಳುತ್ತಿರುವ ಪುರೋಹಿತರ ಮಾತುಗಳನ್ನು ಅಲ್ಲಗೆಳೆಲಾರದ ಸ್ಥಿತಿಯಲ್ಲಿ ಕಮ್ಮಾರರ ಸಮುದಾಯದವರಿದ್ದಾರೆ. ವೈದಿಕ ನೆಲೆಯಲ್ಲಿ ಆಚರಣೆಗಳನ್ನು ಮಾಡದೇ ಹೋದರೆ ಅಕ್ಕ ಪಕ್ಕದವರಿಂದ ಮಾತನಾಡಿಸಿಕೊಳ್ಳಬೇಕಾಗುತ್ತದೆ. ಇವರು ಅನಾಗರಿಕರು ಅಸುಂಸ್ಕೃತರು ಎಂಬ ಅಣೆಪಟ್ಟಿಯನ್ನು ಕಟ್ಟಿಸಿಕೊಂಡು ಸಮಾಜದ ಜನರ ನಿಂದನೆಗೆ ಒಳಪಡುವುದಕ್ಕಿಂತ ವೈದಿಕ ನೆಲೆಯಲ್ಲಿಯೇ ಆಚರಣೆ, ಸಂಪ್ರದಾಯಗಳನ್ನು ಅನುಸರಿಸಿದರಾಯಿತು ಎಂಬ ತೀರ್ಮಾನವನ್ನು ಈ ಕಮ್ಮಾರರ ಸಮುದಾಯ ತೆಗೆದುಕೊಂಡಂತಿದೆ. ವಿಶ್ವಕರ್ಮರ ಸಮುದಾಯದಲ್ಲಿಯೇ ಆಚಾರ್ಯರಿದ್ದಾರೆ. ಇವರು ಇಂದು ವೇದ ಸಂಸ್ಕೃತ ಅಧ್ಯಯನ ಮಾಡಿ ಪಾಂಡಿತ್ಯವನ್ನು

ಪಡೆದುಕೊಂಡು ಪುರೋಹಿತ ವೃತ್ತಿಯನ್ನು ಅನುಸರಿಸುತ್ತಿದ್ದಾರೆ. ಈ ಆಚಾರ್ಯರು ವಿಶ್ವಕರ್ಮರ ಐದು ಪಂಗಡದವರಿಗೆ ಗುರುಗಳು ಇದ್ದ ಹಾಗೆ. ಈ ಆಚಾರ್ಯರು ಹೇಳಿದಂತೆ ವಿಶ್ವಕರ್ಮರು ಪಾಲಿಸಬೇಕು. ಇಲ್ಲದಿದ್ದರೆ ಇವರು ಕೆಲ ಸಂದರ್ಭಗಳಲ್ಲಿ ಅವರ ಮನೆಯ ಪುರೋಹಿತ ಕಾರ್ಯಗಳನ್ನು ನಿರ್ವಹಿಸಲು ಹಿಂದೇಟು ಹಾಕುತ್ತಾರೆ ಎಂಬ ಕಾರಣದಿಂದ ಇಲ್ಲಿಯ ಕಮ್ಮಾರರು ಅವರ ಗುರುಗಳು ಅಂದರೆ ಕುಲದ ಆಚಾರ್ಯರು ಹೇಳಿದ ನೀತಿ ನಿಯಮಗಳನ್ನು ಚಾಚು ತಪ್ಪದೇ ಅನುಸರಿಸುತ್ತಿರುವುದನ್ನು ಕಾಣುತ್ತೇವೆ.

ಸುಸಂಸ್ಕೃತ ಮಕ್ಕಳ ಭಾಗ್ಯವನ್ನು ಪಡೆಯಬೇಕಾದರೆ ಪೂರ್ವಜನ್ಮದಲ್ಲಿ ಪುಣ್ಯ ಮಾಡಿರಬೇಕೆಂಬುದು ಕಮ್ಮಾರರಲ್ಲಿರುವ ಬಲವಾದ ನಂಬಿಕೆ. ಈ ಮಕ್ಕಳನ್ನು ಕುಲದೇವತೆಯಾದ ಕಾಳಮ್ಮ ಹಾಗೂ ವೃತ್ತಿದೈವವಾದ ವಿಶ್ವಕರ್ಮನ ಅನುಗ್ರಹದಿಂದ ಪಡೆಯಲಾಗುತ್ತದೆ ಎಂದು ತಿಳಿದುಕೊಂಡಿದ್ದಾರೆ. ಸುಸಂಸ್ಕೃತರಾದ ಮಕ್ಕಳ ಭಾಗ್ಯವನ್ನು ಪಡೆಯಬೇಕಾದರೆ ಗರ್ಭದಾನ ವಿಧಿ ಸಂಸ್ಕಾರವು ಶಾಸ್ತ್ರೋಕ್ತವಾಗಿ ನಡೆಯಬೇಕೆಂಬುದು ಇವರ ಆಸೆ. ಉತ್ತಮವಾದ ಸಂತಾನವನ್ನು ಪಡೆಯಬೇಕೆನ್ನುವ ಪುರುಷ ಋತು ಕಾಲಾವಧಿಯಲ್ಲಿ ಮಾತ್ರ ತನ್ನ ಹೆಂಡತಿಯೊಂದಿಗೆ ಸಮಾಗಮ ಹೊಂದಬೇಕು. ಸ್ತ್ರೀಗೆ ರಜೋದರ್ಶನವಾದಂದಿನಿಂದ ಹದಿನಾರು ರಾತ್ರಿಗಳವರೆಗಿನ ಅವಧಿಯ ಕಾಲವು ಋತು ಕಾಲವಾಗಿರುವುದು. ಈ ಹದಿನಾರು ರಾತ್ರಿಗಳಲ್ಲಿ ಮೊದಲ ನಾಲ್ಕು ರಾತ್ರಿಗಳಲ್ಲಿ ಋತುದಾನ ಮಾಡುವುದು ಆರೋಗ್ಯದ ದೃಷ್ಟಿಯಿಂದ ಉತ್ತಮವಲ್ಲ. ಅಲ್ಲದೆ ರಜಸ್ವಲೆಯಾದ ಸ್ತ್ರೀಯು ಈ ಅವಧಿಯಲ್ಲಿ ವಿಶ್ರಾಂತಿ ಪಡೆಯುವುದು ಅವಶ್ಯಕ ಎಂದು ಹೇಳುತ್ತಾರೆ.

ರೈತನು ಉತ್ತಮ ಬೆಳೆ ಪಡೆಯುವುದಕ್ಕಾಗಿ ಭೂಮಿಯನ್ನು ಹೇಗೆ ಹಸನಗೊಳಿಸುವನೋ ಅದೇ ರೀತಿಯಾಗಿ ಉತ್ತಮ ಸಂತಾನವನ್ನು ಪಡೆಯಲಿಕ್ಕೆ ಗರ್ಭದ ಶುದ್ಧೀಕರಣಬೇಕು. ಈ ಸಂಸ್ಕಾರದ ಮೂಲ ಉದ್ದೇಶವೆಂದರೆ ಗರ್ಭವು ಶುದ್ಧವಾಗಿ ಅಲ್ಲಿ ಬೆಳೆಯುವ ಸಂತಾನ ಸತ್ ಅಥವಾ ಪುಷ್ಟಿಗೊಂಡ ಸಂತಾನವಾಗಿರುತ್ತದೆ ಎಂಬ ನಂಬಿಕೆ ಈ ಪ್ರದೇಶದ ಪುರೋಹಿತರಲ್ಲಿದೆ. ಇದನ್ನೇ ಅವರು ಇತರೆ ಎಲ್ಲ ಸಮುದಾಯಗಳ ಮೇಲೆ ಹೇರಿ ಅವರನ್ನು ಇಂತಹ ಆಚರಣೆಗಳಲ್ಲಿ ತೊಡಗಿಕೊಳ್ಳವಂತೆ ಮಾಡುತ್ತಾರೆ. ಉತ್ತಮ ಸಂತಾನವನ್ನು ಪಡೆಯಬೇಕಾದರೆ ಪತಿ ಪತ್ನಿಯರು ಈ ಕೆಳಗೆ ವಿವರಿಸಿದಂತೆ ಸಂಸಾರ ನಡೆಸುತ್ತಿರಬೇಕು.

೧. ಹೆಂಡತಿಯು ಗಂಡನಿಗೆ ಪ್ರಿಯಳಾಗಿ ಇರಬೇಕು. ಇಲ್ಲದಿದ್ದರೆ ಅಸಂತುಷ್ಟನಾದ ಗಂಡನಿಂದ ಎಂದೆಂದಿಗೂ ಸತ್ಸಂತಾನ ಪ್ರಾಪ್ತಿಯಾಗಲಾರದು.

೨. ಪತಿ –ಪತ್ನಿಯರು ದುಷ್ಕರ್ಮಗಳನ್ನು ಮಾಡದವರೂ, ಸದಾಚಾರ ಸಂಪನ್ನರೂ ಆಗಿರಬೇಕು. ಪರಸ್ಪರ ಜಗಳ ಆಡುವವರೂ, ಪಾಪಕರ್ಮಗಳನ್ನು ಮಾಡುವವರು ಆಗಿದ್ದರೆ, ಅಂತಹ ದೋಷಗಳು ಪರಂಪರೆಯಿಂದ ಹಲವು ತಲೆಮಾರುಗಳವರೆಗೆ ಅವರ ಸಂತತಿಗೆ ಹಾನಿಯನ್ನುಂಟು ಮಾಡುತ್ತದೆ.

೩. ಆಹಾರ, ಆಚಾರ ವಿಚಾರ ಇತ್ಯಾದಿಗಳಲ್ಲಿ ದಂಪತಿಗಳು ಯಾವ ಕ್ರಮಗಳನ್ನು ಅನುಸರಿಸುತ್ತಾರೋ ಅದೇ ಕ್ರಮಗಳು, ಸ್ವಭಾವಗಳು, ಅವರ ಮಕ್ಕಳಿಗೆ ಬರುತ್ತವೆ. ಹೀಗಾಗಿ ಸತ್‌ಸಂತಾನವನ್ನು ಪಡೆಯಬೇಕಾದರೆ ಪತಿ, ಪತ್ನಿಯರು ಉತ್ತಮವಾದ ಸಂಸ್ಕಾರಗಳನ್ನು ಹೊಂದಿರಬೇಕು ಎಂದು ತಿಳಿಸುತ್ತಾರೆ.

**೩.೧ ಹುಟ್ಟು:**

ಗರ್ಭಿಣಿಯಾದ ಸ್ತ್ರೀಯನ್ನು (ಮೊದಲ ಹೆರಿಗೆಗೆ) ಹೆರಿಗೆಗೆ ತವರು ಮನೆಗೆ ಕಳುಹಿಸುವ ಸಂಪ್ರದಾಯ ಕಮ್ಮಾರರ ಸಮುದಾಯದಲ್ಲಿದೆ. ಮೊದಲನೆಯ ಹೆರಿಗೆ ಕಷ್ಟಕರವಾದದ್ದು. ತಂದೆ, ತಾಯಿ, ಅಣ್ಣ ತಮ್ಮ, ಅಕ್ಕ-ತಂಗಿಯರು, ಎಲ್ಲರೂ ಹೆರಿಗೆಯ ಸಂದರ್ಭದಲ್ಲಿ ಚೆನ್ನಾಗಿ ನೋಡಿಕೊಳ್ಳುತ್ತಾರೆ ಎಂಬ ಭಾವನೆ ಇದೆ. ಹೆಣ್ಣಿಗೆ ಗಂಡನ ಮನೆಗಿಂತಲೂ ಹೆಚ್ಚಿನ ಆತ್ಮೀಯತೆ ತನ್ನ ತವರಿನ ಮೇಲಿರುತ್ತದೆ ಮತ್ತು ತವರು ಮನೆಯವರು ನನ್ನ ಬಾಣಂತನವನ್ನು ಚೆನ್ನಾಗಿ ಮಾಡಬಲ್ಲರು ಎಂಬ ಆಸೆಗಳು ಅವಳಲ್ಲಿರುತ್ತವೆ. ಹೀಗಾಗಿ ಚೊಚ್ಚಲ ಹೆರಿಗೆಗಾಗಿ ಗರ್ಭಿಣಿಯನ್ನು ತವರು ಮನೆಗೆ ಕಳುಹಿಸುವ ಪದ್ಧತಿಯನ್ನು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲೂ ಕಾಣುತ್ತೇವೆ.

ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಕಮ್ಮಾರ ಸಮುದಾಯದವರು ಒಂದು ಕಾಲಕ್ಕೆ ಹೆರಿಗೆಯನ್ನು ನುರಿತ ಸೂಲಗಿತ್ತಿಯರಿಂದ ಮಾಡಿಸುತ್ತಿದ್ದರು. ಇಂದು ಆ ಪರಂಪರೆ ಮಾಯವಾಗುತ್ತಿದೆ. ಹೆಚ್ಚಾಗಿ ಎಲ್ಲರೂ ಹೆರಿಗೆ ಆಸ್ಪತ್ರೆಗಳಿಗೆ ಹೋಗುತ್ತಿದ್ದಾರೆ. ತೀರ ಬಡವರು ನಗರ ಪ್ರದೇಶಗಳಿಂದ ದೂರವಿದ್ದವರು, ಮನೆಯಲ್ಲಿಯೇ ಹೆರಿಗೆ ಮಾಡಿಸುತ್ತಾರೆ. ಹೆರಿಗೆ ಆದ ತಕ್ಷಣ ಮನೆಯ ಹೊಚ್ಚಲಿನ ಮುಂದೆ ಒಂದು ಗಡಿಗೆ ಅಥವಾ ತಂಬಿಗೆಯಲ್ಲಿ ಬೇವಿನ ಟೊಂಗೆಯನ್ನಿಡುತ್ತಾರೆ. ಹೀಗೆ ಮಾಡುವುದರಿಂದ ದುಷ್ಟಶಕ್ತಿಗಳು ಮನೆಯನ್ನು ಪ್ರವೇಶಿಸುವುದಿಲ್ಲ ಎಂಬ ನಂಬಿಕೆ ಇದೆ. ಈ ಸಂಪ್ರದಾಯ ಇಂದು ಹಳ್ಳಿಗಳಲ್ಲಿ ಮಾತ್ರ ಉಳಿದುಕೊಂಡಿದೆ. ಹಳ್ಳಿಗಳಲ್ಲಿರುವ ಅನೇಕ ಕಮ್ಮಾರರು ನಾಟಿ ವೈದ್ಯರಾಗಿರುವ ಬಗೆಗೂ ಮಾಹಿತಿ ದೊರೆಯುತ್ತದೆ. ಹೆರಿಗೆ ಬೇಗನೆ ಆಗದಿದ್ದರೆ ಗಿಡಮೂಲಿಕೆಗಳನ್ನು ಕೊಡುತ್ತಾರೆ. ಹೆರಿಗೆಯಾದ ತಕ್ಷಣ ಸೂಲಗಿತ್ತಿ ಮನೆಯವರಿಗೆ ಮಾಹಿತಿಯನ್ನು ಕೊಡುತ್ತಾಳೆ ಮತ್ತು ಮಗುವನ್ನು ಸ್ವಚ್ಛಗೊಳಿಸಿ ಮಾಸವನ್ನು ಗಡಿಗೆಯಲ್ಲಿ ಹಾಕಿ ಕೊಡುತ್ತಾಳೆ. ಆ ಮಾಸವನ್ನು ಮನೆಯ ಹಿತ್ತಲಲ್ಲಿ ನಾಯಿ, ನರಿ, ಬೆಕ್ಕು ನೆಲವನ್ನು ತೋಡದಂತಹ ಸ್ಥಳದಲ್ಲಿ ಆಳವಾದ ತೆಗ್ಗನ್ನು ತೆಗೆದು ಗಡಿಗೆಯ ಬಾಯಿಯನ್ನು ಮುಚ್ಚಿ, ಅದರ ಮೇಲೆ ಮಣ್ಣು ಹಾಕುತ್ತಾರೆ. ಕೆಲವರು ಬಾಳೆ ಗಿಡ ಅಥವಾ ತೆಂಗಿನ ಗಿಡವನ್ನು ಹಚ್ಚುವ ಸಂಪ್ರದಾಯ ಬೆಳೆಸಿಕೊಂಡಿದ್ದಾರೆ. ಸೂಲಗಿತ್ತಿ ಮಗುವನ್ನು ಬಚ್ಚಲ ಮನೆಗೆ ಕರೆತಂದು ಬಿಸಿ ನೀರಿನಿಂದ ಸ್ನಾನ ಮಾಡಿಸಿ, ಮಡಿಯಾದ, ಶುಭ್ರವಾದ ಬಿಳಿ ಬಟ್ಟೆಯಲ್ಲಿ ಮಗುವನ್ನು ಮಲಗಿಸುತ್ತಾರೆ. ನಂತರ ಬಾಣಂತಿಯ ಬಟ್ಟೆಗಳನ್ನು ಸ್ವಚ್ಛಗೊಳಿಸಿ ಅವಳಿಗೆ ಹಿತವಾದ ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಬಾಣಂತಿ ಹಾಗೂ ಮಗುವಿಗಾಗಿ ಪ್ರತ್ಯೇಕ ಕೋಣೆಯಲ್ಲಿ ಹೊರಸು ಹಾಕಿರುತ್ತಾರೆ. ಆ ಹೊರಸಿನ ಮೇಲೆ ಹತ್ತಿಬಟ್ಟೆಯ

ಹಾಸಿಗೆಗಳನ್ನು ಹಾಸಿರುತ್ತಾರೆ. ಬಾಣಂತಿ ಮತ್ತು ಮಗುವಿಗೆ ಲೋಭಾನ ಹಾಕಿ ಮಲಗಿಸುತ್ತಾರೆ. ಹೊರಸಿನ ಕೆಳಗೆ ಹೊಗೆಯಾಡದಿರುವ ಬೆಂಕಿಯನ್ನು ಹಾಕಿರುತ್ತಾರೆ. ಬಾಣಂತಿ ಹಾಗೂ ಮಗುವಿಗೆ ಐದು ದಿನಗಳವರೆಗೆ ಮೈಲಿಗೆ ತಗಲಿರುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಐದು ದಿನಗಳವರೆಗೆ ಬಾಣಂತಿ ಹಾಗೂ ಮಗುವನ್ನು ಯಾರೂ ಮುಟ್ಟುವುದಿಲ್ಲ. ಹೊರಗಿನಿಂದ ಬಂದವರಿಗೆ ಬಾಣಂತಿಯ ಹತ್ತಿರ ಪ್ರವೇಶ ಇರುವುದಿಲ್ಲ. ತಾಯಿ ಮಗುವಿನ ಆರೈಕೆ ನೋಡಿಕೊಳ್ಳಲು ನುರಿತ ಹೆಣ್ಣು ಮಕ್ಕಳು ಇರುತ್ತಾರೆ. ಒಂದು ವೇಳೆ ನುರಿತ ಹೆಂಗಸರು ಇರದಿದ್ದರೆ ತಮ್ಮ ಸಂಬಂಧಿಕರಲ್ಲಿರುವವರನ್ನು ಕರೆಯಿಸಿಕೊಳ್ಳುವುದುಂಟು. ಹೆರಿಗೆಯಾದ ಮನೆಯಲ್ಲಿಯ ಸದಸ್ಯರು ಅಥವಾ ಸಂಬಂಧಿಕರು ಮನೆಯ ಒಳಗಡೆ ಪ್ರವೇಶಿಸಬೇಕಾದರೆ ಹೊರಗೆ ನೀರಿನಿಂದ ಕೈಕಾಲು ಮುಖ ತೊಳೆದುಕೊಂಡೇ ಒಳಗೆ ಪ್ರವೇಶ ಮಾಡಬೇಕಾಗುತ್ತದೆ. ಈ ಸಂಪ್ರದಾಯ ಕಡ್ಡಾಯ. ಬಾಣಂತಿಗೆ ಗೋಧಿಯಿಂದ ತಯಾರಿಸಿದ ಸಜ್ಜಕ, ತುಪ್ಪ, ಮುಂತಾದ ನಿರ್ಧಿಷ್ಟ ಪಡಿಸಿದ ಆಹಾರಗಳನ್ನು ಮಾತ್ರ ಕೊಡುತ್ತಾರೆ. ಕೆಲವರು ಹೆಚ್ಚು ಪೌಷ್ಠಿಕಾಂಶವಿರುವ ಕೊಬ್ಬರಿ ಖಾರ, ಬಾಣಂತಿ ಕಡವು ಮುಂತಾದವುಗಳನ್ನು ಕೊಡುತ್ತಾರು. ಹುಟ್ಟಿದ ಮಗುವಿನ ಸಮಯ, ನಕ್ಷತ್ರ, ತಿಥಿ ನೋಡುವುದನ್ನು ಮರೆಯುವುದಿಲ್ಲ. ಐದು ದಿನಗಳವರೆಗೆ ಮನೆಯಲ್ಲಿ ಮೈಲಿಗೆ ಇರುವುದರಿಂದ ಮನೆ ದೇವರ ಪೂಜೆ ಮಾಡುವುದಿಲ್ಲ. ಆದರೆ ಕಂಬಾರಿಕೆ ಸಾಲೆಯನ್ನು ಪ್ರಾರಂಭಿಸಿರುತ್ತಾರೆ. ಐದನೆಯ ದಿನ ರಾತ್ರಿ ಸೆಟ್ಟಿವ್ವನ ಪೂಜೆ ಮಾಡುತ್ತಾರೆ. ಅಂದು ಸೆಟ್ಟಿವ್ವ ರಾತ್ರಿ ಬಂದು ಆ ಮಗುವಿನ ಹಣೆ ಬರಹ ಬರೆಯುತ್ತಾಳೆ ಎಂಬ ನಂಬಿಕೆ ಕಮ್ಮಾರರಲ್ಲಿದೆ.

ವೈದಿಕ ಸಂಪ್ರದಾಯವನ್ನು ಅನುಸರಿಸುತ್ತಿರುವ ಕಮ್ಮಾರರು ಮಗುವಿನ ಜನನವಾದ ಮೇಲೆ ಪುರೋಹಿತರನ್ನು ಮನೆಗೆ ಕರೆತಂದೊ ಅಥವಾ ಅವರ ಸಲಹೆಯಂತೆ ವಿಧಿ ಪೂರ್ವಕವಾಗಿ ಈಶ್ವರೋಪಾಸನೆ ಮಿಶ್ರಣ ಮಾಡಿಸುತ್ತಾರೆ.

ಮಗು ಹುಟ್ಟಿದ ಕೂಡಲೇ ತಂದೆಯಾದವನು ಆ ಮಗುವಿನ ಮುಖ ನೋಡಿ ಹೊಳೆಯ ಬದಿಗೆ ಹೋಗಿ (ಹೊಳೆ ಇಲ್ಲದಿದ್ದರೆ ಕೆರೆ, ಹಳ್ಳ, ಬೋರವೇಲ್, ಬಾವಿ) ಉತ್ತರಕ್ಕೆ ಮುಖಮಾಡಿ ಸ್ನಾನ ಮಾಡಿ, ಆಚಮನ ಮಾಡಿ ಚಂದನಾದಿಗಳಿಂದ ಅಲಂಕರಿಸಿಕೊಂಡು ನಾಲಮೇದನದ ಮೊದಲು ಸೂಲಗಿತ್ತಿಯನ್ನು ಹೊರುತುಪಡಿಸಿ ಇತರರು ಯಾರೂ ಮುಟ್ಟದ ಮೊಲೆಹಾಲು ಕುಡಿಯದಿರುವ ಶಿಶುವನ್ನು ಸ್ನಾನ ಮಾಡಿಸಿ ತಾಯಿಯ ಮಡಿಲಲ್ಲಿ ಪೂರ್ವ ಮುಖವಾಗಿ ಮಲಗಿಸಿ ದೇಶ ಕಾಲಾಧಿಗಳನ್ನು ಸ್ಮರಿಸಿ ಸಂಕಲ್ಪ ಮಾಡಬೇಕು. ಆ ಮೇಲೆ ತುಪ್ಪ ಹಾಗೂ ಜೇನುತುಪ್ಪವನ್ನು ಮಿಶ್ರಣ ಮಾಡಿ ಅದರಲ್ಲಿ ಚಿನ್ನವನ್ನು ತಿಕ್ಕಿ ಅದನ್ನು ಬಂಗಾರ ಅಥವಾ ಬೆಳ್ಳಿಯ ಪಾತ್ರೆ ಅಥವಾ ಲೋಟದಲ್ಲಿ ಹಾಕಿ ಮಗುವಿನ ನಾಲಿಗೆಗೆ ನೆಕ್ಕಿಸಬೇಕು ಹಾಗೂ ಮಗುವಿನ ಬಲ ಕಿವಿಯಲ್ಲಿ "ನನ್ನ ಹೆಸರು ವೇದ" ಎಂದು ಉಚ್ಛರಿಸಬೇಕು. ನಂತರ ಎಡ ಗಿವಿಯಲ್ಲಿ ಉಚ್ಛರಿಸಬೇಕು ಮತ್ತು ಮಗುವಿನ ಹೆಗಲನ್ನು ಸ್ಪರ್ಷಿಸಬೇಕು. ನಂತರ ತಾಯಿಯು ತನ್ನ ಬಲ ಮೊಲೆಯನ್ನು

ತೊಳೆದುಕೊಂಡು ಮಗುವಿಗೆ ಹಾಲು ಕುಡಿಸಲು ಹೇಳಬೇಕು. ಮಗುವಿನ ಹೊಕ್ಕಳ ಬಳ್ಳಿಯನ್ನು ಕತ್ತರಿಸುವುದಕ್ಕಿಂತ ಪೂರ್ವದಲ್ಲಿಯೇ ಈ ಸಂಸ್ಕಾರ ಮಾಡಿಸಬೇಕೆಂದು ಹೇಳುತ್ತಾರೆ. ಈ ಸಂಸ್ಕಾರ ಮಾಡುವುದರಿಂದ ಮಗುವಿನ ಆಯಸ್ಸು ವೃದ್ಧಿಯಾಗುತ್ತದೆ ಎಂಬ ನಂಬಿಕೆ ಕಮ್ಮಾರರಲ್ಲಿದೆ. ಬಾಣಂತಿಯ ತಲೆಯ ಹಿಂದೆ ನೀರಿನಿಂದ ತುಂಬಿರುವ ಕಳಸವನ್ನು ಇಡಬೇಕು. ಈ ಕಳಸ ಹತ್ತು ರಾತ್ರಿಗಳವರೆಗೆ ಇದ್ದ ಸ್ಥಳದಲ್ಲಿಯೇ ಇರಬೇಕು.

**೩.೨ ನಾಮಕರಣ:**

ಗಂಡು ಮಗುವಾಗಿದ್ದರೆ ೧೨ ನೆಯ ದಿನಕ್ಕೆ ಹೆಣ್ಣು ಮಗುವಾಗಿದ್ದರೆ ೧೩ ನೆಯ ದಿನಕ್ಕೆ ನಾಮಕರಣಶಾಸ್ತ್ರ ಮಾಡುವ ಪರಂಪರೆ ಕಮ್ಮಾರರಲ್ಲಿದೆ. ಮಗುವಿನ ಸೋದರತ್ತೆಯಾದವಳೇ ಮಗುವಿಗೆ ಹೆಸರಿಡಬೇಕೆಂಬ ನಿಯಮವಿದೆ. ನಾಮಕರಣವನ್ನು ಯಾವ ದಿನ ಯಾವ ಸಮಯಕ್ಕೆ ಮಾಡಬೇಕು ಎಂಬುದನ್ನು ಪುರೋಹಿತರಿಂದ ಕೇಳಿ ತಿಳಿದುಕೊಂಡು ಬಂದು ಆ ವಿಷಯವನ್ನು ಗಂಡಿನ ಮನೆಯವರಿಗೆ ತಿಳಿಸುತ್ತಾರೆ. ಗಂಡಿನ ಮನೆಯವರು ಮಗುವಿಗೆ ಬಂಗಾರ ಹಾಗೂ ಬೆಳ್ಳಿಯ ಒಡವೆಗಳನ್ನು ಮತ್ತು ಹೊಸ ಬಟ್ಟೆಗಳನ್ನು ತರುತ್ತಾರೆ. ಮಧ್ಯಾಹ್ನದ ಹೊತ್ತಿಗೆ ತೊಟ್ಟಿಲನ್ನು ಶೃಂಗರಿಸಿ ಮನೆಯ ತೊಲೆಗೆ ಹಗ್ಗಗಳಿಂದ ಕಟ್ಟುತ್ತಾರೆ. ಮಗುವಿನ ಸೋದರತ್ತೆಯಾದವಳು ಹೊಸ ಸೀರಿಯನ್ನುಟ್ಟುಕೊಂಡು ಮುತ್ತೈದೆಯರೊಂದಿಗೆ ಹೊಳೆ, ಬಾವಿ, ಅಥವಾ ಬೋರವೆಲ್‌ಗೆ ಹೋಗಿ ಕೊಡವನ್ನು ತೊಳೆದು ಅದಕ್ಕೆ ನೀರು ತುಂಬಿ ಅಲ್ಲಿ ಗಂಗೆಯ ಪೂಜೆ ಮಾಡಿ, ಆ ತುಂಬಿದ ಕೊಡವನ್ನು ಹೊತ್ತುಕೊಂಡು ಬರುತ್ತಾಳೆ. ಸೋದರತ್ತೆಯಾದವಳು ಗಂಗಾ ಪೂಜೆ ಮಾಡಿದ ಮೇಲೆ ಅವಳಿಗೆ ತಿನ್ನಲಿಕ್ಕೆ ಎಲೆ ಹಾಗೂ ಅಡಿಕೆ ಬೆಟ್ಟವನ್ನು ಕೊಟ್ಟಿರುತ್ತಾರೆ. ಆ ಅಡಿಕೆ ಬೆಟ್ಟವನ್ನು ಮನೆಗೆ ಬರುವುದರೊಳಗಾಗಿ ಒಡೆಯಬೇಕು ಎಂಬ ನಿಯಮವಿದೆ. ತುಂಬಿದ ಕೊಡವನ್ನು ಹೊತ್ತು ಸೋದರತ್ತೆ ಮನೆಯ ಬಾಗಿಲಿಗೆ ಬಂದಾಗ, ಬಾಣಂತಿ ಆ ಕೊಡಕ್ಕೆ ಪೂಜೆ ಮಾಡಿ ಕೊಡವನ್ನು ನಿಧಾನವಾಗಿ ಕೆಳಗಿಳಿಸಬೇಕು. ನಂತರ ತುಂಬಿದ ಕೊಡವನ್ನು ತೊಟ್ಟಿಲಿನ ಕೆಳಗೆ ಇಡುತ್ತಾರೆ ಮತ್ತೆ ಅದಕ್ಕೆ ಪೂಜೆ ಸಲ್ಲಿಸುತ್ತಾರೆ. ನಂತರ ಅತ್ತೆಯಾದವಳು ಮಗುವಿಗೆ ಐದು ದೇವರ ಹೆಸರುಗಳನ್ನಿಟ್ಟು ಕಿವಿಯಲ್ಲಿ ನಿಧಾನವಾಗಿ ಕೂಗಿ ಹೇಳುತ್ತಾಳೆ. ಮಗುವಿನ ಹೆಸರು ಹೇಳುತ್ತಿರುವ ಸಂದರ್ಭದಲ್ಲಿ ಮುತ್ತೈದೆಯರು ಹೆಸರಿಡುವವರ ಬೆನ್ನಿಗೆ ಕೈಯಿಂದ ನಿಧಾನವಾಗಿ ಗುದ್ದುತ್ತಾರೆ. ಈ ನಾಮಕರಣ ಶಾಸ್ತ್ರವಾದ ಮೇಲೆ ಬಂಧು ಬಳಗದವರು ಬಾಣಂತಿಗೆ ಮತ್ತು ಮಗುವಿಗೆ ಉಡುಗರೆಗಳನ್ನು ಕೊಡುತ್ತಾರೆ. ಎಲ್ಲರಿಗೂ ಸಿಹಿ ಊಟ ಇರುತ್ತದೆ. ನಾಮಕರಣ ಶಾಸ್ತ್ರಕ್ಕಾಗಿಯೇ ಐದು ವಿದಧ ಧಾನ್ಯಗಳಿಂದ ಕೂಡಿಸಿದ ಗುಗ್ಗರಿಯನ್ನು ತಯಾರಿಸಿರುತ್ತಾರೆ. ಅದನ್ನು ಎಲ್ಲರಿಗೂ ಹಂಚುತ್ತಾರೆ. ಸೋದರತ್ತೆಗೆ ನಾಮಕರಣ ಮಾಡಿದ್ದಕ್ಕೆ ಉಡುಗರೆಗಳನ್ನು ಕೊಡುವ ಸಂಪ್ರದಾಯವಿದೆ. ಆದರೆ ಈ ಇಂದು ಪದ್ಧತಿಯಲ್ಲಿ ಬದಲಾವಣೆಯಾಗಿರುವುದನ್ನು

ಗಮನಿಸಬಹುದು. ವೈದಿಕ ಸಂಪ್ರದಾಯದಂತೆ ನಾಮಕರಣ ಮಾಡುವ ಸಂಪ್ರದಾಯವು ಅಲ್ಲಲ್ಲಿ ಕೆಲ ಕಮ್ಮಾರರ ಕುಟುಂಬಗಳಲ್ಲಿ ಪ್ರಚಲಿತದಲ್ಲಿರುವುದು ಕಂಡು ಬರುತ್ತದೆ.

ಮಗು ಹುಟ್ಟಿದ ದಿನವನ್ನು ಸೇರಿಸಿಕೊಂಡು ಹತ್ತು ದಿನಗಳು ಕಳೆದು ಹನ್ನೊಂದನೆಯ ದಿನಕ್ಕೆ ನಾಮಕರಣ ಮಾಡುವುದು ಅತ್ಯಂತ ಸೂಕ್ತವಾದದ್ದು ಎಂದು ಆಚಾರ್ಯರು ಹೇಳಿದ್ದನ್ನೇ ಇಂದು ಕೆಲ ಪ್ರದೇಶಗಳಲ್ಲಿ ಪಾಲಿಸುತ್ತಿದ್ದಾರೆ. ಕಾರಣಾಂತರಗಳಿಂದ ಆ ದಿನ ನಾಮಕರಣ ಮಾಡಲಾಗದಿದ್ದರೆ ಮಗುವಿನ ಹುಟ್ಟಿದ ನೂರೊಂದೆನೆಯ ದಿನವಾಗಲಿ, ಶಿಶು ಜನನದ ಎರಡನೆಯ ವರ್ಷದ ಮೊದಲನೆಯ ದಿನವಾಗಲಿ ನಾಮಕರಣ ಮಾಡಬಹುದು ಎಂದು ಹೇಳುತ್ತಾರೆ. ನಾಮಕರಣದ ದಿನ ಬಂದು ಬಳಗದವರಿಗೆ , ಮಿತ್ರರಿಗೆ, ಹಿತೈಷಿಗಳಿಗೆ ಹೇಳಬೇಕು. ಮಗುವಿನ ತಂದೆ ಪುರೋಹಿತರ ಸಲಹೆಯನ್ನು ಪಡೆದು ಸ್ನಾನ ಸಂಧ್ಯಾವಂದನೆ ಮಾಡಿ ಮಗುವಿಗೆ ಅಭ್ಯಂಜನ ಸ್ನಾನ ಮಾಡಿಸಬೇಕು.

ಕಂಚಿನ ತಟ್ಟೆಯಲ್ಲಿ ಅಕ್ಕಿಯನ್ನು ಹರಡಿ ಅದರ ಮೇಲೆ ಬಂಗಾರದ ಕಡ್ಡಿಯಿಂದ "ಅಮುಕ ಕುಲದೇವತಾ ಭಕ್ತ" ಎಂಬ ಹೆಸರನ್ನು ಬರೆಯಬೇಕು. ಆ ಮೇಲೆ ಮಗು ಹುಟ್ಟಿದ ತಿಂಗಳಿಗೆ ಅನುಗುಣವಾಗಿ ಮತ್ತು ಜನ್ಮನಾಮಕ್ಕನುಗುಣವಾಗಿ ಚೈತ್ರಾದಿಯಾಗಿ ಒಂದು ಹೆಸರನ್ನು ಇಡಬೇಕು. ಆ ಮೇಲೆ ಅಭಿವಾದನ (ಜನ್ಮ ನಾಮ) ಕಾಲದಲ್ಲಿ ಉಪಯೋಗಿಸುವ ಹೆಸರನ್ನು ಮೌನವಾಗಿ ಮನಸ್ಸಿನಲ್ಲಿಯೇ ನಿರ್ಣಯಿಸಿಕೊಳ್ಳಬೇಕು. ಉಪನಯನದ ಕಾಲದಲ್ಲಿ ಈ ಹೆಸರಿನಿಂದ ಅಭಿವಾದನ ಮಾಡೆಂದು ಕುಮಾರನಿಗೆ ತಿಳಿಸಬೇಕು. ಈ ಹೆಸರನ್ನು ಮನಸ್ಸಿನಲ್ಲಿಯೇ ಸಂಕಲ್ಪಿಸಿಕೊಂಡು ವ್ಯವಹಾರಿಕವಾಗಿ ಕರೆಯಲು ಮತ್ತೊಂದು ಹೆಸರನ್ನು ಇಡಬೇಕು. ಈ ಹೆಸರಿನ ಕೊನೆಯಲ್ಲಿ ವರ್ಣಗಳಿಗೆ ಅನುಗುಣವಾಗಿ ಶರ್ಮ, ಮರ್ಮ, ಗುಪ್ತ, ದಾಸ ಎಂಬುದಾಗಿ ಸೇರಿಸಬೇಕು. ನಕ್ಷತ್ರದ ಪಾದಗಳಿಗೆ ಅನುಸಾರವಾಗಿ ಒಂದು ಹೆಸರನ್ನು ಇಡಬೇಕು.

ಈ ಎಲ್ಲಾ ಹೆಸರುಗಳನ್ನು ಬಂಗಾರದ ಕಡ್ಡಿಯಿಂದ ಅಕ್ಕಿಯ ಮೇಲೆ ಬರೆಯಬೇಕು. ಆ ಮೇಲೆ ಅವುಗಳನ್ನು ಪೂಜೆ ಮಾಡಿ ತನ್ನ ಬಲ ಭಾಗದಲ್ಲಿ ಕುಳಿತಿರುವ ಪತ್ನಿಯ ಮಡಿಲಲ್ಲಿರುವ ಮಗುವಿನ ಬಲ ಕಿವಿಯಲ್ಲಿ ಹೆಸರನ್ನು ಉಚ್ಚರಿಸಬೇಕು.

ಸಾಮಾನ್ಯವಾಗಿ ಗಂಡು ಮಗುವಿಗೆ ಸಮಕ್ಷರ ಅಂದರೆ ೨, ೪, ೬ ಅಕ್ಷರಗಳಿಂದ ಕೂಡಿದ ಹೆಸರುಗಳನ್ನು ಹೆಣ್ಣು ಮಕ್ಕಳಿಗೆ, ವಿಷಮಾಕ್ಷರ ಅಂದರೆ ೩, ೫, ೭ ಅಕ್ಷರಗಳಿಂದ ಕೂಡಿದ ಹೆಸರುಗಳನ್ನಿಡಬೇಕು. ಈ ರೀತಿ ನಾಮಕರಣ ಮಾಡುವಾಗ ಯಾವುದೇ ಹೆಸರಿನಲ್ಲಿ ಗ, ಘ, ಓ, ಜ, ಝ, ಢ, ಧ, ಣ,ದ, ನ, ಬ, ಭ, ಮ ಹಾಗೂ ಯ, ರ, ಲ, ವ ಮತ್ತು ಹ ಅಕ್ಷರಗಳು ಅಗತ್ಯವಾಗಿ ಇರಬೇಕು. ಸ್ವರಗಳಲ್ಲಿ ಯಾವುದೇ ಅಕ್ಷರಗಳು ಇರಬಹುದು. ವಿಶೇಷವಾಗಿ ಆರಂಭದ ಅಕ್ಷರವು ಒತ್ತಕ್ಷರದಿಂದ ಕೂಡಿದ್ದರೆ ಅದು ಒಳ್ಳೆಯದಲ್ಲ. ಒಟ್ಟಿನಲ್ಲಿ ಮಗುವಿನ ಹೆಸರಿನ ಅಂತ್ಯದಲ್ಲಿ ಧೀರ್ಘಸ್ವರ ಆಗಿರಬೇಕು. ಉದಾಹರಣೆ ರಾಗಿಣಿ. ಮಲಯಾವತಿ ಇತ್ಯಾದಿ.

ಹೆಣ್ಣು ಮಕ್ಕಳಿಗೆ ನಕ್ಷತ್ರದ, ವೃಕ್ಷದ, ನದಿಯ, ಪರ್ವತದ, ಪಕ್ಷಿಯ ಹೆಸರುಗಳನ್ನು ಇಡಬಾರದು. ದಾಸ್ಯ ಸೂಚಕ ಹಾಗೂ ಭಯ ಸೂಚಕ ಹೆಸರುಗಳನ್ನು ಇಡುವುದು ಇವರಲ್ಲಿ ನಿಷೇಧವಿದೆ.

ಈ ನಾಮಕರಣ ಶಾಸ್ತ್ರದ ಬಳಿಕ ಬಂದ ಅತಿಥಿಗಳಿಗೆ ಯೋಗ್ಯತೆಗನುಗುಣವಾಗಿ ಅವರನ್ನು ಸತ್ಕರಿಸಿ ಉಟೋಪಚಾರ ಮಾಡಿಸಿ ಅವರಿಗೆ ಮಗುವನ್ನು ತೋರಿಸಿ ಆಶೀರ್ವದಿಸಲು ಹೇಳಿ ಬೀಳ್ಕೊಡಬೇಕು ಎಂದು ತಿಳಿಸುತ್ತಾರೆ.

**೩.೩ ಅನ್ನಪ್ರಾಶನ ಸಂಸ್ಕಾರ:**

ಮಗು ಮೈ ತುಂಬಿಕೊಂಡು ಆರೋಗ್ಯ ಪೂರ್ಣವಾಗಿ ತೇಜಸ್ವಿಯಾಗಿ ಬೆಳೆಯಬೇಕಾದರೆ ತಾಯಿಯ ಹಾಲಿನ ಆಹಾರವಷ್ಟೇ ಸಾಲದು. ಮಗುವಿನ ಯಾವ ವಯಸ್ಸಿನಲ್ಲಿ ಅದು ಘನ ಆಹಾರವನ್ನು ಜೀರ್ಣಿಸಿಕೊಳ್ಳವುದೊ ಆ ಕಾಲಕ್ಕೆ ಘನ ಆಹಾರವನ್ನು ಕೊಡಬೇಕಾಗುತ್ತದೆ. ಸಾಮಾನ್ಯವಾಗಿ ೫ ತಿಂಗಳು ತುಂಬಿದ ಮಗು ಮೃದುವಾದ ಘನ ಆಹಾರವನ್ನು ಜೀರ್ಣಿಸಿಕೊಳ್ಳಬಲ್ಲದು. ಅದ್ದರಿಂದ ಮಗುವಿನ ಆರನೆಯ ತಿಂಗಳಿನಲ್ಲಿ ಅತ್ಯಂತ ಮಿದುವಾದ ಅನ್ನವನ್ನು ಉಣ್ಣಿಸುವ ವಿಧಿಯನ್ನು ಕಮ್ಮಾರರಲ್ಲಿ ಆಚರಿಸುವ ಪರಂಪರೆ ಇತ್ತಿತ್ತಲಾಗಿ ಬೆಳೆದು ಬಂದಿದೆ. ಈ ಪದ್ಧತಿಯನ್ನು ಮಂಗಳೂರು ಮತ್ತು ಉಡುಪಿ ಜಿಲ್ಲೆಯ ಕಮ್ಮಾರರು ಮಾತ್ರ ಅನುಸರಿಸುತ್ತಿರುವುದು ಕಂಡು ಬರುತ್ತದೆ. ಈ ವಿಧಿಯನ್ನು ಮಗುವಿನ ೬ನೆಯ ತಿಂಗಳ ಹುಟ್ಟು ಹಬ್ಬದ ದಿನದಂದು ಪುರೋಹಿತರ ಸಹಕಾರದೊಂದಿಗೆ ಆಚರಿಸಲಾಗುತ್ತದೆ.

ಮಿದುವಾದ ಅನ್ನವನ್ನು ತಯಾರಿಸಿಕೊಂಡು ಅದಕ್ಕೆ ಸ್ವಲ್ಪ ತುಪ್ಪ ಸೇರಿಸಿ ಅದನ್ನು ಚನ್ನಾಗಿ ಮಿದ್ದು ಜೇನು ತುಪ್ಪ, ತುಪ್ಪ, ಮೊಸರು, ಹಾಲು ಇವುಗಳಲ್ಲಿ ಸ್ವಲ್ಪ ಪ್ರಮಾಣದ ಅನ್ನವನ್ನು ಮಿದ್ದಿ ಮಗುವಿಗೆ ತಿನಿಸಲಾಗುತ್ತದೆ. ಈ ಅನ್ನಪ್ರಾಶನ ವಿಧಿ ಮುಕ್ತಾಯವಾದ ನಂತರ ಪುರೋಹಿತರು, ಮನೆಯಲ್ಲಿಯ ಹಿರಿಯರು ಮಗುವಿಗೆ ಅಶೀರ್ವದಿಸಬೇಕು.

**೩.೪ ಚೌಲ ಅಥವಾ ಜವುಳ ತೆಗೆಯುವ ಸಂಸ್ಕಾರ:**

ಮಗು ಹುಟ್ಟಿದ ೧ನೆಯ ವರ್ಷದಿಂದ ೩ನೆಯ ವರ್ಷದವರೆಗೆ ಜವುಳ (ಹುಟ್ಟಿದ ತಲೆಗೂದಲು) ತೆಗೆಯಿಸುವ ಸಂಪ್ರದಾಯ ಕಮ್ಮಾರರಲ್ಲಿದೆ. ಮಗುವಿನ ಜವುಳಗಳನ್ನು ಸೋದರ ಮಾವನೇ ತೆಗೆಯಬೇಕೆಂಬ ನಿಯಮ ಇವರಲ್ಲಿದೆ. ಕಮ್ಮಾರರ ಸಮುದಾಯದಲ್ಲಿ ಸೋದರತ್ತೆ ಹಾಗೂ ಸೋದರಮಾವನಿಗೆ ವಿಶೇಷವಾದ ಗೌರವಗಳನ್ನು ನೀಡಿದ್ದಾರೆ. ಜವುಳ ತೆಗೆಯುವ ಕಾರ್ಯಕ್ರಮವನ್ನು ಮನೆಯಲ್ಲಿ ಅಥವಾ ಅವರ ಕುಲದೇವತೆ, ಆರಾಧ್ಯ ದೈವದ ದೇವಸ್ಥಾನಗಳಿಗೆ ಹೋಗುವುದುಂಟು. ಜವುಳ ತೆಗೆಯಲು ಬಂಗಾರ ಅಥವಾ ಬೆಳ್ಳಿಯ ಕತ್ತರಿ ಉಪಯೋಗಿಸುತ್ತಾರೆ. ಒಳ್ಳೆಯ ಮೂಹೂರ್ತ ಮತ್ತು ತಿಥಿ ನಕ್ಷತ್ರಗಳನ್ನು ಗಮನದಲ್ಲಿಟ್ಟುಕೊಂಡು ಚೌಲ ತೆಗೆಯುವ ದಿನವನ್ನು ನಗದಿ ಪಡಿಸಿಕೊಳ್ಳುತ್ತಾರೆ. ಬಂಧು ಬಾಂಧವರಿಗೆ, ನೆಂಟರಿಗೆ ಎಲ್ಲರಿಗೂ ಬರಲಿಕ್ಕೆ ಸೂಚಿಸುತ್ತಾರೆ.

ವಿಶಾಲವಾದ ಸ್ಥಳದಲ್ಲಿ ರಂಗೋಲಿಯನ್ನು ಹಾಕಿ ಅದರ ಮೇಲೆ ಮಣೆ ಹಾಕುತ್ತಾರೆ. ಮತ್ತೊಂದೆಡೆ ಪುರೋಹಿತರು ಎರಡು ಕಲಶಗಳನ್ನಿಟ್ಟು ಅದರ ಮುಂದೆ ಯಜ್ಞವನ್ನು ಸಿದ್ಧಪಡಿಸಿ ಮಗುವಿನ ತಂದೆ, ತಾಯಿಯಿಂದ ಯಜ್ಞ ಕುಂಡದ ಹಾಗೂ ಕಲಶದ ಪೂಜೆ ಮಾಡಿಸುತ್ತಾರೆ. ನಂತರ ಮಗುವನ್ನು ತಾಯಿ ಅಥವಾ ತಂದೆಯ ತೊಡೆಯ ಮೇಲೆ ಕುಳ್ಳಿರಿಸುತ್ತಾರೆ. ನಂತರ ಸೋದರಮಾವನಾದವನು ಮೊದಲು ಎರಡು ವೀಳ್ಯದ ಎಲೆಯನ್ನು ಕತ್ತರಿಯಂತೆ ಮಡಚಿಕೊಂಡು ಮಗುವಿನ ತಲೆಯ ಮೇಲೆ ಕೊಬ್ಬರಿ ಎಣ್ಣೆ, ಗೋಮೂತ್ರ ಹಾಲು, ತುಪ್ಪ, ಸಿಂಪಡಿಸಿ ಎಲೆಯನ್ನು ಕೂದಲಿಗೆ ಮುಟ್ಟಿಸುತ್ತಾನೆ. ನಂತರ ಬಂಗಾರ ಅಥವಾ ಬೆಳ್ಳಿಯಿಂದ ತಯಾರಿಸಿದ ಕತ್ತರಿಯಿಂದ ಕೂದಲನ್ನು ಕತ್ತರಿಸುತ್ತಾನೆ.  ಮೊದಲಿಗೆ ಕತ್ತರಿಸಿದ ಕೂದಲನ್ನು ವೀಳ್ಯದೆಲೆಯಲ್ಲಿ ಹಾಕಿ ಅದನ್ನು ಬದ್ರಪಡಿಸುತ್ತಾರೆ ಮತ್ತೆ ಮಗುವಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ತೊಡಿಸುತ್ತಾರೆ. ಮುತ್ತೈದೆಯರು ಮಗುವಿಗೆ ಮತ್ತು ಮಗುವಿನ ತಂದೆ ತಾಯಿಗಳಿಗೆ ಆರತಿ ಮಾಡಿ ಉಡುಗರೆಗಳನ್ನು ಕೊಡುತ್ತಾರೆ. ಮಗುವಿನ ತಂದೆ ತಾಯಿಗಳು ಸೋದರಮಾವ ಹಾಗೂ ಸೋದರತ್ತೆಗೆ ಹೊಸ ಬಟ್ಟೆಗಳನ್ನು ನೀಡುತ್ತಾರೆ. ಈ ಸಮಾರಂಭದ ಜವಾಬ್ದಾರಿಯನ್ನು ಸಾಮಾನ್ಯವಾಗಿ ಮಗುವಿನ ತಂದೆ, ತಾಯಿಗಳು ಹೊತ್ತುಕೊಂಡಿರುತ್ತಾರೆ. ನಂತರ ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿರುತ್ತಾರೆ. ಜವುಳ ತೆಗೆಯದೆ ಮಗುವನ್ನು ಬೇರೆಯವರ ಮನೆಗೆ ಕಳುಹಿಸಬಾರದು ಎಂಬ ಪದ್ಧತಿ ಕಮ್ಮಾರರಲ್ಲಿದೆ. ಜವುಳ ತೆಗೆಯದಿದ್ದರೆ ಮಗುವಿಗೆ ಮೇಲಿಂದ ಮೇಲೆ ದೃಷ್ಟಿದೋಷವಾಗುತ್ತದೆ. ಜ್ವರ ಮೇಲಿಂದ ಮೇಲೆ ಕಾಣಿಸಿಕೊಳ್ಳುವ ಸಂಭವ ಹೆಚ್ಚಾಗಿರುತ್ತದೆ. ರಾತ್ರಿ ಹೊತ್ತಿನಲ್ಲಿ ಮಗು ಚೀರುವ, ಅಂಜುವ ಹಾಗೂ ಹಠಮಾಡುವ ಪ್ರವೃತ್ತಿ ಬೆಳೆಯುತ್ತದೆ. ಎಂಬ ನಂಬಿಕೆಗಳು ಕಮ್ಮಾರರಲ್ಲಿರುವುದು ಕಂಡು ಬರುತ್ತದೆ.

ವೈದಿಕ ಸಂಸ್ಕೃತಿಯಲ್ಲಿ ತಲೆಕೂದಲನ್ನು ಮೊದಲ ಬಾರಿಗೆ ತೆಗೆಯಿಸುವ ಕಾರ್ಯಕ್ಕೆ "ಚೂಡಕರ್ಮ" ಎಂದು ಕರೆಯುತ್ತಾರೆ. ಮಗು ಹುಟ್ಟಿದ ಮೊದಲನೆಯ ವರ್ಷದಲ್ಲಿಯೇ ಈ ಆಚರಣೆಯನ್ನು ಮಾಡಬೇಕೆಂಬುದು ನಿಯಮ. ಈ ಆಚರಣೆಯನ್ನು ಉತ್ತರಾಯಣ ಕಾಲದ ಶುಕ್ಲ ಪಕ್ಷದ ಒಂದು ಶುಭ ದಿನದಂದು ಆಚರಿಸಬೇಕು.

ಚೌಲ ತೆಗೆಯುವುದಕ್ಕಿಂತ ಪೂರ್ವದಲ್ಲಿ ಈಶ್ವರ ಸ್ತುತಿ,  ಪ್ರಾರ್ಥನೆ, ಉಪಾಸನೆ, ಹೋಮ ಮುಂತಾದ ಧಾರ್ಮಿಕ ಕಾರ್ಯಗಳನ್ನು ಪುರೋಹಿತರ ನೆರವಿನೊಂದಿಗೆ ಮಾಡಬೇಕು. ನಂತರ ಮಗುವಿನ ತಂದೆಯು ಮಗುವನ್ನು ಕ್ಷೌರಿಕನ ಮುಂದೆ ಕುಳ್ಳಿರಿಸಬೇಕು. ಕ್ಷೌರಿಕ ಮಗುವಿನ ಕೂದಲನ್ನು ತೆಗೆಯುವುದಕ್ಕಿಂತ ಮೊದಲು ದರ್ಬೆಯ ಮೂರು ಗರಿಗಳನ್ನು ತೆಗೆದುಕೊಂಡು ದರ್ಬೆಯ ಮೂಲಕ ಮಗುವಿನ ಕೂದಲನ್ನು ಹಿಡಿದು ಕತ್ತರಿಸಬೇಕು. ತಲೆಯ ಕೂದಲನ್ನು ಕತ್ತರಿಸುವಾಗ ಮೊದಲು ತಲೆಯ ಬಲಬದಿಗೆ ಇರುವ ಕೂದಲನ್ನು ಕತ್ತರಿಸಬೇಕು. ನಂತರ ಎಡಬದಿಯ ಕೂದಲನ್ನು ನಂತರ ಹಿಂದೆ ಇರುವ ಕೂದಲನ್ನು ಕೊನೆಗೆ ನೆತ್ತಿಯ ಮೇಲಿನ ಕೂದಲನ್ನು ಕತ್ತರಿಸಬೇಕು.

ನೆಲದ ಮೇಲೆ ಬಿದ್ದ ಕೂದಲನ್ನು ಸಗಣಿಯಿಂದ ಒತ್ತಿ ತೆಗೆಯಬೇಕು. ಸೆಗಣಿ ಹಾಗೂ ಕತ್ತರಿಸಿದ ಕೂದಲು ಮತ್ತು ದರ್ಬೆಯನ್ನು ಕ್ಷೌರಿಕನು ದೂರಕ್ಕೆ ಕೊಂಡೊಯ್ದು ನೆಲದಲ್ಲಿ ತೆಗ್ಗು ತೆಗೆದು ಮಣ್ಣು ಮುಚ್ಚಬೇಕು. ಕ್ಷೌರಿಕನಿಗೆ ಅವರ ಯೋಗ್ಯತೆಗನುಸಾರ ಹಣ ವಸ್ತ್ರ ದವಸ ಧಾನ್ಯ ಕೊಡಬೇಕು.

ಚೌಲ ತೆಗೆದ ಮೇಲೆ ಮಗುವಿನ ತಲೆಗೆ ಬೆಣ್ಣೆ ಮತ್ತು ಮೊಸರಿನ ಕೆನೆಯ ಮಿಶ್ರಣವನ್ನು ಲೇಪಿಸಿ ಸ್ನಾನ ಮಾಡಿಸಬೇಕು ಮತ್ತು ಹೊಸ ಬಟ್ಟೆಗಳನ್ನು ತೊಡಿಸಬೇಕು. ಈ ಸಮಾರಂಭಕ್ಕೆ ಬಂದವರಿಗೆಲ್ಲ ಊಟ ಮಾಡಿಸಿ ಸತ್ಕರಿಸಿ ಕಳುಹಿಸಬೇಕು.

**೩.೫. ನಿಷ್ಕ್ರಮಣ ಸಂಸ್ಕಾರ:**

ಹುಟ್ಟಿದ ಮಗುವನ್ನು ಹೊರಗೆ ತೆಗೆದುಕೊಂಡು ಹೋಗಬೇಕೆಂದರೆ ಮೊದಲು ಆ ಮಗುವಿಗೆ ಸಂಸ್ಕಾರ ಮಾಡುವ ಪದ್ಧತಿ ಕೆಲ ಕಮ್ಮಾರರಲ್ಲಿದೆ. ಇದಕ್ಕೆ ಅವರು "ನಿಷ್ಕ್ರಮಣ ಸಂಸ್ಕಾರ" ಎಂದು ಹೇಳುತ್ತಾರೆ. ಮಗುವಿನ ಬೆಳೆವಣಿಗೆಗೆ ಶುದ್ಧವಾದ ಗಾಳಿಯೂ ಬೇಕಾಗುತ್ತದೆ. ಎಳೆಯ ಮಗುವನ್ನು ಪ್ರಾರಂಭದಲ್ಲಿ ಹೊರಗೆ ಎತ್ತಿಕೊಂಡು ಹೋಗುವುದು ಸರಿಯಲ್ಲ. ಅನೇಕ ದುಷ್ಪರಿಣಾಮಗಳು ಹಾಗೂ ಮಗುವಿಗೆ ದೃಷ್ಟಿತಾಗುವುದುಂಟು. ಈ ಕಾರಣಕ್ಕಾಗಿ ಮಗು ಜನಿಸಿದ ಮೂರು ತಿಂಗಳಾದ ಮೇಲೆ ಅಂದರೆ ಮಗು ಹುಟ್ಟಿದ ನಂತರದ ಮೂರನೆಯ ಶುಕ್ಲಪಕ್ಷದ ತೃತೀಯ ದಿನದಂದು ಈ ಸಂಸ್ಕಾರವನ್ನು ಮಾಡುತ್ತಾರೆ. ಈ ಶುಭ ದಿನದಲ್ಲಿ ಸೂರ್ಯೋದಯದ ನಂತರ ಮಗುವಿಗೆ ಶುದ್ಧೋದಕದಿಂದ (ಮಡಿ ನೀರಿನಿಂದ) ಸ್ನಾನ ಮಾಡಿಸಿ, ಹೊಸ ಬಟ್ಟೆಗಳನ್ನು ಹಾಕಿ ಅಲಂಕರಿಸಬೇಕು ಮತ್ತು ಪುರೋಹಿತರಿಂದ ಈಶ್ವರೋಪಾಸನೆ ಮಾಡಿಸಬೇಕು. ಈ ಧಾರ್ಮಿಕ ವಿಧಿಗಳನ್ನು ಪೂರೈಸಿದ ಮೇಲೆ ಮಗುವಿಗೆ ಸೂರ್ಯನ ದರ್ಶನ ಮಾಡಿಸಬೇಕು. ನಂತರ ಸ್ವಲ್ಪ ಸಮಯದವರೆಗೆ ಮಗುವನ್ನು ಶುದ್ಧವಾಯು ಇರುವ ಪ್ರದೇಶದಲ್ಲಿ ಸುತ್ತಾಡಿಸಿ ತರಬೇಕು.

**೩.೬. ಕಿವಿಚುಚ್ಚುವ ಸಂಪ್ರದಾಯ:**

ಮಗುವಿಗೆ ಕಿವಿ ಚುಚ್ಚುವ ಸಂಸ್ಕಾರವನ್ನು ಕಮ್ಮಾರರು ಮಾಡುತ್ತಾರೆ. ಕಿವಿ ಚುಚ್ಚುವ ಕ್ರಿಯೆಯನ್ನು ಮಗುವಿನ ಮೂರನೆಯ ಅಥವಾ ಐದನೆಯ ವಯಸ್ಸಿನಲ್ಲಿ ಮಾಡುತ್ತಾರೆ. ಕೆಲವರು ಮಗುವಿಗೆ ವರ್ಷ ತುಂಬುವುದರೊಳಗೆಗಾಗಿ ಕಿವಿ ಚುಚ್ಚಿಸುತ್ತಾರೆ. ಒಂದು ಶುಭ ದಿನದಲ್ಲಿ ಮಗುವಿಗೆ ಸ್ನಾನ ಮಾಡಿಸಿ ಮಡಿ ಬಟ್ಟೆಗಳನ್ನು ತೊಡಿಸಿ ಅಕ್ಕಸಾಲಿಗರ ಹತ್ತಿರ ಹೋಗಿ ಮಗುವಿನ ಬಲಕಿವಿಯನ್ನು ಮೊದಲಿಗೆ ಚುಚ್ಚಿಸಿ ನಂತರ ಎಡ ಕಿವಿಯನ್ನು ಚುಚ್ಚಿಸಬೇಕು ಮತ್ತು ಬಂಗಾರದಿಂದ ಮಾಡಿದ ಮುರುವನ್ನು ಹಾಕಿ ಬದ್ರಪಡಿಸಬೇಕು. ಮೂರು ದಿನಗಳವರೆಗೆ ಕುಂಕುಮ ಅರಿಶಿಣವನ್ನು ಕೊಬ್ಬರಿ ಎಣ್ಣೆಯಲ್ಲಿ ಕಲಿಸಿ ಕಿವಿಗೆ ಹಚ್ಚಬೇಕು.

**೩.೭.ಉಪನಯನ:**

ಕಮ್ಮಾರರ ಸಮುದಾಯದಲ್ಲಿ ಗಂಡು ಮಕ್ಕಳಿಗೆ ಎಂಟು ವರ್ಷಗಳು ತುಂಬುವುದರೊಳಗಾಗಿ ಉಪನಯನ ಮಾಡಿಸಬೇಕೆಂಬ ನಿಯಮವಿದೆ. ಪ್ರತಿಯೊಬ್ಬರಿಗೂ ಇದು ಕಡ್ಡಾಯ. ಈ ಉಪನಯನ

ಕಾರ್ಯಕ್ರಮವನ್ನು ಒಳ್ಳೆಯ ಶುಭ ಮೂಹೂರ್ತದಲ್ಲಿಯೇ ನೆರವೇರಿಸಬೇಕೆಂಬುದು ಕಡ್ಡಾಯ. ಈ ಕಾರ್ಯಕ್ರಮವನ್ನು ಮನೆಯಲ್ಲಿ, ದೇವಸ್ಥಾನಗಳಲ್ಲಿ ಆರ್ಥಿಕವಾಗಿ ಪ್ರಬಲರಾದವರು ಮಂಗಲ ಕಾರ್ಯಾಲಯಗಳಲ್ಲಿ ನಡೆಸುತ್ತಾರೆ. ಇತ್ತೀತ್ತಲಾಗಿ ಸಾಮೂಹಿಕ ಉಪನಯನಗಳನ್ನು ಮಾಡುತ್ತಿರುವುದನ್ನು ವಿಶ್ವಕರ್ಮರಲ್ಲಿ ಕಾಣುತ್ತೇವೆ. ಆರ್ಥಿಕವಾಗಿ ತೀರ ಹಿಂದುಳಿದವರು ಸಾಮೂಹಿಕ ಉಪನಯನ ನಡೆಸುವ ಸ್ಥಳಗಳಿಗೆ ಹೋಗಿ ಅಲ್ಲಿ ತಮ್ಮ ಮಕ್ಕಳ ಮುಂಜಿವೆಯನ್ನು ಮಾಡಿಸಿಕೊಂಡು ಬರುತ್ತಾರೆ.

ಉಪನಯನ ಅಥವಾ ಮುಂಜಿವೆಯನ್ನು ಯಾವಾಗ ಮಾಡಬೇಕು ಎಂಬುದನ್ನು ಪುರೋಹಿತರು ನಿರ್ಧರಿಸುತ್ತಾರೆ. ಕೆಲವರು ಉಪನಯನ ಸಂಸ್ಕಾರದ ಪ್ರತಿಕ್ರಿಯೆಯನ್ನು ಅಚ್ಚು ಹಾಕಿಸಿ ಬಂಧು ಬಳಗದವರಿಗೆ, ಮಿತ್ರರಿಗೆ ಕಳುಹಿಸಿಕೊಡುತ್ತಾರೆ. ಸಂಬಂಧಿಕರು ನೆಂಟರಲ್ಲಿ ಕೆಲವರು ಉಪನಯನದ ಹಿಂದಿನ ದಿನವೇ ಬರುವುದುಂಟು. ಉಪನಯನದ ದಿನ ಉಪನಯನ ಮಾಡಿಸಿಕೊಳ್ಳುವ ಹುಡುಗ ಬೆಳಿಗ್ಗೆಯಿಂದ ಉಪವಾಸವಿರಬೇಕು. ಉಪನಯನ ಮಾಡಿಕೊಳ್ಳುವ ಹುಡುಗನಿಗೆ "ವಟು" ಎಂದು ಕರೆಯುವುದುಂಟು. ಉಪನಯನ ಮಾಡುವುದನ್ನು ಮಂಗಲಕಾರ್ಯ ಎಂದು ಭಾವಿಸಿಕೊಳ್ಳುವರು. ಮೂಹೂರ್ತಕ್ಕೆ ಮೊದಲು ಕ್ಷೌರಿಕನು ಬಂದು ತಲೆಗೆ ಗೋಮೂತ್ರ ಸಿಂಪಡಿಸಿ ತಲೆಯ ಹಿಂಭಾಗದಲ್ಲಿ ಕೊಬ್ಬರಿ ಬಟ್ಟಲಿನ ಗಾತ್ರದಷ್ಟು ಕೂದಲನ್ನು (ನೆತ್ತಿಯ ಕೂದಲನ್ನು) ಬಿಟ್ಟು ಉಳಿದ ಎಲ್ಲ ಕೂದಲನ್ನು ತೆಗೆಯುತ್ತಾನೆ. ತಲೆಯನ್ನು ನುಣ್ಣಗೆ ಮಾಡುತ್ತಾನೆ. ನಂತರ ಅವನಿಗೆ ಸ್ನಾನ ಮಾಡಿಸಿ ಚಿಕ್ಕ ಬಿಳಿ ಪಂಚೆಯನ್ನು ತೊಡಿಸಿ ಹೆಗಲಿಗೆ ಶಲ್ಯ ಹಾಕಿ, ಆಚಾರ್ಯರ ಮುಂದೆ ಕುಳ್ಳರಿಸುತ್ತಾರೆ. ಈ ಹುಡುಗನ ಪಕ್ಕದಲ್ಲಿ ತಂದೆ ತಾಯಿ ಕುಳಿತುಕೊಳ್ಳತ್ತಾರೆ. ಸುತ್ತಲೂ ರಂಗೋಲಿ ಹಾಕಿದ ಯಜ್ಞಕುಂಡದ ಮುಂದೆ ಕುಳಿತ ಆಚಾರ್ಯರು ನಾಲ್ಕು ಕಲಶಗಳನ್ನು ಸ್ಥಾಪನೆ ಮಾಡಿರುತ್ತಾರೆ. ಎರಡು ಕಲಶಗಳನ್ನು ಹೊಸದಾದ ಬಿದಿರಿನ ಮೊರದಲ್ಲಿಯೂ ಇನ್ನೆರಡು ಕಲಶಗಳನ್ನು ಮೊರದ ಅಕ್ಕ ಪಕ್ಕದಲ್ಲಿ ಸ್ಥಾಪಿಸಿ, ಸುತ್ತಲೂ ರಂಗೋಲಿಯನ್ನು ಹಾಕಿರುತ್ತಾರೆ. ಶಾಸ್ತ್ರೋಕ್ತವಾಗಿ ವಟು ಹಾಗೂ ಅವನ ತಂದೆ ತಾಯಿಗಳಿಂದ ಪೂಜೆ ಮಾಡಿಸಿ ಯಜ್ಞಕ್ಕೆ ಆಹುತಿಯನ್ನು ಕೊಡುತ್ತಾರೆ. ನಂತರ ಆಚಾರ್ಯರು ಮಗುವಿನ ಬಲ ಕಿವಿಯಲ್ಲಿ ಗಾಯತ್ರಿ ಮಂತ್ರವನ್ನು ಗೌಪ್ಯವಾಗಿ ಹೇಳಿ ಅವನಿಗೆ ಜನಿವಾರ ಅಂದರೆ ಬ್ರಹ್ಮೋಪತೀತವನ್ನು ಕೊರಳಿಗೆ ಹಾಕುತ್ತಾರೆ. ನಂತರ ವಟುವಿನ ಕೈಯಲ್ಲಿ ಜೋಳಿಗೆ, ಬೆತ್ತ ಮತ್ತು ಅರಳೀ ಮರದ ಟೊಂಗೆಯನ್ನು ಕೊಟ್ಟು "ಕಾಸಿಗೆ ವಿದ್ಯೆ ಕಲಿಯಲಿಕ್ಕೆ ಹೋಗುತ್ತಿದ್ದೇನೆ, ವಿದ್ಯಾದಾನ ಪಡೆಯುವುದಕ್ಕಾಗಿ ಭಿಕ್ಷೆ ನೀಡಿರಿ ಎಂದು ಅಲ್ಲಿ ಸೇರಿದ ಬಂಧು ಮಿತ್ರರನ್ನು, ಸಂಬಂಧಿಕರನ್ನು ಕೇಳುತ್ತಾನೆ." ಅವರೆಲ್ಲರೂ ಅವನ ಜೋಳಿಗೆಗೆ ೫, ೧೦, ೨೦, ೫೦, ೧೦೦ ರೂಪಾಯಿಗಳನ್ನು ಹಾಕುತ್ತಾರೆ. ಹೀಗೆ ಭಿಕ್ಷೆ ಬೇಡಿಕೊಂಡು ಬಂದ ಮೇಲೆ ವಟು ಮತ್ತೆ ಆಚಾರ್ಯರ ಮುಂದೆ ಕುಳಿತುಕೊಳ್ಳುತ್ತಾನೆ. ಆಚಾರ್ಯರು ಸಂಧ್ಯಾವಂದನೆ, ಆಚಮನ ನಿತ್ಯಕರ್ಮಗಳ ಬಗೆಗೆ ಬೋಧನೆ ಮಾಡಿ, ನಾಲಿಗೆಗೆ ಊದುಬತ್ತಿಯ ತುದಿಯಲ್ಲಿರುವ ಬೆಂಕಿಯನ್ನು

ಹಚ್ಚಿ ನಂತರ ಅವನಿಗೆ ಗೋಮೂತ್ರ ಕೊಟ್ಟು ಶುದ್ಧೀಕರಿಸುತ್ತಾರೆ. ನಂತರ ಮಂತ್ರಾಕ್ಷತೆಯನ್ನು ಹಾಕಿ ಮಗುವಿಗೆ ಎಲ್ಲರೂ ಆಶೀರ್ವದಿಸುತ್ತಾರೆ. ಉಪನಯನ ಮಾಡಿಸಿಕೊಂಡವರಿಗೆ ಉಡುಗರೆಗಳನ್ನು ಕೊಡುತ್ತಾರೆ. ನಂತರ ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿರುತ್ತಾರೆ. ಈ ಉಪನಯನ ಸಂಸ್ಕಾರವನ್ನು ಮಾಡಿಸಿಕೊಳ್ಳದೇ ಇರುವವರು ಮದುವೆಯಾಗಲು ಅಯೋಗ್ಯರು, ಅನರ್ಹರು ಎಂಬ ಪರಿಕಲ್ಪನೆ ಕಮ್ಮಾರರಲ್ಲಿದೆ. ಉಪನಯನ ಮಾಡಿಸಿಕೊಳ್ಳದೇ ತೀರಿಕೊಂಡರೆ ಅವರಿಗೆ ಮೋಕ್ಷ ದೊರೆಯುವುದಿಲ್ಲ ಎಂಬ ಬಲವಾದ ನಂಬಿಕೆಯೂ ಇದೆ. ಕೆಲವರು ಮದುವೆಯ ಸಂದರ್ಭದಲ್ಲಿ ತಮ್ಮ ಮಕ್ಕಳ ಉಪನಯನ ಮಾಡಿಸುವುದುಂಟು. ಈ ಆಚರಣೆಯ ಮೂಲಕ ಕಮ್ಮಾರರು ತಮ್ಮ ಮಕ್ಕಳಿಗೆ ತಮ್ಮ ಸಮುದಾಯದ ಆಚಾರ, ವಿಚಾರ, ವಿಧಿ ವಿಧಾನಗಳ ಚೌಕಟ್ಟಿನಲ್ಲಿ ಬದುಕುವ ರೀತಿ ನೀತಿಗಳನ್ನು ಹೇಳಿಕೊಡುತ್ತಾರೆ. ಈ ಸಂಸ್ಕಾರ ಮಾಡಿಸಿಕೊಂಡ ಮೇಲೆ ಅವರು ಸತ್ಯ, ಧರ್ಮ, ಅಹಿಂಸೆಯಿಂದ ನಡೆಯಬೇಕು. ಗುರು ಹಿರಿಯರಲ್ಲಿ ಭಕ್ತಿ ಶ್ರದ್ಧೆಯಿಂದ ನಡೆದುಕೊಳ್ಳಬೇಕು ಎಂದು ಬೋಧಿಸಲಾಗುತ್ತದೆ.

ಉಡುಪಿ ಮತ್ತು ಮಂಗಳೂರಿನ ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಮತ್ತು ವೈದಿಕ ಸಂಪ್ರದಾಯಕ್ಕೆ ಬದ್ಧರಾಗಿರುವ ಕೆಲ ಕಮ್ಮಾರರ ಸಮುದಾಯಗಳಲ್ಲಿ ಕಂಡು ಬರುವ ಉಪನಯನದ ಸಂಸ್ಕಾರದ ವಿಧಿಕ್ರಿಯೆಗಳು ಇತರರಿಗಿಂತ ಭಿನ್ನವಾಗಿರುವುದು ಕಂಡು ಬರುತ್ತದೆ.

ಉಪನಯನ ಎಂದರೆ ಗಂಡು ಮಗುವಿಗೆ ದೀಕ್ಷೆ ನೀಡಿ ಆ ಹುಡುಗನನ್ನು ಆಚಾರ್ಯರ ಬಳಿ ಕರೆದೊಯ್ದು ಅಧ್ಯಯನಕ್ಕಾಗಿ ಬಿಡುವುದು ಎಂಬ ಅರ್ಥದಲ್ಲಿ ವಿವರಿಸುತ್ತಾರೆ. ಮಕ್ಕಳು ದೊಡ್ಡವರಾಗುತ್ತಿದ್ದಂತೆಯೇ ಅವರನ್ನು ವಿದ್ಯಾಭ್ಯಾಸಕ್ಕಾಗಿ ಗುರುಕುಲಗಳಿಗೆ ಕಳುಹಿಸುವ ಪ್ರಾಚೀನ ಪರಂಪರೆಯನ್ನು ಈ ಮೂಲಕ ಆಚರಿಸಲಾಗುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಮಗುವಿಗೆ ಉಪನಯನಕ್ಕಿಂತ ಪೂರ್ವ ಆಚರಿಸಿಕೊಳ್ಳುವ ಎಲ್ಲ ಸಂಸ್ಕಾರಗಳನ್ನು ತಂದೆಯಾದವನು ಮಾಡಬೇಕು. ಉಪನಯನದಿಂದ ಪ್ರಾರಂಭವಾಗುವ ಎಲ್ಲ ಆಚರಣೆ, ಸಂಸ್ಕಾರಗಳನ್ನು ಆಚಾರ್ಯರೇ ನೆರವೇರಿಸಬೇಕು ಎಂಬ ನಿಯಮ ಕಮ್ಮಾರರಲ್ಲಿದೆ. ಪ್ರಾಚೀನ ಕಾಲದಲ್ಲಿ ಸಾಮಾನ್ಯವಾಗಿ ವಿಶ್ವಕರ್ಮರು ತಮ್ಮ ಗಂಡು ಮಕ್ಕಳನ್ನು ವೇದಾಧ್ಯಯನಕ್ಕಾಗಿ ಆಚಾರ್ಯರ ಹತ್ತಿರ ಅಂದರೆ ಗುರುಕುಲಕ್ಕೆ ಕಳುಹಿಸುತ್ತಿದ್ದರು. ಈಗ ಆ ಪದ್ಧತಿ ಇಲ್ಲದೇ ಇರುವುದರಿಂದ ತಂದೆಯಾದವ ಮಕ್ಕಳಿಗೆ ಶಿಕ್ಷಣ ಕೊಡಿಸುವ ಜವಾಬ್ದಾರಿಯನ್ನು ಹೊತ್ತುಕೊಂಡಿರುತ್ತಾನೆ. ಗಾಯತ್ರಿ ದೇವಿಯಿಂದಲೇ ವೇದಾಧ್ಯಯನ (ಶಿಕ್ಷಣ) ಆರಂಭವಾಗುವುದರಿಂದ ಮತ್ತು ಈ ಸಂಸ್ಕಾರದಲ್ಲಿ ಅದನ್ನು ನೆರವೇರಿಸುವುದರಿಂದ ಉಪನಯನ ಕಾರ್ಯಕ್ಕೆ ಹೆಚ್ಚಿನ ಮಹತ್ವ ಬಂದಿದೆ.

ತಂದೆ ತಾಯಿಗಳಿಂದ ಮನುಷ್ಯ ಶರೀರ ಪ್ರಾಪ್ತವಾಗುತ್ತದೆ. ಉಪನಯನದಿಂದ "ದ್ವಿಜತ್ವವು" ಎರಡನೆಯ ಜನ್ಮವು ಲಭಿಸುತ್ತದೆ. ಈ ಜನ್ಮದಲ್ಲಿ ವೇದಾಧ್ಯಯನ ಮಾಡಿಸುವ ಆಚಾರ್ಯನೇ ತಂದೆ. ಗಾಯತ್ರಿ ಮಾತೆಯೇ ತಾಯಿ. ಈ ನೂತನ ಮಾತಾಪಿತರ ರಕ್ಷಣೆಯಲ್ಲಿ ವಟು ತನ್ನ

ಪುರೋಭಿವೃದ್ಧಿಯನ್ನು ಸಾಧಿಸಬೇಕು. ತಂದೆ ತಾಯಿಗಳ ಆಸರೆ ಇಲ್ಲದ ಮಗುವು ಹೇಗೆ ಬದುಕಲಾರದೋ ಹಾಗೆಯೇ ಅಧ್ಯಯನ ಮಾಡಿಸುವ ಆಚಾರ್ಯ ತಂದೆಯ ಸ್ಥಾನವನೂ ಹಾಗೂ ಗಾಯತ್ರಿದೇವಿ ತಾಯಿಯ ಸ್ಥಾನದಲ್ಲಿದ್ದು, ಮಗುವಿನ ಆರೋಗ್ಯ, ಶಿಕ್ಷಣದ ಜವಾಬ್ದಾರಿ ಹೊತ್ತುಕೊಳ್ಳುತ್ತಾರೆ. ಸಂಧ್ಯಾವಂದನ, ಗಾಯತ್ರಿ ಜಪ ಇತ್ಯಾದಿಗಳನ್ನು ತಪ್ಪದೇ ಮಾಡಲೇಬೇಕೆಂಬ ನಿಯಮವಿದೆ. ವ್ಯಕ್ತಿಯ ಸಮಗ್ರ ಜೀವನವನ್ನು ರೂಪಿಸುವ ಈ ಸಂಸ್ಕಾರ (ಉಪನಯನ) ಅತ್ಯಂತ ಅವಶ್ಯಕವೂ ಅನಿವಾರ್ಯವೂ ಆಗಿದೆ.

**೩.೭.೧. ಉಪನಯನ ಸಂಸ್ಕಾರವಾಗದಿದ್ದರೆ ಪ್ರಾಯಶ್ಚಿತ್ತ:**

ತಂದೆ ಹಾಗೂ ಅಜ್ಜ ಅವರು ಮಕ್ಕಳಿಗೆ ಉಪನಯನ ಮಾಡದಿದ್ದರೆ ಅವರನ್ನು ಬ್ರಹ್ಮಪಾತಕಿಗಳೆಂದು ತಿಳಿದು ಅವರ ಸಂಪರ್ಕವನ್ನು ಬಿಡಬೇಕು. ಅವರೊಡನೆ ಭೋಜನ, ವಿವಾಹ ಮುಂತಾದ ಸಂಬಂಧಗಳನ್ನಿಡಕೂಡದು. ಉಪನಯನ ಕಾಲ ಮೀರಿದ್ದರೆ ಒಂದು ಋತುವಿನಷ್ಟು ಕಾಲ ತ್ರೈವಿದ್ಯಕ ಬ್ರಹ್ಮಚರ್ಯವನ್ನು ಆಚರಿಸಿ, ನಂತರ ಉಪನಯನ ಮಾಡಬೇಕು. ಉಪನಯನ ಆಗದೇ ಇರುವವರಿಗೆ ಅವರು ಬಯಸಿದರೆ ಪ್ರಾಯಶ್ಚಿತ್ತ ಮಾಡಬೇಕು. ಒಂದು ವರ್ಷಕಾಲ ಮೀರಿದ್ದರೆ ಒಂದು ಋತುವಿನ ಪ್ರಾಯಶ್ಚಿತ್ತ ಮಾಡಬೇಕು.

**೩.೭.೨. ಉಪನಯನ ಸಂಸ್ಕಾರ ನಿರ್ಣಯ:**

ಎಂಟನೆಯ ವರ್ಷದಲ್ಲಿ ಹುಡುಗನಿಗೆ ಉಪನಯನ ಮಾಡಬೇಕು. ಮನುವಿನ ಪ್ರಕಾರ ಬ್ರಾಹ್ಮಣನಿಗೆ ಎಂಟನೆಯ ವರ್ಷದಲ್ಲಿ, ಕ್ಷತ್ರೀಯನಿಗೆ ಹನ್ನೊಂದನೆಯ ವರ್ಷದಲ್ಲಿ, ವೈಶ್ಯನಿಗೆ ಹನ್ನೆರಡನೆಯ ವರ್ಷದಲ್ಲಿ ಉಪನಯನ ಮಾಡಬೇಕು. ಇದು ಸಾಧ್ಯವಾಗದಿದ್ದರೆ ಬ್ರಾಹ್ಮಣನಿಗೆ ೧೬ ವರ್ಷ, ಕ್ಷತ್ರೀಯನಿಗೆ ೨೨, ವೈಶ್ಯನಿಗೆ ೨೪ ವರ್ಷದಲ್ಲಿ ಮಾಡಬೇಕು. ಈ ಅವಧಿಯನ್ನೂ ಮೀರಿದರೆ ಅಂಥವನು ವೇದಾಧ್ಯಯನಕ್ಕೆ ಅನರ್ಹನಾಗುತ್ತಾನೆ. ಅಂತವರೊಡನೆ ವಿವಾಹ ಮತ್ತು ಇತರೆ ಯಾವುದೇ ಸಂಬಂಧಗಳನ್ನು ಬೆಳೆಸಲಾರದು ಎಂಬ ನಿಯಮವಿದೆ. ಬ್ರಹ್ಮತೇಜಸ್ಸನ್ನು ಇಚ್ಛಿಸುವನು ೫ನೆಯ ವರ್ಷದಲ್ಲಿ, ದ್ರವ್ಯವನ್ನು ಇಚ್ಛಿಸುವವನು ೬ ವರ್ಷದಲ್ಲಿ, ವಿದ್ಯೆಯನ್ನು ಇಚ್ಛಿಸುವವನ್ನು ೭ನೆಯ ವರ್ಷದಲ್ಲಿ, ಎಲ್ಲವನ್ನು ಪಡೆಯಲು ಇಚ್ಛಿಸುವವನು ೮ನೇ ವರ್ಷದಲ್ಲಿ, ಶಾಂತಿಯನ್ನು ಇಚ್ಛಿಸುವವನು ೯ನೆಯ ವರ್ಷದಲ್ಲಿ ಉಪನಯನ ಮಾಡಬೇಕು. ವಸಂತ ಋತುವಿನಲ್ಲಿ ಉಪನಯನ ಮಾಡುವುದು ಉತ್ತಮ. ಮಾಘ ಮಾಸದಿಂದ ಜೇಷ್ಠಮಾಸದವರೆಗೆ ಸಾಧಾರಣವಾಗಿ ಎಲ್ಲಾ ಮಾಸಗಳೂ ಉಪನಯನಕ್ಕೆ ಯೋಗ್ಯವಾದ ಸಮಯ ಎಂದು ಹೇಳುತ್ತಾರೆ.

**೩.೭.೩. ಉಪನಯನದ ಅಧಿಕಾರಿಗಳು:**

ಉಪನಯನ ಮಾಡಲು ತಂದೆಯಾದವನೆ ಮೊದಲನೆಯ ಅಧಿಕಾರಿಯಾಗಿರುತ್ತಾನೆ. ಆತನಿಲ್ಲದಿದ್ದಾಗ ಅಜ್ಜ, ಚಿಕ್ಕಪ್ಪ, ಅಣ್ಣ, ದೊಡ್ಡಪ್ಪ, ಸಗೋತ್ರದವರು ವಯಸ್ಸಿನಲ್ಲಿ ಹಿರಿಯರಾದವರೊಬ್ಬರು

ಅಂದರೆ ಉಪನಯನ ಮಾಡುವವನು ಉಪನಯನಕ್ಕೊಳಪಡುವವನಿಗಿಂತ ವಯಸ್ಸಿನಲ್ಲಿ ದೊಡ್ಡವನೆ ಆಗಿರಬೇಕು. ಕಿರಿಯನು ಹಿರಿಯನಿಗೆ ಉಪನಯನ ಮಾಡುವುದನ್ನು ನಿಷೇಧಿಸಲಾಗಿದೆ.

**೩.೭.೪. ಯಜ್ಞೋಪವೀತಧಾರಣೆ:**

ಯಜ್ಞೋಪವೀತಧಾರಣೆಯ ಹಿಂದಿನ ದಿನ ಬಾಲಕನು ಹಾಲನ್ನು ಮಾತ್ರ ಆಹಾರವಾಗಿ ತೆಗೆದುಕೊಳ್ಳಬೇಕು. ಇನ್ನಾವುದೇ ಆಹಾರ ಪದಾರ್ಥವನ್ನು ಸೇವಿಸುವಂತಿಲ್ಲ. ಸಂಸ್ಕಾರ ವಿಧಿ ಆಚರಣೆಯ ದಿನದಂದು ಬೆಳಿಗ್ಗೆ ಬಾಲಕನಿಗೆ ತಲೆಗೂದಲನ್ನು ಸಂಪೂರ್ಣವಾಗಿ ತೆಗಿಯಿಸಬೇಕು. ಅಂದರೆ ಕ್ಷೌರ ಮಾಡಿಸಬೇಕು. ಅನಂತರ ಸ್ನಾನ ಮಾಡಿಸಿ ಹೊಸ ಬಟ್ಟೆ ತೊಡಿಸಬೇಕು ಮತ್ತು ಮೃಷ್ಟಾನ್ನ ಭೋಜನ ಮಾಡಿಸಬೇಕು. ಇದನ್ನು "ಚೌಲಪಂಕ್ತಿಭೋಜನ" ಎನ್ನುವರು. ಊಟದ ನಂತರ ಯಜ್ಞೋಪವೀತ ಧಾರಣ ಸಂಸ್ಕಾರಕ್ಕಾಗಿಯೇ ಗೊತ್ತು ಪಡಿಸಿದ ವಸ್ತ್ರವನ್ನು ಮತ್ತು ಉಪವಸ್ತ್ರವನ್ನು ಬಾಲಕನಿಗೆ ತೊಡಿಸಬೇಕು. ಅನಂತರ ವಟುವಾದವನು ಯಜ್ಞೋಪವೀತವನ್ನು ಕೈಗೆ ತೆಗೆದುಕೊಂಡು ಆಚಾರ್ಯರ ಸಮ್ಮುಖದಲ್ಲಿ ಕುಳಿತುಕೊಳ್ಳಬೇಕು.

ಆಚಾರ್ಯನು ಮಂತ್ರಗಳನ್ನು ಉಚ್ಚರಿಸಿ ವಟುವಿನ ಎಡ ಭುಜದ ಮೇಲೆ ಹಾಯ್ದು ಬಲಗೈ ಕಂಕುಳ ಕೆಳಗೆ ಸೊಂಟದವರೆಗೂ ಬರುವಂತೆ ಯಜ್ಞೋಪವೀತವನ್ನು ವಟುವಿಗೆ ಧಾರಣೆ ಮಾಡಿಸುತ್ತಾನೆ. ಆ ಬಳಿಕ ಯಥಾ ರೀತಿಯಾಗಿ ಈಶ್ವರ ಸ್ತುತಿ ಪ್ರಾರ್ಥನೆ, ಉಪಾಸನೆ, ಸ್ವಸ್ತಿವಾಚನ, ಶಾಂತೀಕರಣ, ಹೋಮಾದಿ, ಧಾರ್ಮಿಕ ಕ್ರಿಯೆಗಳನ್ನು ಸಾಂಗವಾಗಿ ಮಾಡುತ್ತಾನೆ. ಹೋಮ ಪೂರ್ಣಾಹುತಿ, ಅರ್ಘ್ಯ ಪ್ರಧಾನ ಕ್ರಿಯೆ, ಸೂರ್ಯಾವಲೋಕನ ಇತ್ಯಾದಿ ಆಚರಣೆಗಳು ಮುಗಿದ ನಂತರ ಪ್ರಜ್ಞಾ ವಿಧಿಯನ್ನು ಆಚರಿಸಬೇಕು.

ಆಚಾರ್ಯನಾದವನು  ಶಿಷ್ಯನನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಆತನಿಗೆ ಯೋಗ್ಯ ಶಿಕ್ಷಣ ನೀಡುವುದಾಗಿಯೂ, ಶಿಷ್ಯಯನಾದವನು ಉತ್ತಮ ಶಿಕ್ಷಣ ಪಡೆಯುವ ಸಲುವಾಗಿ ತಾನು ಆಚಾರ್ಯನನ್ನು ಗುರುವಾಗಿ ಸ್ವೀಕರಿಸುತ್ತಿರುವುದಾಗಿಯೂ ಪ್ರತಿಜ್ಞೆ ಮಾಡಬೇಕು. ಅಲ್ಲಿಂದಾಚೆಗೆ ಬಾಲಕನ ರಕ್ಷಣೆಯ ಹೊಣೆ ಆಚಾರ್ಯನಿಗೆ ಸೇರುತ್ತದೆ.

ಈ ಪ್ರಕಾರವಾಗಿ ಉಪನಯನ ಸಂಸ್ಕಾರವನ್ನು ಮುಗಿಸಿದ ನಂತರ ಸಂಸ್ಕಾರಕ್ಕೆ ಆಗಮಿಸಿದವರನ್ನು  ಸತ್ಕರಿಸಿ ಬಿಳ್ಕೊಡಬೇಕು. ಬ್ರಹ್ಮಚರ್ಯಾಶ್ರಯವನ್ನು ಸ್ವೀಕಾರ ಮಾಡಿದ ವಟುವನ್ನು ತಂದೆ, ತಾಯಿ, ಆಚಾರ್ಯ ಬಂಧು ಮಿತ್ರರು ಆರ್ಶೀವಾದ ಮಾಡಿ ಸ್ವಗೃಹಗಳಿಗೆ ತೆರಳಬೇಕು. ಇಲ್ಲಿಗೆ ಉಪನಯನ ವಿಧಿ ಸಮಾಪ್ತಿಯಾಯಿತೆಂದು ಹೇಳಬಹುದು. ಅವಳಿ ಮಕ್ಕಳಿಗೆ ಒಂದೇ ದಿನ ಒಂದೇ ಮಂಟಪದಲ್ಲಿ ಉಪನಯನದ ಮಂಗಳಕಾರ್ಯವನ್ನು ಮಾಡಬಹುದು.

**೩.೭.೫. ಸ್ತ್ರೀಯರ ಉಪನಯನ ವಿಚಾರ:**

ಪ್ರಾಚೀನ ಕಾಲದಲ್ಲಿ ಸ್ತ್ರೀಯರಿಗೂ ಉಪನಯನ, ವೇದಾಧ್ಯಯನ, ಗಾಯತ್ರಿ ಉಪದೇಶಗಳ ಅಧಿಕಾರವಿತ್ತು. ಪ್ರೌಢ ವಿವಾಹವು ಬಳಕೆಯಲ್ಲಿರುವರೆಗೆ ಅಂದರೆ ಸುಮಾರು ಕ್ರಿ.ಶ. ೨ನೇ

ಶತಮಾನವರೆಗೆ ಸ್ತ್ರೀಯರಿಗೂ ಉಪನಯನ ಸಂಸ್ಕಾರ ನಡೆಯುತ್ತಿತ್ತು. ಬಾಣ ಭಟ್ಟನ ಕಾದಂಬರಿಯಲ್ಲಿ "ಬ್ರಹ್ಮಸ್ತೋತ್ರೇಣ ಪವಿತ್ರಕೃತಕಾಯಂ" ಎಂಬ ಸ್ತ್ರೀ ವರ್ಣನೆ ಬರುತ್ತದೆ. ನಂತರ ಬಾಲ್ಯ ವಿವಾಹ ಪದ್ಧತಿಯು ಜಾರಿಗೆ ಬಂದಾಗ ವಿವಾಹ ಸಂಸ್ಕಾರವೇ ಸಾಕು ಎಂಬ ಭಾವನೆಯಿಂದ ಸ್ತ್ರೀಯರಿಗೆ ಉಪನಯನ ಮಾಡುವ ಕ್ರಮವು ನಿಂತುಹೋಯಿತು.

ಉಪನಯನ ಸಂಸ್ಕಾರವಾದ ಮೇಲೆ ಬ್ರಹ್ಮಚರ್ಯಾಶ್ರಮವನ್ನು ಪ್ರವೇಶಿಸಿ ವಟುವು ಶಿಕ್ಷಣವನ್ನು ಪಡೆಯಬೇಕಾಗುತ್ತದೆ. ವಿದ್ಯಾಭ್ಯಾಸ ಮಾಡುವಾಗ ಆತನು ಕಠಿಣವಾದ ವ್ರತವನ್ನು ಪಾಲಿಸುತ್ತಾ ನಿಯಮ ಬದ್ಧನಾಗಿರಬೇಕು. ಆದ್ದರಿಂದಲೇ ಈ ಸಂಸ್ಕಾರವನ್ನು "ವ್ರತಬಂಧ" ಎಂದು ಕರೆಯುತ್ತಾರೆ. ಆದರೆ ಈಗ ನಡೆಯುತ್ತಿರುವ ಉಪನಯನಗಳಲ್ಲಿ ಊಟ, ಉಪಚಾರ, ಪಾಯಸ, ಭಕ್ಷ್ಯ, ಭಿಕ್ಷೆ, ವಾದ್ಯ ಇತ್ಯಾದಿಗಳ ಪ್ರದರ್ಶನವಾಗುತ್ತಿದೆಯೇ ಹೊರತು, ಈ ಸಂಸ್ಕಾರದ ಉದ್ದೇಶಗಳು ಈಡೇರುತ್ತಿಲ್ಲ.

**೩.೭.೬. ಉಪನಯನಕ್ಕೊಳಗಾದ ಬಾಲಕರು ಆಚರಿಸಬೇಕಾದ ನಿಯಮಗಳು:**

೧. ಬ್ರಹ್ಮಚರ್ಯ ವ್ರತಾಧಾರಿಯಾದ ಬಾಲಕನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಸಂಧ್ಯಾವಂದನೆ, ಸೂರ್ಯವಂದನೆ ಮಾಡಬೇಕು.

೨. ಧರ್ಮಾಚರಣೆ ಬಾಲಕನ ನಿತ್ಯ ಕರ್ಮವಾಗಿರಬೇಕು.

೩. ಆಚಾರ್ಯನು ಅಧರ್ಮವನ್ನು ಬೋಧಿಸತೊಡಗಿದರೆ ಅದನ್ನು ಸ್ವೀಕರಿಸಕೊಡದು.

೪. ಸುಳ್ಳುಗಳನ್ನು ಹೇಳಕೂಡದು.

೫. ಹಗಲಿನಲ್ಲಿ ನಿದ್ರಿಸಕೂಡದು.

೬ ಅತಿಯಾದ ಸ್ನಾನ, ಭೋಜನ, ನಿದ್ದೆ ಮತ್ತು ಜಾಗರಣೆ ಮಾಡಕೂಡದು.

೭. ಅನ್ಯರ ನಿಂದೆ ಮಾಡಕೂಡದು.

೮. ಬೆಳಗಿನ ಜಾವಕ್ಕೆ ಹಾಸಿಗೆ ಬಿಟ್ಟು ಏಳಬೇಕು.

೯. ಶೌಚಾದಿ ಕ್ರಿಯೆಗಳನ್ನು ಮುಗಿಸಿದ ಅನಂತರ ಸ್ನಾನ ಮಾಡಿ ಸಂಧ್ಯೋಪಾಸನೆ, ಈಶ್ವರ ಸ್ತುತಿ, ಪ್ರಾರ್ಥನೆ,
ಉಪಾಸನೆ ಆಚರಿಸಬೇಕು. ಇದು ನಿತ್ಯಕರ್ಮ.

೧೦. ಯೋಗಾಭ್ಯಾಸ ಮಾಡಬೇಕು.

೧೧. ಮಾದಕ ವಸ್ತುಗಳನ್ನಾಗಲಿ, ತಮೋಗುಣವನ್ನು ವೃದ್ಧಿಗೊಳಿಸುವ ಆಹಾರವನ್ನಾಗಲಿ ಸೇವಿಸಬಾರದು.

೧೨. ಮಾಂಸಾಹಾರ ನಿಷೇಧಿಸಬೇಕು.

೧೩. ಕಾಲ್ನನಡಿಗೆಯಲ್ಲಿ ನಡೆಯಬೇಕು.

೧೪. ಪಾದರಕ್ಷೆ, ಛತ್ರಿಯನ್ನು ಬಳಸಬಾರದು.

೧೫. ಆಶ್ರಮದಲ್ಲಿ ವಾಸಮಾಡಬೇಕು.

೧೬. ಉಪಸ್ಥೇಂದ್ರಿಯ ಉದ್ರೇಕವಾಗದಂತೆ ಎಚ್ಚರವಹಿಸಬೇಕು ಮತ್ತು ವೀರ್ಯ ಸ್ಖಲನ ಆಗದಂತೆ ಜಾಗರೂಕನಾಗಿರಬೇಕು

೧೭. ತೈಲಾಭ್ಯಂಜನ, ಅಂಗಮರ್ದನ ಮಾಡಿಸಬಾರದು.

೧೮. ಹುಳಿ-ಉಪ್ಪು-ಖಾರ ಅತಿಯಾಗಿ ಸೇವಿಸಬಾರದು.

೧೯. ಮಿತ ಭಾಷಿಯಾಗಿರಬೇಕು.

೨೦. ಸುಶೀಲನೂ, ಗುಣಶಾಲಿಯೂ ಆಗಿರಬೇಕು.

೨೧. ನಿತ್ಯ ಆಹಾರವನ್ನು ಭಿಕ್ಷಾಟನೆಯಿಂದ ಗಳಿಸಬೇಕು.

೨೨. ಆಚಾರ್ಯನ ಅಧೀನದಲ್ಲಿರಬೇಕು. ಉತ್ತಮ ಸಹಯೋಗದೊಂದಿಗೆ ಶಿಕ್ಷಣವನ್ನು ಪಡೆಯಬೇಕು.

೨೩. ಸ್ತ್ರೀಯ ನೆನಪು, ಸ್ತ್ರೀಯರೊಂದಿಗೆ ಸಂಭಾಷಣೆ, ಸ್ತ್ರೀಯ ಸ್ಪರ್ಶ, ಸ್ತ್ರೀಯರೊಂದಿಗೆ ಕ್ರೀಡೆ, ಸ್ತ್ರೀಯ ಆಲಿಂಗನ ಮಾಡಬಾರದು.

ಒಂದು ಕಾಲದಲ್ಲಿ ಉಪನಯನಕ್ಕೆ ಒಳಗಾದವರು ಈ ಮೇಲಿನ ಆಚರಣೆಗಳನ್ನು ಪಾಲಿಸುತ್ತಿದ್ದರು. ಈಗ ಇದರಲ್ಲಿ ೨೫% ಆಚರಿಸುತ್ತಿದ್ದಾರೆ.

**೩.೮. ಋತುಮತಿ ಪ್ರೌಢ ಸಂಸ್ಕಾರ:**

ಮಕ್ಕಳ ಬದುಕು ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಹೋಗುವಾಗ ಅನೇಕ ಆಚರಣೆ ಸಂಪ್ರದಾಯಗಳಿಗೆ ಒಳಪಡಿಸುವುದನ್ನು ಕಾಣುತ್ತೇವೆ. ಮಗುವಿನ ಹುಟ್ಟು ಕೂದಲು ತೆಗೆಸುವ, ಉಪನಯನ ಮಾಡುವ ಮತ್ತು ಹೆಣ್ಣು ಮಕ್ಕಳು ಯೌವ್ವನಾವಸ್ಥೆಗೆ ಬಂದಾಗ ಹೀಗೆ ಹತ್ತು ಹಲವಾರು ರೀತಿಯ ಆಚರಣೆಗಳನ್ನು ಕಮ್ಮಾರರ ಸಮುದಾಯದವರು ಆಚರಿಸಿಕೊಂಡು ಬರುತ್ತಿದ್ದಾರೆ.

ಕಮ್ಮಾರರು ತಮ್ಮ ಸಮುದಾಯದಲ್ಲಿಯ ಹೆಣ್ಣು ಋತುಮತಿಯಾದರೆ ಐದು ದಿನಗಳವರೆಗೆ ಮೈಲಿಗೆಯನ್ನು ಆಚರಿಸುವುದುಂಟು ಮತ್ತು ಋತುಮತಿ, ತಿಂಗಳಮುಟ್ಟು ಇವು ಪ್ರಾಕೃತಿಕ ಮೈಲಿಗೆಗಳು. ಕಮ್ಮಾರರು ಋತುಮತಿಯಾದ ಹೆಣ್ಣಿಗೆ ಅವರ ಆರ್ಥಿಕ ಸ್ಥಿತಿಗತಿಗಳನ್ನು ಅವಲಂಬಿಸಿಕೊಂಡು ಕೆಲ ಆಚರಣೆಗಳನ್ನು ಮಾಡುತ್ತಾರೆ.

ಹೆಣ್ಣು ಋತುಮತಿಯಾಗುವುದು ಪ್ರಕೃತಿಕ ಸಹಜ ನಿಯಮ "ಒಮ್ಮೆ ಹೆಣ್ಣು ಋತುಮತಿಯಾದ ಮೇಲೆ ಮಧ್ಯವಯಸ್ಸಿನಲ್ಲಿ ಆಕೆಯ ಋತುಚಕ್ರ ಸ್ಥಗಿತಗೊಳ್ಳುವವರೆಗಿನ ಘಟ್ಟವನ್ನು ಫಲವಂತಿಕೆಯ ಕಾಲ ಎಂದು ಗುರುತಿಸಲಾಗುವುದು ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟ ಮೊದಲ ಬಾರಿಗೆ ಜೈವಿಕ ಬದಲಾವಣೆ ಆಗುತ್ತಿರುವುದನ್ನು ಅನುಭವಿಸುತ್ತಾಳೆ"[೧]

ಹೆಣ್ಣು ಋತುಮತಿಯಾದರೆ ಆ ಹೆಣ್ಣು ಸಂಸಾರಸ್ಥಳಾಗಿ ತಾಯ್ತನದ ಸುಖವನ್ನು ಅನುಭವಿಸಲು ಅರ್ಹತೆ ಹೊಂದಿದ್ದಾಳೆಂದು ತಂದೆ ತಾಯಿ, ಬಂಧುಬಳಗ, ಸೋದರ ಮಾವಂದಿರು, ಬಾಲ್ಯದಲ್ಲಿಯೇ

ಮದುವೆಯಾಗಿದ್ದರೆ ಅವಳ ಅತ್ತೆ-ಮಾವ, ಗಂಡ, ಕೇರಿಯ ಎಲ್ಲರೂ ಸಂತೋಷ ಪಟ್ಟುಕೊಳ್ಳುತ್ತಾರೆ. ಅವಳಿಗಾಗಿ ಅನೇಕ ಆಚರಣೆಗಳನ್ನು ಮಾಡುತ್ತಾರೆ.

ಕಮ್ಮಾರರ ಕುಟುಂಬಗಳಲ್ಲಿ ಹೆಣ್ಣು ಋತುಮತಿಯಾದರೆ ಆ ಸುದ್ಧಿಯನ್ನು ಮೊದಲು ಅವಳ ಸೋದರಮಾವ ಹಾಗೂ ಸೋದರತ್ತೆಗೆ ತಿಳಿಸುವ ಸಂಪ್ರದಾಯ ಒಂದು ಕಾಲಕ್ಕಿತ್ತು. ಇಂದು ಈ ಪರಂಪರೆಯನ್ನು ಕೊಳ್ಳೆಗಾಲದ ಪರಿಸರದ ಕಮ್ಮಾರರಲ್ಲಿ ಅಲ್ಪಸ್ವಲ್ಪ ಪ್ರಮಾಣದಲ್ಲಿ ಉಳಿದುಕೊಂಡಿದೆ. ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳ ಕಮ್ಮಾರರಲ್ಲಿ ಈ ಪದ್ಧತಿ ಇಂದು ಮಾಯವಾಗಿದೆ. ಆದರೆ ಹೆಣ್ಣು ಋತುಮತಿಯಾದ ಸುದ್ಧಿಯನ್ನು ತಮ್ಮ ಬಂಧು-ಬಳಗದವರಿಗೆ ಹೇಳಿ ಕಳುಹಿಸುವುದುಂಟು. ಋತುಮತಿಯಾದ ಹೆಣ್ಣು ವಿದ್ಯಾಭ್ಯಾಸ ಮಾಡುತ್ತಿದ್ದರೆ ಮತ್ತು ಆ ಕುಟುಂಬದವರು ಆರ್ಥಿಕವಾಗಿ ಪ್ರಬಲರಾಗಿದ್ದರೆ ಅತ್ಯಂತ ಆತ್ಮೀಯ ಬಂಧು ಬಳಗದವರಿಗೆ ಮಾತ್ರ ವಿಷಯ ತಿಳಿಸುವರು. ಅಕ್ಕ ಪಕ್ಕದವರಿಗೂ ತಿಳಿಯದಂತೆ ಕೆಲ ಸಂಪ್ರದಾಯಗಳನ್ನು ಮನೆಯಲ್ಲಿಯೇ ಆಚರಿಸುವುದುಂಟು.

ಆಧುನಿಕ ಸಮಾಜ ಇಂದು ನಾಗಾಲೋಟದಲ್ಲಿ ಚಲಿಸುತ್ತಿದೆ. ಶಿಕ್ಷಣ ಪಡೆಯುತ್ತಿರುವ ಚಿಕ್ಕ ವಯಸ್ಸಿನ ಗಂಡು, ಹೆಣ್ಣುಗಳು ಅತ್ಯಂತ ಮುಂದುವರೆದಿದ್ದಾರೆ. ಎಂಟು ಅಥವಾ ಒಂಬತ್ತನೆಯ ತರಗತಿಯಲ್ಲಿ ಓದುತ್ತಿರುವ ಹೆಣ್ಣು ಮಕ್ಕಳು ಋತುಮತಿಯಾಗಿದ್ದಾಳೆ ಎಂದು ತಿಳಿದರೆ ಅವಳ ಜೊತೆಗೆ ವ್ಯವಹರಿಸುವ ವಿಧಾನಗಳು ಬೇರೆ ಬೇರೆಯಾಗುತ್ತವೆ. ಪ್ರೀತಿ, ಪ್ರೇಮ, ಪ್ರಣಯ ಮುಂತಾದ ಲೈಂಗಿಕತೆಯ ಉದ್ದೀಪನದ ಮಾತು ಕಥೆಗಳು ಪ್ರಾರಂಭವಾಗುತ್ತವೆ. ಗಂಡು ಹುಡುಗರು ಇಂತಹ ಹೆಣ್ಣು ಮಕ್ಕಳನ್ನು ಛೇಡಿಸಲಿಕ್ಕೆ ಪ್ರಾರಂಭಿಸುತ್ತಾರೆ. ಹೀಗಾಗಿ ಹೆಣ್ಣು ಮಕ್ಕಳು ಋತುಮತಿಯರಾದರೆ ಇತರರಿಗೆ ತಿಳಿಸುವ ಗೊಡವೆಗೆ ಹೋಗುವುದಿಲ್ಲ ಎಂದು ಕೆಲ ಕಮ್ಮಾರ ಸಮುದಾಯದ ಹಿರಿಯರು ಅಭಿಪ್ರಾಯ ಪಡುತ್ತಾರೆ.

ಒಂದು ಘಟ್ಟದಲ್ಲಿ ಕಮ್ಮಾರರು ಋತುಮತಿಯಾದ ಹೆಣ್ಣನ್ನು ಪ್ರತ್ಯೇಕವಾದ ಸ್ಥಳದಲ್ಲಿ ಐದು ದಿನಗಳವರೆಗೆ ಇಡುತ್ತಿದ್ದರು. ಇಂದು ಮನೆಯಲ್ಲಿಯೇ ಅವಳು ಯಾರ ಕಣ್ಣಿಗೂ ಕಾಣದಂತೆ ಇಡುತ್ತಾರೆ. ಋತುಮತಿಯಾದ ತಕ್ಷಣ ಮನೆಯಲ್ಲಿಯ ಹಿರಿಯ ಹೆಣ್ಣುಮಕ್ಕಳು, ತಾಯಿ, ಅಜ್ಜಿ, ಅಥವಾ ಸೋದರತ್ತೆ ಅವಳ ತಲೆಗೆ, ದೇಹಕ್ಕೆ ಕೊಬ್ಬರಿ ಎಣ್ಣೆ ಹಚ್ಚಿ ನೀರಿನಲ್ಲಿ ಬೇವಿನ ಎಲೆ ಬೆರೆಸಿ ಸ್ನಾನ ಮಾಡಿಸಿ ಮಡಿ ಬಟ್ಟೆಗಳನ್ನು ತೊಟ್ಟುಕೊಳ್ಳಲು ಕೊಡುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣು ಹಸೆ ಮೈಯಲ್ಲಿರುತ್ತಾಳೆಂದು ತಿಳಿದು ಅವಳಿಗೆ ಅರಿಶಿಣವನ್ನು ಕೆಲವರು ಹಚ್ಚುತ್ತಾರೆ. ಕೆಲ ಕುಟುಂಬಗಳಲ್ಲಿ ಮುತ್ತೈದೆಯರೇ ಋತುಮತಿ ಹೆಣ್ಣಿಗೆ ನೀರು ಹಾಕಿ ಸ್ನಾನ ಮಾಡಿಸಬೇಕೆಂಬ ನಿಯಮವಿದೆ. ಋತುಮತಿಗೆ ಸ್ನಾನ ಮಾಡಿಸಿದವರು ಮತ್ತೆ ಸ್ನಾನ ಮಾಡಬೇಕು. ಐದು ದಿನಗಳವರೆಗೆ ಋತುಮತಿಯಾದ ಹೆಣ್ಣಿಗೆ ತಲೆಗೆ ಸ್ನಾನ ಮಾಡಿಸುವ ಸಂಪ್ರದಾಯವನ್ನು ಕಮ್ಮಾರರಲ್ಲಿ ಕಾಣುತ್ತೇವೆ. ಈ ಸಂದರ್ಭದಲ್ಲಿ ಅವಳನ್ನು ಯಾರೂ ಮುಟ್ಟುವುದಿಲ್ಲ. ಐದು ದಿನಗಳವರೆಗೆ ದೂರದಿಂದಲೇ

ಅವಳಿಗೆ ಪೌಷ್ಠಿಕಾಂಶ ಉಳ್ಳ ಆಹಾರವನ್ನು ಕೊಡುತ್ತಾರೆ. ಐದನೆಯ ದಿನದ ರಾತ್ರಿ ಅವಳಿಗೆ ಎಣ್ಣೆ ಅರಿಶಿಣ ಹಚ್ಚಿ ಮುತ್ತೈದೆಯರು ಸ್ನಾನ ಮಾಡಿಸಿ, ಹೊಸ ಸೀರೆಯನ್ನುಡಿಸಿ ಕಣ್ಣಿಗೆ ಕಪ್ಪು, ಕೆನ್ನೆಗಳಿಗೆ ಅರಿಶಿಣ, ಹಣೆಗೆ ಕುಂಕುಮ ಹಚ್ಚಿ, ಹೂವು ಮುಡಿಸಿ ಆರತಿ ಮಾಡಿ, ತೆಂಗು, ಎಲೆ, ಅಡಿಕೆ, ಬಾಳೆಹಣ್ಣು, ನಿಂಬೆಹಣ್ಣು, ಅರಿಶಿಣಬೇರು, ಉತ್ತತ್ತಿ, ಅಕ್ಕಿ ಹಾಕಿ ಉಡಿ ತುಂಬುತ್ತಾರೆ. ರಾತ್ರಿ ವೇಳೆಗೆ ಅಲಂಕರಿಸಿದ ಮಂಟಪ ಅಥವಾ ಸೀರೆಗಳಿಂದ ಅಲಂಕರಿಸಿದ ಮಂಟಪದಲ್ಲಿ ಮಣೆ ಹಾಕಿ ಕೂರಿಸಿ ಸೋಬಾನದ ಹಾಡುಗಳನ್ನು ಹಾಡಿ ಎಲ್ಲರೂ ಆರತಿ ಮಾಡುತ್ತಾರೆ. ಈ ಪದ್ಧತಿಯನ್ನು ಕೆಲವರು ೭, ೯ಹಾಗೂ ೧೧ನೇ ದಿನದವರೆಗೆ ಮಾಡುತ್ತಾರೆ.

ಹೆಣ್ಣು ಮೈನೆರೆದ ಐದನೆಯ ದಿನದಿಂದ ಇಪ್ಪತ್ತೊಂದನೆಯ ದಿನದವರೆಗೆ ಬಂಧು ಬಳಗದವರು ತಮ್ಮ ಮನೆಗಳಿಂದ ಸಿದ್ದಪಡಿಸಿದ ಊಟವನ್ನು ತಂದು ಅವಳಿಗೆ ಊಟ ಮಾಡಿಸುವ ಸಂಪ್ರದಾಯವಿದೆ. ೭, ೯ ಅಥವಾ ೧೧ನೆಯ ದಿನದವರೆಗೆ ಪ್ರತಿ ರಾತ್ರಿ ಅವಳನ್ನು ಮಂಟಪದಲ್ಲಿ ಕುಳ್ಳರಿಸಿ ಆರತಿ ಮಾಡುವ ಮತ್ತು ಅವಳ ಮನಸ್ಸನ್ನು ಸಂತೋಷಗೊಳಿಸುವ ಸೋಬಾನೆ ಪದಗಳನ್ನು ಹಾಡುತ್ತಾರೆ. ಅವರ ಮನೆಯ ಪದ್ಧತಿಯಂತೆ ಕೊನೆಯ ದಿನ ಅಂದರೆ ೭, ೯ ಅಥವಾ ೧೧ನೇ ದಿನಗಳಲ್ಲಿಯ ಯಾವುದಾದರೂ ಒಂದು ದಿನ ಅವಳಿಗೆ ಮತ್ತೆ ಉಡಿ ತುಂಬಿ ಮನೆಯ ಆರಾಧ್ಯ ದೈವದ ಗುಡಿಗೆ ಕರೆದುಕೊಂಡು ಹೋಗುತ್ತಾರೆ. ಆ ದಿನ ಬಂಧು ಬಳಗದವರಿಗೆ, ತಮಗೆ ಹತ್ತಿರವಾದವರಿಗೆ ಊಟ ಮಾಡಿಸುತ್ತಾರೆ. ಅನೇಕರು ಋತುಮತಿ ಹೆಣ್ಣಿಗೆ ಉಡುಗರೆಗಳನ್ನು ಕೊಡುತ್ತಾರೆ.

ಇತ್ತಿತ್ತಲಾಗಿ ಈ ಆಚರಣೆ ಕಡಿಮೆಯಾಗುತ್ತಿದೆ. ಋತುಮತಿಯಾದ ಐದನೆಯ ದಿನಕ್ಕೆ ಮನೆಯಲ್ಲಿ ಅವಳಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಗಳನ್ನು ತೊಡಿಸಿ ದೇವಸ್ಥಾನಗಳಿಗೆ ಕರೆದುಕೊಂಡು ಹೋಗಿ, ಪೂಜೆ ಮಾಡಿಸಿಕೊಂಡು ಬಂದು, ಮನೆಯಲ್ಲಿ ಊಟ ಮಾಡುವ ಸಂಪ್ರದಾಯವನ್ನು ಕೆಲವರು ಮಾಡುತ್ತಿದ್ದಾರೆ.

**೩.೯. ಮದುವೆ :**

ಮದುವೆ ಎಂಬುವುದು ಸ್ವರ್ಗ ಲೋಕದಲ್ಲಿಯೇ ನಿರ್ಧಾರವಾಗಿರುತ್ತದೆ ಎಂಬ ತಿಳುವಳಿಕೆ ನಮ್ಮಲ್ಲಿದೆ. ದೇವರು ತನ್ನ ಲೋಕದಲ್ಲಿಯೇ ಒಂದು ಗಂಡಿಗೆ ಒಂದು ಹೆಣ್ಣು ಎಂದು ಹಣೆ ಬರಹ ಬರೆದಿರುತ್ತಾನೆಂಬ ಕಲ್ಪನೆಗಳು ನಮ್ಮ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಮದುವೆಯಾಗದಿದ್ದರೆ, ಮಕ್ಕಳನ್ನು ಪಡೆಯದಿದ್ದರೆ ಮುಕ್ತಿ ಸಿಗುವುದಿಲ್ಲ ಎಂಬ ಮಾತುಗಳು ನಮ್ಮ ಸಂಸ್ಕೃತಿಯಲ್ಲಿ ಕೇಳಿ ಬರುತ್ತವೆ. ವಯಸ್ಸಿಗೆ ಬಂದ ಯುವಕನೊಬ್ಬನ ಹಾರಾಟ, ಅವನು ಮಾಡುತ್ತಿರುವ ಕುಚೇಷ್ಟೆಗಳನ್ನು ಕಂಡು ಅವನಿಗೆ "ಮುಗುದಾಣ ಹಾಕಿದರೆ ಸರಿಹೋಗುತ್ತಾನೆ" ಎಂದು ಜನಪದರು ಹೇಳುವುದನ್ನು ಗಮನಿಸಿದರೆ ಮದುವೆ ಎಂಬುದರ ಮೂಲಕ ಮನುಷ್ಯನನ್ನು ಅಂಕಿತದಲ್ಲಿಟ್ಟುಕೊಳ್ಳಬಹುದು ಎಂಬುವುದು ಅನುಭವದ ಮಾತು. ಮದುವೆ ಮಾಡಿದರೆ ಹೆಂಡತಿ ಹೇಳಿದಂತೆ ಕೇಳಿಕೊಂಡು ಇರುತ್ತಾನೆ ಎಂದು ಹೇಳುವ ಮಾತುಗಳನ್ನು ಗಮನಿಸಬಹುದು. ಮದುವೆ ಮಾಡಲು ಹೆಣ್ಣಿಗೆ

ಗಂಡು, ಗಂಡಿಗೆ ಹೆಣ್ಣು ತಕ್ಕ ಕನ್ಯಾವರಾನ್ವೇಷಣೆ ಮಾಡುವುದನ್ನು ನಾವು ನಾಗರಿಕ ಸಮಾಜದಲ್ಲಿ ಕಾಣುತ್ತೇವೆ. ಸಂಸಾರ ಎಂಬ ರಥ ಸಾಗಿಸಲು ಹೆಣ್ಣು, ಗಂಡು ಎರಡು ಮುಖ್ಯ ಎಂಬುದನ್ನು ತಿಳುದುಕೊಂಡೇ ಸಂಬಂಧಗಳನ್ನು ಬೆಳೆಸಲು ಯತ್ನಿಸುವರು. ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಒಬ್ಬರಿಗೊಬ್ಬರು ಅರಿತುಕೊಂಡು ನಿರ್ಧಾರಕ್ಕೆ ಬರುತ್ತಾರೆ. ನಾಗರಿಕ ಸಮಾಜದಲ್ಲಿ ಮೊದಲು ಮದುವೆಯಾಗುವ ಗಂಡು, ಹೆಣ್ಣು ಪರಸ್ಪರ ಒಪ್ಪಿಕೊಂಡು ಎರಡು ಕುಟುಂಬಗಳು ಒಂದು ನಿರ್ಧಾರಕ್ಕೆ ಬಂದರೆ ಮಾತ್ರ ಮುಂದಿನ ಮಾತುಕತೆಗಳನ್ನು ಅಂದರೆ ಕುಲ, ಗೋತ್ರಗಳ ಬಗೆಗೆ ಹಿರಿಯರು ವಿಚಾರಿಸಿಕೊಳ್ಳುತ್ತಾರೆ. ಆದರೆ ಆದಿವಾಸಿ ಸಮುದಾಯಗಳಲ್ಲಿ ಮೊದಲು ಕುಲ, ಗೋತ್ರ ಬಳಿಗಳ ಬಗೆಗೆ ವಿಚಾರಿಸಿಕೊಂಡೇ ಹೆಣ್ಣು ನೋಡಲು ಹೋಗುವ ಪರಂಪರೆ ಇದೆ.

ಪ್ರತಿಯೊಂದು ಆದಿವಾಸಿ ಸಮುದಾಯ ತನ್ನದೇ ಆದ ಸಂಪ್ರದಾಯ ಆಚರಣೆಗಳ ಮೂಲಕ, ಮದುವೆ ಮಾಡುವುದನ್ನು ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದಿದೆ. ಪ್ರತಿಯೊಂದು ಸಮುದಾಯದಲ್ಲೂ ವೈವಿಧ್ಯಮಯವಾದ ವಿವಾಹ ಪದ್ಧತಿಯ ಆಚರಣೆಗಳಿವೆ ಮತ್ತು ವಿವಿಧ ಬಗೆಯ ವಿವಾಹ ಪದ್ಧತಿಗಳಿವೆ. ಶತಶತಮಾನಗಳಿಂದ ರೂಢಿಸಿಕೊಂಡು ಬಂದಿರುವ ಮದುವೆಗಳಲ್ಲಿನ ಆಚರಣೆಗಳು ಆಧುನಿಕತೆಯ ಪ್ರಭಾವದಿಂದ ಇಂದು ಬದಲಾಗುತ್ತಿವೆ ಮತ್ತು ಹೊಸ ರೂಪಗಳನ್ನು ಪಡೆಯುತ್ತಿವೆ. ಬರಗೂರು ರಾಮಚಂದ್ರಪ್ಪನವರು ಆಧುನಿಕ ಸಮಾಜದಲ್ಲಿಯೂ ಸಂಪ್ರದಾಯಗಳು, ಆಚರಣೆಗಳು, ಮೂಲಸ್ವರೂಪಗಳಲ್ಲಿಯೇ ಇರಬೇಕು ಎಂದು ಅಭಿಪ್ರಾಯ ಪಡುವರನ್ನು ಕುರಿತು ಹೀಗೆ ಹೇಳಿದ್ದಾರೆ. "ಸಂಪ್ರದಾಯಿಕ ಆಚರಣೆಗಳಿಂದ ಜನರಿಗೆ ಸಂತೋಷವಾಗುತ್ತದೆ. ಆದರೆ ಸಂತೋಷದ ಸ್ವರೂಪವೂ ನಮಗಿಲ್ಲಿ ಮುಖ್ಯ. ಸಾಮಾಜಿಕ ಚಟುವಟಿಕೆಯೊಂದು ನಿಗಧಿತ ಕಾಲ ಸಂದರ್ಭದಲ್ಲಿ ಮತ್ತೆ ಮತ್ತೆ ನೆಡೆಯುತ್ತಾ ಸಿದ್ದರೂಪ ಪಡೆದಾಗ ಅದು ಸಂಪ್ರದಾಯ ಆಗಿರುತ್ತದೆ ಎನ್ನುವುದು ನಮಗೆ ಈಗಾಗಲೇ ಗೊತ್ತಿದೆ. ಸಂಪ್ರದಾಯಿಕ ಆಚರಣೆಗಳಲ್ಲಿ ಸಿದ್ದರೂಪವೇ ಪ್ರತಿಸಾರಿಯೂ ಮರುಕಳಿಸುತ್ತಿರುತ್ತದೆ. ಆದ್ದರಿಂದ ಯಾಂತ್ರಿಕತೆಯೇ ಇದರ ಲಕ್ಷಣ. ಇದರಿಂದ ಉಂಟಾಗುವ ಸಂತೋಷವೂ ಒಂದು ರೀತಿಯ ಸಿದ್ದಸಂತೋಷ. ಪೂರ್ವ ನಿಯೋಜಿತ ಸಂತೋಷ. ಕಳೆದ ಸಾರಿಯ ಸಂತೋಷವೇ ಈ ಸಾರಿ ಮತ್ತು ಮುಂದಿನ ಸಾರಿ ಮರುಕಳಿಸಿ ಮರೆಯಾಗುತ್ತದೆ ಎಂದು ಹೇಳುತ್ತಾರೆ".

ಇಂದು ಆಧುನಿಕ ಪರಿಸರದ ನಡುವೆ ಬದುಕು ಕಂಡುಕೊಳ್ಳುತ್ತಿರುವ ಅನೇಕ ಆದಿವಾಸಿ ಸಮುದಾಯಗಳು ಹೊಸತನಕ್ಕೆ ಅಂಟಿಕೊಂಡು ತಮ್ಮ ಆಚರಣೆಗಳನ್ನು ರೂಪಾಂತರಿಸಿಕೊಂಡು ಆಚರಿಸುತ್ತಿರುವುದನ್ನು ಕಾಣುತ್ತೇವೆ. ಒಟ್ಟಿನಲ್ಲಿ ಸಂಪ್ರದಾಯ ಮತ್ತು ಆಚರಣೆಗಳು ಸಮಾಜ ಮತ್ತು ಬದುಕಿನ ಬದಲಾವಣೆಗಳೊಂದಿಗೆ ಅವು ಬದಲಾಗಬೇಕಾಗುತ್ತದೆ. ಚಲನೆ ಶೀಲ ಸಮಾಜದಲ್ಲಿ ಸಂಪ್ರದಾಯಗಳು ಸದಾಕಾಲ ಇದ್ದ ಸ್ಥಿತಿಯಲ್ಲಿಯೇ ಇರುವುದಿಲ್ಲ ಎಂದು ಬರಗೂರರು ಅಭಿಪ್ರಾಯ ಪಡುತ್ತಾರೆ.

ಸಾಮಾನ್ಯವಾಗಿ ಕಮ್ಮಾರಿಕೆ ವೃತ್ತಿಯನ್ನು ಕೈಗೊಂಡವರು ಸನಾಗ ಗೋತ್ರದವರಾಗಿರುತ್ತಾರೆ. ವಿಶ್ವಕರ್ಮರಲ್ಲಿಯ ಇತರೆ ಗೋತ್ರದವರು ಅಂದರೆ ಸನಾತನ, ಅಭುವನಶ್ಯ, ಪ್ರತ್ನಶ್ಯ ಮತ್ತು ಸುಪರ್ಣಶ್ಯ ಗೋತ್ರದವರು ಕಮ್ಮಾರಿಕೆ ವೃತ್ತಿಯನ್ನು ಮಾಡುತ್ತಿರಬಹುದು. ಇದಕ್ಕೆ ನಿರ್ಬಂಧ ಏನೂ ಇಲ್ಲ. ಒಂದು ಕಾಲಕ್ಕೆ ಕಮ್ಮಾರಿಕೆ ವೃತ್ತಿಯಲ್ಲಿ ನಿರತರಾದ ಕುಟುಂಬಗಳ ಜೊತೆಗೆ ವೈವಾಹಿಕ ಸಂಬಂಧ ಬೆಳೆಸಲು ಇತರೆ ವೃತ್ತಿಯವರು ಹಿಂದೇಟು ಹಾಕುತ್ತಿದ್ದರು. ಕಾರಣ ಕಮ್ಮಾರಿಕೆ ವೃತ್ತಿಯಲ್ಲಿ ತೊಡಗಿಸಿಕೊಂಡವರಲ್ಲಿ ಸೂಕ್ಷ್ಮತೆ ಇರುವುದಿಲ್ಲ. ಅವರ ವೃತ್ತಿಯಂತೆ ಅವರ ಗುಣ ಸ್ವಭಾವಗಳು ಒರಟಾಗಿರುತ್ತವೆ ಮತ್ತು ವಿಶ್ವಕರ್ಮರ ಆಚಾರ, ವಿಚಾರಗಳನ್ನು ಇವರು ಸರಿಯಾಗಿ ಪಾಲಿಸುವುದಿಲ್ಲ ಎಂಬ ಕಾರಣಕ್ಕೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿರಲ್ಲಿಲ್ಲ. ಈಗ ಕಮ್ಮಾರರ ಜೊತೆಗೆ ಇತರೆ ವೃತ್ತಿಯವರು ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿರುವುದು ಕಂಡುಬರುತ್ತದೆ.

ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ವೃತ್ತಿಗಿಂತ ಗೋತ್ರಗಳು ಪ್ರಮುಖ ಪಾತ್ರ ವಹಿಸುತ್ತವೆ. ಇವರಲ್ಲಿ ಸಗೋತ್ರದಲ್ಲಿ ವಿವಾಹ ನಿಷೇಧ. ಗೋತ್ರಗಳ ಬಗ್ಗೆ ಕಟ್ಟುನಿಟ್ಟಿನ ಕ್ರಮವನ್ನು ಇವರು ಅನುಸರಿಸುತ್ತಾರೆ. ಸಗೋತ್ರದಲ್ಲಿ ಸಂಬಂಧ ಬೆಳೆಸಿದರೆ ಎರಡು ಕುಟುಂಬಗಳನ್ನು ಸಮುದಾಯದಿಂದ ಹೊರಗೆ ಹಾಕುತ್ತಾರೆ. ಹೀಗಾಗಿ ಗೋತ್ರಗಳನ್ನು ಕೇಳಿ ತಿಳಿದುಕೊಂಡೇ ಕನ್ಯಾ, ವರಾನ್ವೇಷಣೆಗೆ ಹೋಗುವುದು ಕಮ್ಮಾರರ ಸಂಪ್ರದಾಯ.

ವರನ ಕಡೆಯವರು ಕನ್ಯೆಯನ್ನು ನೋಡುಲು ಹೆಣ್ಣಿನ ಮನೆಗೆ ಹೋಗುವುದು ಸಂಪ್ರದಾಯ. ಒಳ್ಳೆಯ ದಿನ, ಮೂಹೂರ್ತ, ಸಮಯ ನೋಡಿಕೊಂಡು ಹೆಣ್ಣಿನ ಮನೆಗೆ ಗಂಡಿನವರು ಹೋಗುತ್ತಾರೆ. ಹೆಣ್ಣನ್ನು ನೋಡಲು ಹೋಗುವಾಗ ಇಬ್ಬರು ಮುತ್ತೈದೆಯರನ್ನು ಹಾಗೂ ಹಿರಿಯರನ್ನು ಕರೆದುಕೊಂಡು ಹೋಗುವುದುಂಟು. ಹೆಣ್ಣು ನೋಡಲು ಹೋಗುವಾಗ ಅಪಶಕುನಗಳಾದರೆ ಪ್ರಯಾಣದ ಸಮಯವನ್ನು ಬದಲಾಯಿಸುತ್ತಾರೆ. ಇತ್ತಿತ್ತಲಾಗಿ ಹೆಣ್ಣಿನ ಮನೆತನದ ಎಲ್ಲಾ ವಿಷಯಗಳನ್ನು ಗಂಡಿನವರು ಸೂಕ್ಷ್ಮವಾಗಿ ತಿಳಿದುಕೊಂಡು ಹೋಗುವುದುಂಟು. ಹೆಣ್ಣನ್ನು ನೋಡಲು ಹೋಗುವುದನ್ನು ಇವರು ಹಣ್ಣು ಹಾಕಲು ಹೋಗುತ್ತಿದ್ದೇವೆ ಎಂದು ಹೇಳುವುದುಂಟು.

ಹೆಣ್ಣಿನ ಮನೆಗೆ ಹೋಗಿ ಅಲ್ಲಿ ಹೆಣ್ಣನ್ನು ಮಣೆಯ ಮೇಲೆ ಕುಳ್ಳರಿಸಿ ವಧು ಪರೀಕ್ಷೆ ಮಾಡುತ್ತಾರೆ. ಹೆಣ್ಣಿಗೆ ೧೧ ಬಾಳೆಹಣ್ಣು, ಎಲೆ, ಅಡಿಕೆ, ಉತ್ತತ್ತಿಯಿಂದ ಉಡಿ ತುಂಬುತ್ತಾರೆ. ಕೆಲವರು ಹೆಣ್ಣಿನ ಹಸ್ತ, ಪಾದಗಳನ್ನು ಪರೀಕ್ಷಿಸುತ್ತಾರೆ. ಹೆಣ್ಣು ಒಪ್ಪಿಗೆ ಆಗಿದೆ ಎಂಬ ವಿಷಯವನ್ನು ಹೇಳುವರು. ಒಪ್ಪಿಗೆಯನ್ನು ಆ ದಿನವೇ ತಿಳಿಸಿದರೆ ಕೆಲವರು ನಂತರ ತಿಳಿಸುತ್ತಾರೆ. ಕೆಲವರು ಕನ್ಯಾನ್ವೇಷಣೆಗಾಗಿ ಹತ್ತಾರು ಕಡೆ ಅಲೆಯುತ್ತಾರೆ. ಅವರ ಕುಟುಂಬಕ್ಕೆ ಸೂಕ್ತವಾದ ಹೆಣ್ಣು ಸಿಗುವವರೆಗೆ ಹುಡುಕುವುದುಂಟು. ಇದೆಕ್ಕೆಲ್ಲ ಆ ಪರಿಸರದ ಪ್ರಭಾವವೇ ಕಾರಣವಾಗಿದೆ. ಒಂದು ಕಾಲದಲ್ಲಿ ತಮ್ಮ ಕಳ್ಳುಬಳ್ಳಿಯಲ್ಲಿ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದರು. ದೂರದ ಸಂಬಂಧಗಳನ್ನು

ಅವರು ಇಷ್ಟ ಪಡುತ್ತಿರಲ್ಲ. ಆಧುನಿಕತೆಯ ಪ್ರಭಾವದಿಂದ ಇತ್ತಿತ್ತಲಾಗಿ ದೂರದ ಸಂಬಂಧಗಳನ್ನು ಬೆಳೆಸುತ್ತಿರುವುದು ಕಂಡುಬರುತ್ತದೆ.

ಈ ಸಮುದಾಯದಲ್ಲಿ ಮದುವೆಯಾಗುವ ಗಂಡು ಕಡ್ಡಾಯವಾಗಿ ಮುಂಜುವೆಯನ್ನು ಮಾಡಿಕೊಂಡಿರಬೇಕು ಎಂಬ ನಿಯಮವಿದೆ. ಮುಂಜಿವೆ ಇಲ್ಲದೆ ಮದುವೆ ಮಾಡುವುದು ಇವರಲ್ಲಿ ನಿಷೇಧ. ಮಕ್ಕಳು ಚಿಕ್ಕವರಿದ್ದಾಗಲೇ ಮುಂಜಿವೆ ಮಾಡಿ ಬಾಲ್ಯವಿವಾಹ ಮಾಡುವ ಪದ್ಧತಿ ಒಂದು ಕಾಲಕ್ಕೆ ಇತ್ತು, ಈಗ ಅದು ಕಂಡುಬರುವುದಿಲ್ಲ. ಹೆಣ್ಣು ವಯಸ್ಸಿಗೆ ಬಂದರೆ ಗಂಡಿನವರು ಹಿರಿಯರನ್ನು ಕರೆದುಕೊಂಡು ಹೆಣ್ಣಿನ ಮನೆಗೆ ಹೋಗುವುಂಟು. ಹೆಣ್ಣಿನ ಮನೆಯಲ್ಲಿ ಹಿರಿಯರ ಮಧ್ಯಸ್ಥಿಕೆಯಲ್ಲಿ ಕೊಡುಕೊಳ್ಳುವಿಕೆ ನಡೆಯುತ್ತದೆ. ಕಮ್ಮಾರರು ಸಾಮಾನ್ಯವಾಗಿ ಬಡವರು. ವರದಕ್ಷಿಣೆ, ವರೋಪಚಾರ ಎಂದು ಅವರಿಗೆ ಹಣ ಖರ್ಚು ಮಾಡಲು ಸಾಧ್ಯವಾಗುತ್ತಿರಲಿಲ್ಲ. ಸರಳವಾಗಿ ಮದುವೆ ಸಮಾರಂಭವನ್ನು ಮುಗಿಸುತ್ತಿದ್ದರು. ಈಗ ಆ ಪರಂಪರೆ ಮಾಯವಾಗಿದೆ. ಇತರೆ ಸಮುದಾಯದವರ ಪ್ರಭಾವದಿಂದ ಸಾಲ ಮಾಡಿಯಾದರು ಅದ್ದೂರಿಯಾಗಿ ಮದುವೆ ಮಾಡಬೇಕೆಂಬ ಬಯಕೆಯನ್ನು ಗಂಡಿನವರು ಹೆಣ್ಣಿನವರ ಮುಂದೆ ಇಡುತ್ತಾರೆ. ಅದಕ್ಕೆ ಅನಿವಾರ್ಯವಾಗಿ ಹೆಣ್ಣಿನವರು ಒಪ್ಪಬೇಕಾಗುತ್ತದೆ.

ವರನ ಕುಟುಂಬದವರು ಹೆಣ್ಣನ್ನು ಒಪ್ಪಿಕೊಂಡ ಮೇಲೆ ಮಾತು ಕಥೆ ಎಲ್ಲ ಪೂರ್ಣವಾದ ಮೇಲೆ ಅವರ ಮನೆಯಲ್ಲಿ ಸಿಹಿ ಊಟ ಮಾಡಿ ಮದುವೆ ದಿನವನ್ನು ನಿರ್ಧರಿಸುತ್ತಾರೆ. ಮದುವೆ ಮೂಹೂರ್ತವನ್ನು ಈ ಸಮೂದಾಯದ ಆಚಾರ್ಯರೇ ನಿರ್ಧರಿಸುತ್ತಾರೆ.

ವಿವಾಹಕ್ಕಾಗಿ ಇವರು ಉತ್ತರಾಯಣ ಶುಕ್ಲಪಕ್ಷಗಳನ್ನೇ ಆಯ್ಕೆ ಮಾಡುತ್ತಾರೆ. ಮಾಘ, ಚೈತ್ರ, ವೈಶಾಖ ಮಾಸಗಳಲ್ಲಿ ಮದುವೆ ದಿನವನ್ನು ನಿರ್ಧರಿಸುವುದುಂಟು. ಒಂದು ಕಾಲದಲ್ಲಿ ಇವರು ವಿವಾಹ ಮೂಹೂರ್ತವನ್ನು ರಾತ್ರಿ ಸಮಯದಲ್ಲಿ ಇಟ್ಟು ಕೊಳ್ಳುತ್ತಿದ್ದರು. ಅದಕ್ಕಾಗಿ ಶುಕ್ಲ ಪಕ್ಷದ ಬೆಳದಿಂಗಳ ರಾತ್ರಿಯನ್ನು ಆಯ್ಕೆಮಾಡುತ್ತಿದ್ದರು. ಈಗ ಈ ಪರಂಪರೆ ಕಡಿಮೆಯಾಗಿದೆಯಾದರೂ ಕೆಲ ಪ್ರದೇಶಗಳಲ್ಲಿ ಕಂಡು ಬರುತ್ತದೆ. ಸಾಮಾನ್ಯವಾಗಿ ಹಗಲಿನ ವೇಳೆಯಲ್ಲಿಯೇ ಧಾರೆ ಕಾರ್ಯ ನಡೆಸುವುದು ಹೆಚ್ಚಾಗಿ ಕಂಡು ಬರುತ್ತದೆ.

ಮದುವೆಯನ್ನು ಸಾಮಾನ್ಯವಾಗಿ ಹೆಣ್ಣಿನವರೇ ಮಾಡಿಕೊಡುವುದು ಇವರಲ್ಲಿಯ ಸಂಪ್ರದಾಯ. ಕಮ್ಮಾರರಲ್ಲಿ ಮೊದಲು ಮದುವೆಯ ಆಚರಣೆಗಳು ಮೂರು ದಿನಗಳವರೆಗೆ ನಡೆಯುತ್ತಿದ್ದವು. ಇಂದು ಕೇವಲ ಒಂದು ದಿನದಲ್ಲಿ ಎಲ್ಲ ಕಾರ್ಯಗಳನ್ನು ಮಾಡಿ ಮುಗಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿರುವವರು ತಮ್ಮ ಮನೆಗಳ ಮುಂದೆಯೇ ಧಾರೆ ಎರೆದುಕೊಡುತ್ತಾರೆ. ನಗರಗಳಲ್ಲಿಯ ಕಮ್ಮಾರರು ಮಂಗಲಕಾರ್ಯಾಲಯಗಳಲ್ಲಿ ಮದುವೆ ಕಾರ್ಯ ಮಾಡುತ್ತಾರೆ.

ಧಾರೆಯ ಹಿಂದಿನ ದಿನದ ರಾತ್ರಿಗೆ ವರನ ಬಂಧು-ಬಳಗದವರು ಹೆಣ್ಣಿನ ಮನೆ ಅಥವಾ ಮದುವೆ ಛತ್ರಕ್ಕೆ ಬರುತ್ತಾರೆ. ಗಂಡಿನವರನ್ನು ಹೆಣ್ಣಿನವರು ಎದುರುಗೊಂಡು ಕರೆತರುವುದು ಇವರ

ಸಂಪ್ರದಾಯ. ನಿಶ್ಚಿತಾರ್ಥ ಕಾರ್ಯವನ್ನು ಹೆಣ್ಣು ಗಟ್ಟಿ ಮಾಡಿದ ದಿನ ಮಾಡದೇ ಇದ್ದರೆ ಧಾರೆಯ ರಾತ್ರಿ ನಿಶ್ಚಿತಾರ್ಥ ಮಾಡುತ್ತಾರೆ. ಒಂದು ಸಲ ನಿಶ್ಚಿತಾರ್ಥ ಮಾಡಿದ ಮೇಲೆ ಯಾವುದೇ ಕಾರಣಕ್ಕೂ ಮದುವೆ ಸಂಬಂಧಗಳನ್ನು ಮುರಿಯಬಾರದೆಂಬ ಪದ್ಧತಿ ಇವರಲ್ಲಿದೆ.

ಧಾರೆಯ ದಿನ ವಧು-ವರರಿಗೆ ಐದು ಜನ ಮುತ್ತೈದೆಯರು ಅರಿಶಿಣ ಎಣ್ಣೆ ಹಚ್ಚುತ್ತಾರೆ. ನಾಲ್ಕು ಮಗಿ ಅಥವಾ ತಂಬಿಗೆಗಳನ್ನು ನಾಲ್ಕು ದಿಕ್ಕುಗಳಿಗಿಟ್ಟು ನಡುವೆ ವಧು-ವರ ಮತ್ತು ಅವರ ತಂದೆ ತಾಯಿಯರಿಗೆ ಕುಳಿತುಕೊಳ್ಳಲು ಸ್ಥಳಾವಕಾಶ ಮಾಡಿಕೊಟ್ಟು ಸುರುಗಿದಾರ ಸುತ್ತಿ ನೀರು ಹಾಕುತ್ತಾರೆ. ಸುರಿಗಿ ನೀರು ಬಿದ್ದ ಮೇಲೆ ಆಚಾರ್ಯರು ಅನೇಕ ವಿಧಿ-ವಿಧಾನಗಳ ಮೂಲಕ ಪೂಜೆ ಮಾಡಿಸುತ್ತಾರೆ. ಹೆಣ್ಣಿನ ತಂದೆ ಧಾರೆ ಎರೆದು ಕೊಡುತ್ತಾನೆ. ಕೊನೆಗೆ ಗಂಡನ್ನು ಪೂರ್ವಾಭಿಮುಖವಾಗಿ ಹೆಣ್ಣನ್ನು ಪಶ್ಚಿಮಾಭಿಮುಖವಾಗಿ ಎದುರು ಬದುರು ನಿಲ್ಲಿಸಿ, ನಡುವೆ ಅಂತರ್‌ಪಟವನ್ನು ಹಿಡಿದು ಮಂತ್ರಗಳನ್ನು ಹೇಳುತ್ತಾನೆ. ಮಂತ್ರ ಪಠಣ ಮುಗಿಯುತ್ತಿದ್ದಂತೆ ಎಲ್ಲರೂ ಅಕ್ಷತೆ ಹಾಕುತ್ತಾರೆ. ವರನಾದವನು ಹೆಣ್ಣಿಗೆ ತಾಳಿ ಕಟ್ಟುತ್ತಾನೆ. ಮದುವೆಗೆ ಬಂದ ಬಳಗದವರೆಲ್ಲ ಮದುಮಕ್ಕಳಿಗೆ ಉಡುಗರೆ ಕೊಡುತ್ತಾರೆ. ನಂತರ ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿರುತ್ತಾರೆ.

ಮದುವೆಯಾದ ದಿನವೇ ವಧುವನ್ನು ವರ ತನ್ನ ಮನೆಗೆ ಕರೆದುಕೊಂಡು ಹೋಗುವುದನ್ನು ಈ ಸಮುದಾಯದಲ್ಲಿ ಕಾಣುತ್ತೇವೆ. ದಿಬ್ಬಣ ಗಂಡಿನ ಮನೆಗೆ ಬಂದಾಗ ಗಂಡಿನ ಅಕ್ಕ ತಂಗಿಯರು ಮನೆ ಬಾಗಿಲಿನಲ್ಲಿ ಅವರನ್ನು ತಡೆದು ಆರುತಿ ಮಾಡಿ ಅರಿಷಿಣ ಕುಂಕುಮದ ನೀರಿನಿಂದ ದೃಷ್ಟಿ ನಿವಾಳಿಸಿ ಅಣ್ಣನ ಮತ್ತು ಅತ್ತಿಗೆಯ ಕಾಲು ಹಿಡಿದುಕೊಂಡು ನನಗೆ ಹೆಣ್ಣು ಹೆತ್ತು ನನ್ನ ಮಗನಿಗೆ ಕೊಡಬೇಕು ಇಲ್ಲವೆ ನನ್ನ ಹೆಣ್ಣು ಮಗಳನ್ನು ನಿನ್ನ ಮಗನಿಗೆ ತೆಗೆದುಕೊಳ್ಳಬೇಕು ಅದಕ್ಕೆ ವಚನ ಕೊಡು ಎಂದು ಕಾಲು ಹಿಡಿದು ಕೇಳಿಕೊಳ್ಳುತ್ತಾರೆ. ಅಣ್ಣ ತಂಗಿ ಅಥವಾ ಅಕ್ಕ ತಮ್ಮನ ನಡುವೆ ವಾಗ್ವಾದ ಪ್ರಾರಂಭವಾಗುತ್ತದೆ. ಕೊನೆಗೆ ನವ ದಂಪತಿಗಳು ತಮ್ಮ ಅಕ್ಕ ಅಥವಾ ತಂಗಿಯ ಬೇಡಿಕೆಯನ್ನು ಒಪ್ಪಿಕೊಂಡು ವಚನ ಕೊಟ್ಟ ಮೇಲೆ ಮತ್ತೆ ನವದಂಪತಿಗಳಿಗೆ ಆರತಿ ಮಾಡುತ್ತಾರೆ. ನವವಧು ಹೊಸ್ತಿಲ ಮೇಲೆ ಪಾವಿನಲ್ಲಿ ತುಂಬಿ ಇಟ್ಟಿರುವ ಅಕ್ಕಿಯನ್ನು ಬಲಗಾಲಿನಿಂದ ಒದ್ದು ಮನೆಯ ಒಳಗೆ ಪ್ರವೇಶ ಮಾಡುತ್ತಾಳೆ. ನೇರವಾಗಿ ಮನೆಯ ದೇವರ ಕೋಣೆಗೆ ಹೋಗಿ ತುಂಬಿರುವ ಉಡಿಯನ್ನು ಒಂದು ದೊಡ್ಡ ತಟ್ಟೆಯಲ್ಲಿ ತೆಗೆದಿಟ್ಟು, ಮನೆ ದೇವರಿಗೆ ಆರುತಿಯನ್ನು ಮಾಡಿ ಹಿರಿಯರಿಗೆ ನಮಸ್ಕರಿಸುತ್ತಾಳೆ. ಆ ದಿನ ರಾತ್ರಿಯೇ ಪ್ರಸ್ತದ ಕಾರ್ಯಕ್ರಮವನ್ನು ಏರ್ಪಡಿಸಿರುತ್ತಾರೆ.

ಮಂಗಳೂರು ಮತ್ತು ಉಡುಪಿ ಜಿಲ್ಲೆಯ ನಗರ ಪ್ರದೇಶಗಳಲ್ಲಿ ಹಾಗೂ ನಗರಕ್ಕೆ ಸಮೀಪವಿರುವ ಕಮ್ಮಾರರು ವೈದಿಕ ಧರ್ಮದ ಕುಲ ಪುರೋಹಿತರ ಆಚಾರ ವಿಚಾರ ಹಾಗೂ ಸಂಪ್ರದಾಯಗಳಿಗೆ ಬದ್ಧರಾಗಿ ಕೆಲ ಕಮ್ಮಾರರು ತಮ್ಮ ಮಕ್ಕಳ ಮದುವೆಗಳನ್ನು ಮಾಡುವ ಪರಂಪರೆಯನ್ನು ಇತ್ತಿತ್ತಲಾಗಿ

ಬೆಳೆಸಿಕೊಂಡಿದ್ದಾರೆ. ಈ ಆಚರಣೆಗಳ ಪ್ರಕಾರ ಕಮ್ಮಾರರ ಮದುವೆಯ ಆಚರಣೆಗಳು ಹೇಗಿರುತ್ತವೆ ಎಂಬುದನ್ನು ಈ ಕೆಳಗೆ ವಿವರಿಸಲಾಗಿದೆ.

**೩.೯.೧. ವಿವಾಹ ಸಂಸ್ಕಾರ ವಿಧಿ:**

ವಯಸ್ಕನಾದ ಯುವಕನು ದೈನಂದಿನ ಜೀವನ ನಿರ್ವಹಣೆಗಾಗಿ ಮತ್ತು ವರ್ಣಾಶ್ರಮ ಧರ್ಮವನ್ನು ಪಾಲಿಸಿಕೊಂಡು ಬರುವ ಸಲುವಾಗಿ ಯೋಗ್ಯವಾದ ವೃತ್ತಿಯೊಂದನ್ನು ಅವಲಂಬಿಸಬೇಕಾದ್ದು ಅವಶ್ಯಕ. ಇದು ಬ್ರಹ್ಮಚಾರಿಯು ಗೃಹಸ್ಥನಾಗುವ ಹಂತ ಎನ್ನಬಹುದು. ಈ ಹಂತದಲ್ಲಿ ತನ್ನೆಲ್ಲಾ ಕಾರ್ಯಕ್ರಮಗಳಲ್ಲಿ ನೆರವಾಗಬಲ್ಲ, ಸಮಾನ ಗುಣ, ಧರ್ಮ, ಸ್ವಭಾವಗಳಿಂದ ಕೂಡಿದ ಕನ್ಯೆಯ ಸಹಯೋಗ ಆತನಿಗೆ ಅಗತ್ಯ. ಸ್ತ್ರೀ ಪುರುಷರ ಇಂತಹ ಸಂಬಂಧವೇ ವಿವಾಹ. ವಿವಾಹದಿಂದ ಸಂತಾನ ಪ್ರಾಪ್ತಿಯಾಗುವುದು ಮತ್ತು ಆ ಮೂಲಕವಾಗಿ ವಂಶಾಭಿವೃದ್ಧಿಯಾಗುವುದು. ಆದುದರಿಂದ ಸ್ತ್ರೀ ಹಾಗೂ ಪುರುಷರ ಜೀವನದಲ್ಲಿ ವಿವಾಹವು ಅತ್ಯಧಿಕ ಮಹತ್ವವುಳ್ಳ ಘಟ್ಟ ಎಂದರೆ ತಪ್ಪಾಗಲಾರದು.

**೩.೯.೧.೧. ವಧುವರರ ಆಯ್ಕೆ:**

ವಧೂ-ವರರ ಆಯ್ಕೆಗೆ ಅವರ ವಿವಾಹಕ್ಕೆ ಯೋಗ್ಯ ವಯಸ್ಸು, ಕುಲ, ಗ್ರೋತ್ರ, ವರ್ಣ ವಾಸಸ್ಥಳ, ವಿದ್ಯಾರ್ಹತೆ, ಗುಣ, ಶೀಲ, ಸ್ವಭಾವ, ವಿಷಯಗಳ ಪರಿಶೀಲನೆ ಅಗತ್ಯ. ಹಿಂದಿನ ಕಾಲದಲ್ಲಿ ನೀಚ ಕುಲದಲ್ಲಿ ಉತ್ತಮ ವರ್ಣದ ಕನ್ಯೆ ಲಭ್ಯವಿರುತ್ತಿದ್ದಲ್ಲಿ ಶ್ರೇಷ್ಠ ಕುಲದಲ್ಲಿ ಹುಟ್ಟಿದ ಉತ್ತಮ ವರ್ಣದ ವರ ಆಕೆಯನ್ನು ವಿವಾಹವಾಗಲು ಯಾವುದೇ ಅಡ್ಡಿ ಆತಂಕಗಳಿರಲಿಲ್ಲ.

ವಧು-ವರರ ಆಯ್ಕೆಯಲ್ಲಿ ಸಾಮಾಜಿಕ ದೃಷ್ಟಿಯೊಂದೇ ಅಲ್ಲದೆ ವೈಜ್ಞಾನಿಕ ದೃಷ್ಟಿಯೂ ಇದ್ದಿತು. ಕನ್ಯೆಯು ವರನ ತಾಯಿಯ ವಂಶದಲ್ಲಿ ಆರು ತಲೆಮಾರಿನೊಳಗೆ ಜನಿಸಬಾರದಿತ್ತು. ಅಂತೆಯೇ ವರನ ತಂದೆಯ ಗೋತ್ರಕ್ಕೆ ಅವಳು ಸೇರಿದವಳಾಗಬಾರದಿತ್ತು. ಹಾಗೊಂದು ಪಕ್ಷ ಆಗಿದ್ದಲ್ಲಿ ಅದನ್ನು ಸಗೋತ್ರ ವಿವಾಹವೆಂದು ಪರಿಗಣಿಸಲಾಗುತ್ತಿತ್ತು. ಸಗೋತ್ರ ವಿವಾಹವು ನಿಷಿದ್ಧವೇ ಆಗಿತ್ತು. ಉತ್ತಮ ವಂಶಾಭಿವೃದ್ಧಿಯ ದೃಷ್ಟಿಯಿಂದ ಇದು ಅಗತ್ಯವೆಂದು ಪರಿಗಣಿಸಲಾಗಿತ್ತು.

ವಧೂ-ವರರು ಯಾವ ಕುಲಕ್ಕೆ ಸೇರಿದವರೋ ಆ ಕುಲದಲ್ಲಿ ಉತ್ತಮ ಆಚಾರ-ವಿಚಾರವಿರುವುದು ಅವಶ್ಯಕ, ಮೂಲವ್ಯಾಧಿ, ಕ್ಷಯ, ದೃಷ್ಟಿಮಾಂದ್ಯ, ರಕ್ತಭೇದಿ, ಬುದ್ಧಿಮಾಂದ್ಯವಿರುವವರು ಉಭಯತ್ರ ಕುಲದಲ್ಲಿ ಕಂಡು ಬಂದರೆ ವಿವಾಹ ಸಂಬಂಧ ಬೆಳೆಸಲು ವರನ ಕಡೆಯವರು ಒಪ್ಪುತ್ತಿರಲಿಲ್ಲ.

ವಿವಾಹ ಸಂಬಂಧವನ್ನು ಆಚಾರ್ಯರು ನಿರ್ಣಯಿಸುತ್ತಿದ್ದರು. ನಂತರ ವಧೂವರರ ಒಪ್ಪಿಗೆ ಪಡೆಯಲಾಗುತ್ತಿತ್ತು. ಇಷ್ಟದ ನಂತರ ಗಂಡು-ಹೆಣ್ಣಿನ ತಂದೆ ತಾಯಿಗಳ ಒಪ್ಪಿಗೆ ನಿರಾಸದಾಯಕವಾಗಿ ದೊರೆಯುತ್ತಿತ್ತು.

೩.೯.೧.೨. ವಿವಾಹಕ್ಕೆ ಪ್ರಶಸ್ತವಾದ ಕಾಲ:

ವರ್ಷದಲ್ಲಿ ವಿವಾಹಕ್ಕೆ ಪ್ರಶಸ್ತವಾದ ಕಾಲ ಉತ್ತರಾಯಣ. ಶುಕ್ಲ ಪಕ್ಷ ಎಂದೇ ತೀರ್ಮಾನವಾಗಿತ್ತು. ಮಾಘ ಚೈತ್ರ, ವೈಶಾಖ ಮಾಸಗಳಲ್ಲಿ ಮಳೆ, ಗಾಳಿಯ ಅವಾಂತರಗಳಿರುವುದಿಲ್ಲ. ಆ ಕಾಲದಲ್ಲಿ ಜನರಿಗೆ ಸಾಕಷ್ಟು ವಿರಾಮ ಸಿಕ್ಕಿರುತ್ತದೆ. ಹಿಂದಿನ ದಿನಗಳಲ್ಲಿ ವಿವಾಹವನ್ನು ರಾತ್ರಿಯ ವೇಳೆ ಆಚರಿಸುತ್ತಿದ್ದರಾದ ಕಾರಣ, ಶುಕ್ಲ ಪಕ್ಷದ ಬೆಳದಿಂಗಳ ರಾತ್ರಿ ಹೆಚ್ಚು ಅನುಕೂಲಕವಾಗಿಯೇ ಇರುತ್ತಿತ್ತು. ಈಗಲೂ ಕೆಲವೊಂದು ಪ್ರದೇಶಗಳಲ್ಲಿ ರಾತ್ರಿ ವೇಳೆ ವಿವಾಹ ಜರಗಿಸುವ ಸಂಪ್ರದಾಯ ರೂಢಿಯಲ್ಲಿದೆ.

ಒಟ್ಟಾರೆ ಹೇಳುವುದಾದರೆ, ದುರಚಾರಿಗಳು, ದುಷ್ಟರೂ, ದುರ್ಮಾಗಿಗಳು ಆಗಿ ಬೆಳೆಯುವ ಸಂತಾನವನ್ನು ಮೂಲದಲ್ಲೇ ಚಿವುಟಿ ಹಾಕುವುದು ಅಂದಿನ ಸಭ್ಯ ಸಮಾಜದ ಗುರಿಯಾಗಿತ್ತು. ಗುಣ ಸಂಪನ್ನರಾದ ವರ ದೊರಕದಿದ್ದರೆ ಕನ್ಯೆಯು ಆಜೀವ ಪರ್ಯಂತ ಅವಿವಾಹಿತಳಾಗಿಯೇ ಇದ್ದು ತಂದೆಯ ಮನೆಯಲ್ಲಿಯೇ ಬದುಕು ಸಾಗಿಸುತ್ತಿದ್ದಳು. ಅಂತೆಯೇ ಪುರುಷನೂ ಸಹ ಯೋಗ್ಯಳಾದ ವಧು ದೊರಕದಿದ್ದರೆ, ಬ್ರಹ್ಮಚಾರಿಯಾಗಿಯೇ ಉಳಿಯುತ್ತಿದ್ದುದುಂಟು.

೩.೯.೧.೩. ವಿವಾಹ ಯೋಗ್ಯ ವಯಸ್ಸು:

ಕುಮಾರಿಯು ಪ್ರಥಮ ರಜಸ್ವಲೆಯಾದ ಬಳಿಕ ಮೂರು ವರ್ಷಗಳು ಕಳೆಯುವವರೆಗೂ ವಿವಾಹ ಮಾಡುತ್ತಿರಲಿಲ್ಲ. ವೇದಗಳ ಕಾಲದಲ್ಲಿ ಬಾಲ್ಯವಿವಾಹಕ್ಕೆ ಅವಕಾಶವೇ ಇರಲಿಲ್ಲ. ಪರಕೀಯರು ಆರ್ಯಾವರ್ತವನ್ನು ಬಲವಂತವಾಗಿ ಪ್ರವೇಶ ಮಾಡಿ ಕನ್ಯಾಪಹರಣ ಮೊದಲಾದ ದುಷ್ಕೃತ್ಯಗಳನ್ನು ಮಾಡತೊಗಿದಾಗ ಬಾಲ್ಯ ವಿವಾಹ ಪದ್ಧತಿ ನಮ್ಮ ದೇಶದಲ್ಲಿ ಪ್ರಾರಂಭವಾಯಿತು. ಇದಕ್ಕಿಂತ ಮೊದಲು ಕುಮಾರಿಗೆ ಹದಿನಾರನೆಯ ವಯಸ್ಸಿನಿಂದ ಇಪ್ಪತ್ನಾಲ್ಕನೆಯ ವಯಸ್ಸಿನವರೆಗೂ, ಕುಮಾರನಿಗೆ ಇಪ್ಪತ್ತೈದು ವರ್ಷದಿಂದ ನಲವತ್ತೆಂಟನೆಯ ವರ್ಷದವರೆಗೆ ವಿವಾಹವಾಗಲು ಯೋಗ್ಯ ವಯಸ್ಸು ಎಂದು ನಿರ್ಧರಿಸಿಕೊಂಡಿದ್ದರು. ಇದನ್ನು ಮನುಶಾಸ್ತ್ರ ಅನಮೋದಿಸಿತ್ತು ಮತ್ತು ಶ್ರೇಷ್ಠ ಧನ್ವಂತರಿಯಾದ ಸುಶ್ರುತ ಸಂಹಿತೆಯಲ್ಲಿ ಬಾಲ್ಯವಿವಾಹವನ್ನು ನಿಷೇಧಿಸಿರುವುದು ಗಮನಾರ್ಹ ಅಂಶವಾಗಿದೆ.

ಬಹು ದೂರದ ಕುಲದಿಂದ ಕನ್ಯೆಯನ್ನು ತಂದು ಕೊಳ್ಳುವುದು ಉತ್ತಮವೆಂದು ತಿಳಿಯಲಾಗಿತ್ತು. ತಳಿ ಅಭಿವೃದ್ಧಿಗೆ ಇದು ಅವಶ್ಯಕ ಎಂಬುದನ್ನು ನಮ್ಮ ಪೂರ್ವಿಕರು ಅರಿತಿದ್ದರು. ದೂರದ ಕುಲದೊಂದಿಗೆ ಸಂಬಂಧ ಬೆಳೆಸುವುದರಿಂದ ಜಾಣರೂ, ಶಕ್ತಿಶಾಲಿ ಮಕ್ಕಳು ಹುಟ್ಟುವರೆಂಬುದು ವೈಜ್ಞಾನಿಕವಾದ ಸಂಗತಿ. ಸಮೀಪದ ಬಂಧು ವರ್ಗದಲ್ಲಿ ಮದುವೆಯಾಗುವುದರಿಂದ ವಧೂವರರಲ್ಲಿ ಹೆಚ್ಚಿನ ಪ್ರೀತಿ ಉಳಿಯುವುದಿಲ್ಲ ಮತ್ತು ಹೆಂಡತಿ ತನ್ನ ಗಂಡನನ್ನು ಪ್ರೀತಿ ವಿಶ್ವಾಸಗಳಿಂದ ಕಾಣುವ ಸಂಭವವೂ ಕಡಿಮೆ. ಅಲ್ಲದೆ ಆಕೆಯ ತವರು ಮನೆ ಅತ್ಯಂತ ಸಮೀಪದಲ್ಲಿದ್ದರೆ ಅವಳಿಗೆ ತವರು ಮನೆಯ ಸಂಪರ್ಕವೇ ಹೆಚ್ಚಾಗಿ ಗಂಡನ ಮನೆಯ ಕ್ಷೇಮಾಭ್ಯುದಯದ ಬಗ್ಗೆ ಆಕೆಗೆ ಹೆಚ್ಚಿನ

ಕಾಳಜಿ ಇರುವುದಿಲ್ಲ. ಅಲ್ಲದೆ ಬಂಧು ವರ್ಗದವರಲ್ಲಿ ರೋಗರುಜಿನ ಅನುವಂಶಿಕ ಲಕ್ಷಣಗಳು ಮಕ್ಕಳಲ್ಲಿ ಮುಂದುವರಿಯುವುದರಿಂದ ಇದರಿಂದ ಹುಟ್ಟುವ ಸಂತಾನವೂ ಆರೋಗ್ಯಕರವಾಗಿರುವುದಿಲ್ಲ.

ಗುಣ ಸ್ವಭಾವ, ಲಕ್ಷಣಗಳಲ್ಲಿ ವಧೂವರರು ಏಕರೀತಿಯಲ್ಲಿರುವುದು ಅತ್ಯವಶ್ಯಕ. ಬುದ್ಧಿವಂತಿಕೆ, ಶೀಲ, ಆಚಾರ, ವಿದ್ಯೆ, ಉತ್ಸಾಹ, ಸಹನೆ, ತಾಳ್ಮೆ ಮನೆ ಕೆಲಸದಲ್ಲಿ ಆಸಕ್ತಿ ಇವೇ ಮೊದಲಾದ ಗುಣಗಳು ಇಬ್ಬರಲ್ಲಿಯೂ ಸಮಾನವಾಗಿರಬೇಕು. ನಿಶ್ಚಿತಾರ್ಥವಾಗುವ ಮುನ್ನ ಇವೆಲ್ಲ ಸಂಗತಿಗಳನ್ನು ಗಂಡು–ಹೆಣ್ಣಿನ ತಂದೆ ತಾಯಿಗಳು ಹಿರಿಯರು ಶ್ರದ್ಧೆಯಿಂದ ಪರೀಕ್ಷಿಸಿ ತಿಳಿಯಬೇಕು. ವದುವಿನ ಎತ್ತರ ವರನ ಭುಜದ ಮಟ್ಟಕ್ಕೆ ಸಮನಾಗಿರಬೇಕು. ಇಬ್ಬರೂ ಉತ್ತಮವಾದ ದೇಹಾರೋಗ್ಯ ಹೊಂದಿರಬೇಕು.

ವದು ವರನಿಗಿಂತ ತೆಳ್ಳಗಿರಬೇಕು. ಇಷ್ಟೆಲ್ಲ ಅಂಶಗಳ ಪರೀಕ್ಷೆಯಾದ ಬಳಿಕ ಕನ್ಯೆ ಮತ್ತು ವರ ಒಬ್ಬರನ್ನೊಬ್ಬರು ಭೇಟಿಯಾಗಿ ಪರಸ್ಪರ ಮಾತುಕತೆಯ ಮೂಲಕ ಅಂತರಂಗ ಪರೀಕ್ಷೆ ಮಾಡಿಕೊಳ್ಳಬೇಕು. ಕನ್ಯೆಯು ವರನ ಬಗ್ಗೆ, ವರನೂ ಕನ್ಯೆಯ ಬಗ್ಗೆ ಪರೋಕ್ಷವಾಗಿ ವಿಚಾರ ಮಾಡಿ ತಿಳಿದುಕೊಳ್ಳುವುದು ಅತ್ಯವಶ್ಯ

ಯೌವ್ವನಾವಸ್ಥೆಯಲ್ಲಿರುವ ಹುಡುಗ ಮತ್ತು ಹುಡುಗಿ ವಿವಾಹವಾಗಲು ಪರಸ್ಪರ ನಿಶ್ಚಯಿಸಿದ ನಂತರ ತಮ್ಮ ತಮ್ಮಲ್ಲಿ ಮಾಡಿಕೊಂಡ ಪ್ರತಿಜ್ಞೆಯನ್ನು ವಿಧಿಬದ್ಧವಾಗಿ ದೃಢೀಕರಿಸಲು ಧೈರ್ಯೋತ್ಸಾಹಗಳಿಂದ ಮುಂದಿನ ಹೆಜ್ಜೆ ಇಡಬೇಕಾಗಿತ್ತು. ಈ ದೃಢೀಕರಣವೇ ವಿವಾಹ.

**೩.೯.೧.೪. ವಿವಾಹ ಸಂಸ್ಕಾರ:**

ವಿವಾಹ ಸಂಸ್ಕಾರ ವಿಧಿಗಳನ್ನು ಗೋತ್ರದ ದಿನದಂದು ಮಧ್ಯಾಹ್ನದ ನಂತರ ಪ್ರಾರಂಭಿಸಿ ಮಧ್ಯರಾತ್ರಿಯ ವೇಳೆಗೆ ಪೂರೈಸಬೇಕು. ಈಶ್ವರ ಸ್ತುತಿ, ಪ್ರಾರ್ಥನೆ, ಉಪಾಸನೆ, ಸ್ವಸ್ತಿವಾಚನ ಶಾಂತಿಕರಣಾಧಿ ವಿಧಿಗಳಿಂದ ಪ್ರಾರಂಭವಾಗುವ ವಿವಾಹ ವಿಧಿಗಳು ಈ ರೀತಿಯಾಗಿರುವವು.

ಕನ್ಯಾ ಪಿತೃವಿನ ಮನೆಗೆ ವರ ಮತ್ತು ವರನ ಬಂಧು ಬಳಗ ಆಗಮಿಸುವರು. ವಿವಾಹದ ದಿನದಿಂದ ಮಧ್ಯಾಹ್ನದ ವೇಳೆಗೆ, ಆ ಬಳಿಕ ಮದುಪರ್ಕವಿಧಿ, ವರನಿಗೆ ದ್ರವ್ಯದಾನ, ಕನ್ಯಾ ಪ್ರತಿಗ್ರಹಣ ವಿಧಿ, ವಧುವಿಗೆ ವರನ ಕಡೆಯಿಂದ ವಸ್ತ್ರ ನೀಡುವುದು, ವರನಿಗೆ ವಧುವಿನ ಕಡೆಯಿಂದ ವಸ್ತ್ರ ನೀಡುವುದು, ನಂತರ ಪ್ರಧಾನ ಹೋಮ, ಜಯಹೋಮ, ಅಭ್ಯಾಸಹೋಮ, ಅಜ್ಯಾಹುತಿ, ಪಾಣಿಗ್ರಹಣ, ಯಜ್ಞಕುಂಡದ ಪ್ರದಕ್ಷಿಣೆ, ಪ್ರತಿಜ್ಞಾವಿಧಿ, ಅಶ್ಮಾರೋಹಣ ವಿಧಿ, ಲಾಜಾ ಹೋಮ, ವಧುವಿನ ವೇಣಿ ಬಂಧನ ವಿಮೋಚನೆ, ಸಪ್ತಪದಿ ವಿಧಿ, ಸೂರ್ಯದರ್ಶನ, ಹೃದಯಸ್ಪರ್ಶಿವಿಧಿ, ಆಶೀರ್ವಾದ ಯಾಚನೆ, ಆಶಿರ್ವಾದಪ್ರಧಾನ, ಮೊದಲಾದ ಆಚರಣೆಗಳೊಂದಿಗೆ ವಿವಾಹ ಪೂರ್ವವಿಧಿಯು ಪೂರ್ಣಗೊಳ್ಳುವುದು. ಈ ಭಾಗವು ಸೂರ್ಯಾಸ್ತ ಸಮಯದ ವೇಳೆಗೆ ಅಂತ್ಯಗೊಳ್ಳಬೇಕು. ಸ್ವಲ್ಪ ವಿರಾಮದ ನಂತರ ಉತ್ತರ ವಿಧಿಯ ಪ್ರಾರಂಭ.

ವಿವಾಹದ ಉತ್ತರ ವಿಧಿಯ ಹೋಮ, ಹವನ, ಧ್ರುವತಾರಾದರ್ಶನ, ಅರುಂಧತೀದರ್ಶನ, ಓದನಾಹುತಿ, ಓದನ ಪ್ರಾಶನಾದಿ ವಿಧಿಗಳನ್ನು ಒಳಗೊಂಡಿರುತ್ತದೆ. ಇದಾದ ನಂತರ ಪುರೋಹಿತರನ್ನು ಹಾಗೂ ಅತಿಥಿಗಳನ್ನು ಊಟಮಾಡಿಸಿ ತಾಂಬೂಲಾದಿಗಳನ್ನು ಕೊಟ್ಟು ಅವರನ್ನು ಬೀಳ್ಕೊಡಬೇಕು.

ವಿವಾಹ ದಿನದಂದು ರಾತ್ರಿ ಹತ್ತು ಗಂಟೆಯ ಬಳಿಕ ವಧೂವರರು ಶಯ್ಯಾಗೃಹದಲ್ಲಿ ಬೇರೆ ಬೇರೆ ಹಾಸಿಗೆಯಲ್ಲಿ ಮಲಗಬೇಕು ಮತ್ತು ಮೂರು ರಾತ್ರಿಗಳ ಪರ್ಯಂತ ಸಂಗಮಿಸಬಾರದು. ನಾಲ್ಕನೆಯ ದಿನದಂದು ರಾತ್ರಿ ಗರ್ಭದಾನ ಮಾಡಬೇಕು. ಇದಾದ ಎರಡು–ಮೂರು ದಿನಗಳ ನಂತರ ವರನು ತನ್ನ ವಧುವನ್ನು ಸ್ವಗೃಹಕ್ಕೆ ಕರೆತರುವುದು ಸಂಪ್ರದಾಯ. ಒಂದು ವೇಳೆ ಮಾವನ ಮನೆಯಲ್ಲಿ ಗರ್ಭದಾನಕ್ಕೆ ಅವಕಾಶವಾಗದಿರುವ ಪಕ್ಷದಲ್ಲಿ ವಿವಾಹದ ತರುವಾಯ ವರನು ಪತ್ನಿಯೊಂದಿಗೆ ತನ್ನ ಮನೆಗೆ ಹಿಂತಿರುಗಬೇಕು ಮತ್ತು ಯಥಾ ಪ್ರಕಾರವಾಗಿ ನಾಲ್ಕನೇ ದಿನದಂದು ರಾತ್ರಿ ತನ್ನ ಮನೆಯಲ್ಲಿಯೇ ಗರ್ಭದಾನ ಮಾಡಬೇಕು.

ಸತ್ಯ ಧರ್ಮಾನುಸಾರವಾಗಿ ಸಂಸಾರವನ್ನು ಜವಾಬ್ದಾರಿಯಿಂದ ನಡೆಸುವುದೇ ವಿವಾಹಿತ ಪುರುಷನ ಧರ್ಮ. ವಿವಾಹ ವಿಧಿಗನುಸಾರವಾಗಿ ಸಂತಾನೋತ್ಪತ್ತಿ ಮಾಡಿ, ಗೃಹಸ್ಥನಾದವನು ತನ್ನ ಹೊಣೆಗಾರಿಕೆಯನ್ನು ನ್ಯಾಯ ಸಮ್ಮತವಾದ ರೀತಿಯಿಂದ ನಿರ್ವಹಿಸಿಕೊಂಡು ಬರುವುದು ಅತ್ಯವಶ್ಯಕ. ಈ ದಿಶೆಯಲ್ಲಿ ಅವನು ಅನಸರಿಸಬೇಕಾದ ವಿಧಿ–ವಿಧಾನಗಳು ಯಾವುದೆಂಬುದನ್ನು ಗೃಹಸ್ಥಾಶ್ರಮ ಧರ್ಮದಲ್ಲಿ ತಿಳಿಸಲಾಗಿದೆ.

ಸಮಾನಗುಣ, ಕರ್ಮ, ಸ್ವಭಾವವುಳ್ಳ ಕುಮಾರಿಯರ ವೈವಾಹಿಕ ಸಂಬಂಧ ಏರ್ಪಡಿಸುವುದು ಒಂದು ಸುಯೋಗವೇ ಸರಿ. ಕನ್ಯಾವರರ ಆಯ್ಕೆಯ ವಿಚಾರದಲ್ಲಿ ಎಷ್ಟೇ ಬುದ್ಧಿವಂತಿಕೆ ಉಪಯೋಗಿಸದರು ವಿಧಿಯ ಕೈವಾಡ ಇದ್ದೇ ಇರುತ್ತದೆ. ಪ್ರತಿಯೊಂದು ಕುಟುಂಬದಲ್ಲಿ ಪತಿ–ಪತ್ನಿಯರು ಅತ್ಯಂತ ಪ್ರಸನ್ನತೆಯಿಂದ ಕೂಡಿರಬೇಕು. ಅವರಲ್ಲಿ ಪರಸ್ಪರ ಪ್ರೀತಿ ವಿಶ್ವಾಸಗ್ಪಂದಿರಬೇಕು. ಯಾವುದೇ ಕಾರಣದಿಂದ ಕಲಹ ಉತ್ಪನ್ನವಾಗಬಾರದು. ಪತಿಯ ತನ್ನ ಪತ್ನಿಯನ್ನು ಸುಖ ಸಂತೋಷಗಳಿಂದಿರಲು ಎಲ್ಲಾ ರೀತಿಯ ಪ್ರಯತ್ನ ಮಾಡಬೇಕು. ಹಾಗೂ ಪತ್ನಿಯೂ ಸಹ ಪತಿಯು ಸದಾ ಹಸನ್ಮುಖಿಯಾಗಿರುವಂತೆ ನೋಡಿಕೊಳ್ಳಲು ಪ್ರಯತ್ನಿಸಬೇಕು. ತಮ್ಮ ಸಂಸಾರವು ಅಭಿವೃದ್ಧಿ ಹೊಂದಬೇಕಾದರೆ ಅಂತಹ ಇಚ್ಛೆ ಉಳ್ಳವರಾಗಿದ್ದರೆ ಯಾವ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಪತ್ನಿಯನ್ನು ಉತ್ತಮವಾದ ಉಡುಗೆ–ತೊಡುಗೆಗಳಿಂದ, ಆಹಾರ ಪಾನೀಯಗಳಿಂದ ಸಂತುಷ್ಟಗೊಳಿಸಬೇಕು. ಇದೇ ರೀತಿಯಾಗಿ ಪತ್ನಿಯಾದವಳು ಮನೆ ಕೆಲಸಗಳನ್ನು ನಿರ್ವಹಿಸುವುದರ ಜೊತೆಗೆ ಮನೆಯ ವಾತಾವರಣವನ್ನು ಸ್ವಚ್ಛವಾಗಿಟ್ಟುಕೊಂಡು ಪತಿಯನ್ನು ಸದಾಕಾಲ ಪ್ರೀತಿಯಿಂದ ನೋಡಿಕೊಳ್ಳಬೇಕು. ಪತಿಯನ್ನು ಸಂತುಷ್ಟಗೊಳಿಸದೇ ಹೋದರೆ ಅವನು ಅನ್ಯ ಸ್ತ್ರೀಯರ ಸಂಘ ಮಾಡುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

ಪತ್ನಿಯಾದವಳು ಪತಿಯ ಗುಣ ಲಕ್ಷಣಗಳನ್ನು ವರ್ಣನೆ ಮಾಡುತ್ತಿರಬೇಕು ಮತ್ತು ಅವನಿಗೆ ಅನುಕೂಲಳಾದ ಸತಿಯಾಗಿರಬೇಕು. ವೃದ್ಧ ಅತ್ತೆ-ಮಾವಂದಿರ ಯೋಗಕ್ಷೇಮ ನೋಡಿಕೊಳ್ಳಬೇಕು. ಸಂತಾನ ಫಲ ಪಡೆದು ಉತ್ತಮ ರೀತಿಯಲ್ಲಿ ಮಕ್ಕಳ ಲಾಲನೆ ಪಾಲನೆ ಮಾಡಬೇಕು. ಇಷ್ಟೇ ಅಲ್ಲದೆ ಐಶ್ವರ್ಯ ಪ್ರಾಪ್ತಿಯಾಗಿ ಪತಿಯ ಎಲ್ಲಾ ಕಾರ್ಯಗಳಲ್ಲಿಯೂ ಅವನೊಂದಿಗೆ ಸಹಕರಿಸಬೇಕು. ದುಷ್ಟರನ್ನು ಭೋಜನಾದಿಗಳಿಂದ ಸತ್ಕರಿಸಬಾರದು. ಆದರೆ ಸತ್‌ಚಾರಿತ್ರ್ಯ ಉಳ್ಳವರನ್ನು, ಬ್ರಹ್ಮಚಾರಿಗಳನ್ನು, ಸನ್ಯಾಸಿಗಳನ್ನು, ಅತಿಥಿಗಳನ್ನು ಸತ್ಕರಿಸಬೇಕು. ಜೂಜು, ಪಗಡೆ, ಪಂದ್ಯಾಟ, ಹಗಲುನಿದ್ದೆ, ಸುಳ್ಳು ಹೇಳುವುದು, ಮದ್ಯ ಸೇವನೆ, ವ್ಯಭಿಚಾರ ಇವೇ ಮೊದಲಾದ ದುಶ್ಚಟಗಳು ಸತಿಪತಿಯರಲ್ಲಿ ಕಂಡು ಬಂದರೆ ಆ ಮನೆ ಎಂದಿಗೂ ಉದ್ಧಾರವಾಗಲಾರದು.

ಜೀವನೋಪಾಯಕ್ಕಾಗಿ ಶಾಸ್ತ್ರ ವಿರುದ್ಧದ ಲೋಕಚಾರವನ್ನು ಎಂದಿಗೂ ಆಚರಿಸಬಾರದು. ನ್ಯಾಯಬಾಹಿರವಾದ, ಧರ್ಮಬಾಹಿರವಾದ ಮಾರ್ಗದಲ್ಲಿ ಹಣ ಸಂಪಾದಿಸುವ ಯತ್ನಕ್ಕೆ ಕೈ ಹಾಕಬಾರದು. ಗೃಹಸ್ಥಾಶ್ರಮದಲ್ಲಿ ದೊರಕುವ ತೃಪ್ತಿ, ಸುಖ, ಶಾಂತಿ ಶಾಶ್ವತ ಎಂಬ ವಿಚಾರವನ್ನು ಸತಿ ಪತಿಯರು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು.

**೩.೧೦. ಸೀಮಂತ:**

ಮದುವೆಯಾಗಿ ಒಂದು ವರ್ಷದೊಳಗೆ ಹೆಣ್ಣು ಗರ್ಭಿಣಿಯಾದರೆ ಮನೆ ಮಂದಿಗೆಲ್ಲ ಸಂತೋಷವಾಗುತ್ತದೆ. ಹೆಣ್ಣಿನ ತಂದೆ ತಾಯಿಗಳು ಈ ಸಂತಸವನ್ನು ಅನುಭವಿಸುತ್ತಾರೆ. ಒಂದು ವೇಳೆ ಮದುವೆಯಾದ ಹೆಣ್ಣು ಒಂದು ವರ್ಷದೊಳಗೆ ಗರ್ಭಿಣಿಯಾಗದಿದ್ದರೆ ಮನೆಯಲ್ಲಿ ಅತ್ತೆ, ಮಾವ ಕಂಡ ಕಂಡ ದೇವರಿಗೆ ಹರಕೆ ಹೊರುವುದುಂಟು. ಕಮ್ಮಾರರು ಚೊಚ್ಚಲ ಗರ್ಭಿಣಿಯಾದ ಹೆಣ್ಣಿಗೆ ಸೀಮಂತ ಮಾಡುವ ಸಂಪ್ರದಾಯವಿದೆ. ಇದಕ್ಕೆ ಉಡಿ ತುಂಬುವ ಶಾಸ್ತ್ರ ಎಂದೂ ಕರೆಯುವರು. ಗರ್ಭಿಣಿಯಾದ ಹೆಣ್ಣಿಗೆ ಆರೈಕೆ ಮಾಡುವುದರಲ್ಲಿ ಕಮ್ಮಾರರು ನಿಸ್ಸೀಮರು. ಮನೆಯಲ್ಲಿ ಅತ್ತೆ-ಮಾವ ಇವರಿಗೆ ಮೊಮ್ಮಕ್ಕಳನ್ನು ನೋಡಬೇಕು ಅವರನ್ನು ಎತ್ತಿ ಮುದ್ದಾಡಬೇಕು ಎಂಬ ಹೆಬ್ಬಯಕೆ ಹೊಂದಿದವರಾಗಿರುತ್ತಾರೆ. ಗರ್ಭಿಣಿ ಹೆಣ್ಣಿನ ಬಯಕೆಗಳನ್ನೆಲ್ಲ ತೀರಿಸುವ ಪ್ರಯತ್ನವನ್ನು ಮಾಡುತ್ತಾರೆ. ಸಾಲ ಮಾಡಿಯಾದರೂ ಅವಳ ಬಯಕೆ ತೀರಿಸಲು ಇವರು ಮುಂದಾಗುತ್ತಾರೆ. ಗರ್ಭಿಣಿ ಹೆಣ್ಣು ಮಕ್ಕಳಿಗೆ ದುಷ್ಟ ಶಕ್ತಿಗಳು ಬೇಗನೆ ಆವರಿಸಿಕೊಳ್ಳುತ್ತವೆ ಎಂಬ ನಂಬಿಕೆಯಿಂದ ಅವಳನ್ನು ಮದ್ಯಾಹ್ನ ಹಾಗೂ ರಾತ್ರಿ ಹೊತ್ತಿನಲ್ಲಿ ಎಲ್ಲಿಯೂ ಸುತ್ತಾಡಲು ಕಳಿಸುವುದಿಲ್ಲ. ಅಮಾವಾಸ್ಯೆ, ಗ್ರಹಣ ಮುಂತಾದ ಸಂದರ್ಭಗಳಲ್ಲಿ ಅವಳನ್ನು ಅತ್ಯಂತ ಜತನದಿಂದ ಕಾಪಾಡುತ್ತಾರೆ.

ಗರ್ಭಿಣಿಯರ ಬಯಕೆ ತೀರಿಸದಿದ್ದರೆ ಅವಳಿಗೆ ಹುಟ್ಟುವ ಮಕ್ಕಳು ಆರೋಗ್ಯವಂತರಾಗಿ ಹುಟ್ಟುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಹೀಗಾಗಿ ಗರ್ಭಿಣಿಯರ ಬಯಕೆ ತೀರಿಸಲು ಯತ್ನಿಸುತ್ತಾರೆ. ಗರ್ಭವತಿಗೆ ಮೂರು ತಿಂಗಳು ತುಂಬುತ್ತಿದ್ದಂತೆಯೇ ಅವಳಿಗೆ ಕಳ್ಳಕುಬಸ ಎಂಬ ಆಚರಣೆಯನ್ನು ಮಾಡುತ್ತಾರೆ. ಗರ್ಭಿಣಿಯರ ಬಯಕೆ ತೀರಿಸಲು ಯತ್ನಿಸುತ್ತಾರೆ. ಗರ್ಭವತಿಗೆ

ಹಸಿರು ಬಳೆ ತೊಡಸಿ, ಹೊಸ ಬಟ್ಟೆಗಳನ್ನು ತೊಡಿಸಿ ಅವಳಿಗೆ ಇಷ್ಟವಾದ ಆಹಾರವನ್ನು ಸಿದ್ದಪಡಿಸಿ ಊಟ ಮಾಡಿಸುತ್ತಾರೆ. ಈ ಮೂರು ತಿಂಗಳ ಒಳಗೆ ಅವಳು ಹೊಳೆ-ಹಳ್ಳ ಅಡ್ಡವಾಗಿ ದಾಟಬಾರದೆಂಬ ನಿಯಮವಿದೆ. ಒಂದು ವೇಳೆ ದಾಟಿದರೆ ಗಂಗಾಮಾತೆ ಸಿಟ್ಟಾಗಿ ಗರ್ಭದ ಮೇಲೆ ದುಷ್ಟ ಪರಿಣಾಮಗಳನ್ನು ಬೀರುತ್ತಾಳೆ ಮತ್ತು ಅವಳ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮಗಳನ್ನು ಉಂಟು ಮಾಡುತ್ತಾಳೆ ಎಂಬ ಬಲವಾದ ನಂಬಿಕೆ ಇದೆ.

ಗರ್ಭವತಿಗೆ ಏಳು ತಿಂಗಳು ತುಂಬಿದ ಮೇಲೆ ಅವಳ ತವರು ಮನೆಯವರಿಗೆ ಸೀಮಂತ ಕಾರ್ಯ ಮಾಡುವ ಶುಭ ದಿನದ ಬಗೆಗೆ ಗಂಡಿನ ಮನೆಯವರು ತಿಳಿಸುವರು. ಹೆಣ್ಣು ಮತ್ತು ಗಂಡಿನ ಮನೆಯವರು ಸೇರಿಕೊಂಡು ಈ ಸೀಮಂತ ಕಾರ್ಯವನ್ನು ಮಾಡುತ್ತಾರೆ. ಮತ್ತು ತಮ್ಮ ಬಂಧು-ಬಳಗದವರನ್ನು ಮಿತ್ರರನ್ನು ನೆರೆ, ಹೊರೆಯವರನ್ನು ಈ ಕಾರ್ಯಕ್ಕೆ ಆಹ್ವಾನಿಸುವರು.

ಸೀಮಂತಕಾರ್ಯ ಮಾಡುವ ದಿನ ಮುತ್ತೈದೆಯರು, ಗರ್ಭಿಣಿ ಹೆಣ್ಣಿಗೆ ಅರಿಷಿಣ, ಕೊಬ್ಬರಿಎಣ್ಣೆ ಹಚ್ಚಿ, ನೀರು ಹಾಕಿ ಸ್ನಾನ ಮಾಡಿಸಿ ಉತ್ತಮವಾದ ಉಡುಗೆ-ತೊಡುಗೆಗಳಿಂದ ಅಲಂಕರಿಸುತ್ತಾರೆ. ಕುಲ ದೈವದ ಮುಂದೆ ಅವಳನ್ನು ಕರೆದುಕೊಂಡು ಹೋಗಿ ಕುಳ್ಳರಿಸಿ ಮೊದಲು ಅರಿಶಿಣ, ಕುಂಕುಮ, ದೃಷ್ಟಿ ಕಾಡಿಗೆ ಹಚ್ಚಿ, ಮುತ್ತೈದೆಯರು ಆರತಿ ಮಾಡುತ್ತಾರೆ. ನಂತರ ಈ ಸಮಾರಂಭಕ್ಕೆ ಆಗಮಿಸಿದವರಿಗೆಲ್ಲ ಊಟದ ವ್ಯವಸ್ಥೆ ಮಾಡಿರುತ್ತಾರೆ. ಗರ್ಭಿಣಿ ಇಷ್ಟ ಪಡುವ ಆಹಾರ ಪದಾರ್ಥಗಳನ್ನೇ ಸಿದ್ಧಪಡಿಸಿ ಅವಳಿಗೆ ತೃಪ್ತಿಯಾಗುವಂತೆ ಊಟ ಮಾಡಿಸುತ್ತಾರೆ. ಸಾಯಂಕಾಲ ವಿಶಾಲವಾದ ಸ್ಥಳದಲ್ಲಿ ಅವಳನ್ನು ಕುಳ್ಳರಿಸಿ ಮುತ್ತೈದೆಯರು ಅವಳಿಗೆ ಹಣ್ಣು, ಕಾಯಿ, ಎಲೆ, ಅಡಿಕೆ, ಅರಿಶಿಣ ಬೇರು, ಮುಂತಾದವುಗಳಿಂದ ಉಡಿ ತುಂಬುತ್ತಾರೆ. ಸಾಮಾನ್ಯವಾಗಿ ಗರ್ಭಿಣಿಗೆ ಹಸಿರು ಬಣ್ಣದ ಸೀರೆಯನ್ನು ಮತ್ತು ಬಳೆಯನ್ನು ಉಡಿಸುವುದು ಸಂಪ್ರದಾಯ. ನಂತರ ಆರತಿ ಮಾಡಿ ಅವಳನ್ನು ಸಂತೋಷ ಪಡಿಸಲು ಅನೇಕ ಸೋಬಾನೆ ಪದಗಳನ್ನು ಹಾಡುವರು. ಈ ಸಮಾರಂಭಕ್ಕೆ ಬಂದ ಅತಿಥಿಗಳು ಅವಳಿಗೆ ಉಡುಗೊರೆಗಳನ್ನು ಕೊಡುತ್ತಾರೆ. ಈ ಕಾರ್ಯಕ್ರಮ ಮುಗಿದ ಮೇಲೆ ಅವಳನ್ನು ಹೆರಿಗೆಗೆ ತವರು ಮನೆಗೆ ಕಳುಹಿಸುತ್ತಾರೆ. ತವರು ಮನೆಗೆ ಕಳುಹಿಸುವ ಸಂದರ್ಭದಲ್ಲಿಯೂ ಅವಳಿಗೆ ಉಡಿ ತುಂಬುತ್ತಾರೆ. ಕೆಲವರು ಉಡಿಯಲ್ಲಿ ಮಸರನ್ನವನ್ನು ತುಂಬುವ ಸಂಪ್ರದಾಯ ಬೆಳೆಸಿಕೊಂಡಿದ್ದಾರೆ ಮಸರನ್ನ ತನುವಿನ ಸಂಕೇತ ಎಂಬ ಭಾವನೆ ಇವರಲ್ಲಿದೆ.

ಗಂಡನ ಮನೆಯಲ್ಲಿ ಸೀಮಂತ ಕಾರ್ಯವನ್ನು ಮಾಡಿದ ಮೇಲೆಯೇ ತವರು ಮನೆಯಲ್ಲಿ ಅವಳ ಬಂಧು, ಬಳಗದವರು ಉಡಿ ತುಂಬುವ ಕಾರ್ಯ ಮಾಡುತ್ತಾರೆ. ಅನೇಕರು ಅವಳು ಇಷ್ಟಪಡುವ ಆಹಾರ ಪದಾರ್ಥಗಳನ್ನು ಸಿದ್ಧಪಡಿಸಿ ಊಟ ಮಾಡಿಸುತ್ತಾರೆ.

ಗ್ರಹಣದ ಸಂದರ್ಭದಲ್ಲಿ ಗರ್ಭಿಣಿಯರು ಅತ್ಯಂತ ಎಚ್ಚರಿಕೆ ಹಾಗೂ ಕಟ್ಟುನಿಟ್ಟಿನಿಂದ ಇರಬೇಕಾಗುತ್ತದೆ ಎಂದು ಕಮ್ಮಾರರ ಹಿರಿಯರು ಹೇಳುತ್ತಾರೆ. ಗ್ರಹಣ ಹಿಡಿಯುವುದಕ್ಕಿಂತ ಮೊದಲೆ ಅಂದರೆ ವೇದ ಕಾಲಗಳು ಪ್ರಾರಂಭವಾಗುವುದಕ್ಕಿಂತ ಮೊದಲೇ ಗರ್ಭಿಣಿ ಹೆಣ್ಣು ಸ್ನಾನ ಪೂಜೆ

ಮಾಡಿ ಆಹಾರವನ್ನು ಸೇವಿಸಬೇಕು. ಗ್ರಹಣದ ಪ್ರಾರಂಭದಿಂದ ಗ್ರಹಣ ಮುಗಿಯುವವರೆಗೆ ಯಾವ ಕೆಲಸಗಳನ್ನು ಮಾಡಬಾರದು ಹಾಗೂ ಈ ಸಂದರ್ಭದಲ್ಲಿ ಒಂದು ಹನಿ ನೀರನ್ನು ಸೇವಿಸಬಾರದು ಎಂಬ ಕಟ್ಟಾ ನಿಯಮವಿದೆ. ಗ್ರಹಣದ ಸಂದರ್ಭದಲ್ಲಿ ಕೆಲಸ ನಿರ್ವಹಿಸಿದರೆ, ನೀರು ಚಹಾ ಇತ್ಯಾದಿ ಸೇವಿಸಿದರೆ ಹುಟ್ಟುವ ಮಗುವಿನ ಆರೋಗ್ಯ ಸರಿಯಾಗಿರುವುದಿಲ್ಲ ಹಾಗೂ ಅಂಗಾಂಗಗಳಲ್ಲಿ ನ್ಯೂನತೆ ಕಂಡು ಬರುತ್ತದೆ ಎಂಬ ಪರಿಕಲ್ಪನೆ ಇವರಲ್ಲಿದೆ.

ಒಟ್ಟಿನಲ್ಲಿ ಗರ್ಭಿಣಿಯರನ್ನು ಅತ್ಯಂತ ಸಂತೋಷದಿಂದ ಇರುವ ಹಾಗೆ ನೋಡಿಕೊಳ್ಳುವ ಸತ್‌ಸಂಪ್ರದಾಯ ಕಮ್ಮಾರರಲ್ಲಿರುವುದು ಕಂಡು ಬರುತ್ತದೆ. ಗರ್ಭಿಣಿಯ ಮಾನಸಿಕ ಆಚಾರ, ವಿಚಾರ, ಆಹಾರ ವಿಹಾರಗಳ ಪ್ರಭಾವವು ಗರ್ಭದೊಳಗೆ ಮಗುವಿನ ಮೇಲೆ ಬೀರುತ್ತದೆ. ಈ ಕಾರಣಗಳಿಂದ ಅವಳ ಶಾರೀರಕ ಮಾನಸಿಕ, ಭೌದ್ದಿಕ ಸ್ಥಿತಿಯು ಉತ್ತಮವಾಗಿರುವಂತೆ ನೋಡಿಕೊಳ್ಳಬೇಕಾದದ್ದು ಕರ್ತವ್ಯವಾಗಿರುತ್ತದೆ. ಹೀಗಾಗಿ ಅವಳನ್ನು ಸಂತೋಷ ಪಡಿಸುವ ಎಲ್ಲ ಬಯಕೆಗಳನ್ನು ಈ ಸಂದರ್ಭದಲ್ಲಿ ಪೂರೈಸಬೇಕಾಗುತ್ತದೆ.

**೩.೧೧. ಸಾವು:**

ಮಾನವನ ಜೀವನದಲ್ಲಿ ಹುಟ್ಟು, ಮದುವೆ ಮುಂತಾದ ಸಂದರ್ಭಗಳಲ್ಲಿ ಆಚರಿಸಿಕೊಳ್ಳುವ ಆಚರಣೆಗಳಿಗಿಂತ ಸಾವಿನ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಬಹಳ ವಿಶಿಷ್ಟವಾಗಿರುತ್ತವೆ. ಮನುಷ್ಯ ತನ್ನ ಬದುಕಿನ ಕಾಲದಲ್ಲಿ ಆಚರಿಸಿಕೊಳ್ಳುವ ಕೆಲ ಆಚರಣೆಗಳಲ್ಲಿ ಕೊರತೆಗಳಾದರೂ ನಡೆಯುತ್ತದೆ. ಸತ್ತವರಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಹೆಚ್ಚು ಕಡಿಮೆಯಾದರೆ ಸತ್ತ ವ್ಯಕ್ತಿಯ ಆತ್ಮ ಇವರನ್ನು ಕಾಡುತ್ತದೆ ಎಂಬ ಬಲವಾದ ನಂಬಿಕೆ ಇದೆ. ಈ ಕಾರಣಕ್ಕಾಗಿ ಎಷ್ಟೇ ಕಷ್ಟ ಬಂದರೂ ಸತ್ತ ವ್ಯಕ್ತಿಯ ಕ್ರಿಯೆಗಳನ್ನು ಚಾಚೂ ತಪ್ಪದೇ ಆಚರಿಸುವುದನ್ನು ಕಾಣುತ್ತೇವೆ. ಶವ ಸಂಸ್ಕಾರಕ್ಕೆ ಸಂಬಂಧಿಸಿದ ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಮತ್ತು ಅವರ ಆರ್ಥಿಕ ಸ್ಥಿತಿಗತಿಗಳಿಗನುಗುಣವಾಗಿ ಭಿನ್ನವಾಗಿರುವುದನ್ನು ಕಾಣುತ್ತೇವೆ. ಈ ಆಚರಣೆಗಳು ಪರಂಪರಾನುಗತವಾಗಿ ಬೆಳೆದುಕೊಂಡು ಬಂದಿರುತ್ತವೆ.

"ಭೂಮಿಯ ಮೇಲೆ ಜನ್ಮತಾಳಿದ ಪ್ರತಿಯೊಂದು ಜೀವಿಗೆ ಸಾವು ಅನಿವಾರ್ಯ. ಇದು ಸೃಷ್ಟಿಯ ನಿಯಮ. ಸಾವಿನಾಚೆಯ ಬದುಕನ್ನು ಕುರಿತು ಹಿಂದಿನಿಂದಲೂ ಜಿಜ್ಞಾಸೆ ನಡೆದಿದೆ. ಸಾವು ಎಂದಾಗ ಅದು ಭೌತಿಕ ಶರೀರಕ್ಕೆ ಅನ್ವಯಿಸುವಂತದ್ದೇ?, ಆತ್ಮಕ್ಕೆ ಸಾವಿಲ್ಲವೇ? ಹಾಗಾದರೆ ವ್ಯಕ್ತಿಯ ಆತ್ಮದ ಅಸ್ತಿತ್ವವೇನು? ಪುನರ್ಜನ್ಮ ಉಂಟೆ? ಮುಂತಾದ ವಿಚಾರಗಳನ್ನು ಕುರಿತು ಚರ್ಚೆ ನಡೆಯುತ್ತಲೇ ಬಂದಿದೆ"[೨] ಸತ್ತವನ ದೇಹಕ್ಕೆ ಸಲ್ಲಿಸುವ ಗೌರವವೇ ಶವಸಂಸ್ಕಾರ. ನಂತರ ಆತನ ಆತ್ಮಕ್ಕೆ ಶಾಂತಿ ಸಿಗಲೆಂದು ಉತ್ತರ ಕ್ರಿಯೆಗಳನ್ನು ಆಚರಿಸುತ್ತಾರೆ. "ಅಂತ್ಯ ಸಂಸ್ಕಾರಗಳ ವಿಧಿಗಳಲ್ಲಿ ವ್ಯಕ್ತಿಯೊಬ್ಬ ಮರಣ ಹೊಂದಿದ ಕ್ಷಣದಿಂದ ಹಿಡಿದು ಸತ್ತವನ ಆತ್ಮವನ್ನು ಪೂರ್ವಜರ ಆತ್ಮಗಳೊಂದಿಗೆ ಸೇರಿಸುವವರೆಗೆ ಹಲವಾರು ಆಚರಣೆಗಳು ನಡೆಯುತ್ತವೆ". ಈ ಆಚರಣೆಗಳನ್ನು

ದೇಹ ಸಂಸ್ಕಾರದ ಅಚರಣೆಗಳು ಮತ್ತು ಆತ್ಮ ಸಂಸ್ಕಾರಕ್ಕೆ ಸಂಬಂಧಿಸಿದ ಆಚರಣೆಗಳೆಂದು ಗುರುತಿಸಿಬಹುದು. ದೇಹ ಸಂಸ್ಕಾರಕ್ಕೆ ಸಂಬಂಧಿಸಿದ ಆಚರಣೆ ಸತ್ತ ದಿನ ಅಂದರೆ ಶವವನ್ನು ಚಿತೆಗೆ ಅಥವಾ ಮಣ್ಣು ಮಾಡುವವರೆಗೆ ನಡೆಯುವ ಕ್ರಿಯೆ. ಈ ಕ್ರಿಯೆಯ ನಂತರ ಮೂರು, ಐದು, ಏಳು, ಒಂಭತ್ತು, ಹನ್ನೊಂದು ಮತ್ತು ಇಪ್ಪತ್ತೊಂದು ದಿನಗಳವರೆಗೆ ಆಯಾ ಸಮುದಾಯಗಳಲ್ಲಿ ಪ್ರಚಲಿತಲ್ಲಿದ್ದಂತೆ ಅಂತ್ಯ ಸಂಸ್ಕಾರಕ್ಕೆ ಸಂಬಂಧಿಸಿದ ವಿಧಿ-ವಿಧಾನಗಳು ನಡೆಯುತ್ತವೆ. ಮಾನವನ ದೇಹ ಪಂಚಭೂತಗಳಿಂದ ನಿರ್ಮಾಣವಾದಂತಹದ್ದು. ವ್ಯಕ್ತಿ ಸತ್ತ ನಂತರ ಅವನ ಭೌತಿಕವಾದ ಶರೀರಕ್ಕೆ ಸಂಸ್ಕಾರ ಮಾಡಿದರೆ, ದೇಹ ಪ್ರಕೃತಿಯಲ್ಲಿನ ಪಂಚಭೂತಗಳೊಂದಿಗೆ ಸೇರಿಕೊಳ್ಳುತ್ತದೆ. ವ್ಯಕ್ತಿಯ ಆತ್ಮ ಆ ದೇಹದಲ್ಲಿರುತ್ತದೆ. ಹೆಣಕ್ಕೆ ಸಂಸ್ಕಾರ ಮಾಡಿದ ನಂತರ ಆತ್ಮ ಸ್ಮಶಾನದಲ್ಲೋ, ಮರಗಿಡಗಳಲ್ಲೋ ಇರುತ್ತದೆ. ಈ ಆತ್ಮಕ್ಕೂ ಸರಿಯಾದ ಸಂಸ್ಕಾರ ದೊರೆತ ಮೇಲೆ ಅದು ಪೂರ್ವಜರ ಹತ್ತಿರ ಹೋಗುತ್ತದೆ. ಆತ್ಮಕ್ಕೆ ಸಂಬಂಧಿಸಿದ ವಿಧಿಕ್ರಿಯೆಗಳನ್ನು ಸರಿಯಾಗಿ ಮಾಡದೇ ಇದ್ದರೆ ಅದು ಭೂತ, ಪ್ರೇತ, ದೆವ್ವ ಅಥವಾ ಗಾಳಿಯಾಗಿ ಮಾನವರನ್ನು ಕಾಡುತ್ತದೆ ಎಂಬ ನಂಬಿಕೆ ಎಲ್ಲಾ ಸಮುದಾಯಗಳಲ್ಲಿರುವುದು ಸಾಮಾನ್ಯ. ಕಮ್ಮಾರರು ಇದರಿಂದ ಹೊರತಾಗಿಲ್ಲ.

ಕಮ್ಮಾರರಲ್ಲಿ ಶವಸಂಸ್ಕಾರಕ್ಕೆ ಸಂಬಂಧಿಸಿದಂತೆ ಅನೇಕ ಆಚರಣೆಗಳುಂಟು. ಮಗು ಚಿಕ್ಕದಾಗಿದ್ದಾಗ ಉಪನಯನವಾಗದೇ ಇದ್ದಾಗ, ಮದುವೆಯಾಗದೇ ಇದ್ದರೆ, ಗರ್ಭಿಣಿಯರು ತೀರಿಕೊಂಡರೆ ವಿವಿಧ ರೀತಿಯಲ್ಲಿ ಸಂಸ್ಕಾರ ನಡೆಸುವುದು ತಿಳಿಯುತ್ತದೆ.

ಚಿಕ್ಕಮಕ್ಕಳು ಮತ್ತು ಉಪನಯನವಾಗದೇ ತೀರಿಕೊಂಡವರನ್ನು ಇವರು ಕುಣಿ ತೊಡಿ ಅದರಲ್ಲಿ ಶವವನ್ನಿಟ್ಟು ಮೇಲೆ ಮಣ್ಣು ಮುಚ್ಚುವರು. ಉಪನಯನ ಮಾಡಿಸಿಕೊಂಡು ಮದುವೆಯಾಗದೆ ಸತ್ತಿದ್ದರೆ ಆ ಶವವನ್ನು ತಂಗಡಿ ಗಿಡಕ್ಕೆ ಮದುವೆ ಮಾಡಿಸಿ ನಂತರ ಶವವನ್ನು ಚಿತೆಯಲ್ಲಿಟ್ಟು ಬೆಂಕಿ ಹಚ್ಚುತ್ತಾರೆ. ಗರ್ಭಿಣಿಯರು ತೀರಿಕೊಂಡಿದ್ದರೆ ಶವವನ್ನು ಚಿತೆಯ ಮೇಲಿಟ್ಟು ಅವಳ ಹೊಟ್ಟೆಯ ಮೇಲೆ ಬಾಳೆ ಎಲೆ ಇಟ್ಟು ಅದನ್ನ ಎರಡು ಭಾಗ ಮಾಡಿ ಬೆಂಕಿ ಹಚ್ಚುವರು.

ಕಮ್ಮಾರರಲ್ಲಿ ಸತ್ತ ವ್ಯಕ್ತಿಯ ಕಾಲುಗಳನ್ನು ತಕ್ಷಣ ಮಡಚಿ ಮನೆಯಲ್ಲಿಯ ವಿಶಾಲವಾದ ಸ್ಥಳದಲ್ಲಿ ಶವವನ್ನು ಮಲಗಿಸುತ್ತಾರೆ ಮತ್ತು ಬಂಧು-ಬಳಗದವರಿಗೆಲ್ಲ ಅಂತಿಮ ದರ್ಶನ ಪಡೆಯಲು ಹೇಳಿ ಕಳುಹಿಸುತ್ತಾರೆ. ಎಲ್ಲರೂ ಬಂದು ಶವಕ್ಕೆ ಮಾಲಿ ಹಾಕಿ, ಪೂಜೆ ಮಾಡಿ ನಮಸ್ಕರಿಸುತ್ತಾರೆ. ಸತ್ತ ವ್ಯಕ್ತಿ ಒಳ್ಳೆಯ ಮೂಹೂರ್ತದಲ್ಲಿ ಸತ್ತಿದ್ದರೆ ಯಾವ ತೊಂದರೆ ಇಲ್ಲ ಎಂದು ತಿಳಿದುಕೊಳ್ಳುತ್ತಾರೆ. ಅವನು ಕೆಟ್ಟ ಮೂಹೂರ್ತದಲ್ಲಿ ಸತ್ತಿದ್ದರೆ ಅವನಿಗಾಗಿ ಒಂದು ಮೈದಾ ಹಿಟ್ಟಿನಿಂದ ಗೊಂಬೆಯನ್ನು ಸಿದ್ಧಪಡಿಸಿ ಶವದ ಜೊತೆಗೆ ಅದನ್ನು ತೆಗೆದುಕೊಂಡು ಹೋಗಿ ಅದನ್ನು ಚಿತೆಯಲ್ಲಿಟ್ಟು ಸುಡುತ್ತಾರೆ.

ಕಮ್ಮಾರರಲ್ಲಿ ಶವವನ್ನು ಸುಡುವ ಸಂಪ್ರದಾಯವಿದೆ. ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಲು ಚಟ್ಟವನ್ನು ಬಳಸುತ್ತಾರೆ. ಶವವನ್ನು ಮಲಗಿಸಿಕೊಂಡು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ. ಹೆಣವನ್ನು ಮನೆಯ ಹೊರಗೆ ತಂದು ಮನೆಯ ಮುಂದೆ ಮಣ್ಣಿನ ಗಡಿಗೆಯಲ್ಲಿ

ಕಾಯಿಸಿದ ನೀರಿನಿಂದ ಸ್ನಾನ ಮಾಡಿಸುತ್ತಾರೆ. ತಲೆಗೆ ಎಣ್ಣೆ ಹಚ್ಚುತ್ತಾರೆ. ನಂತರ ಶವವನ್ನು ಚಟ್ಟದ ಮೇಲೆ ಮಲಗಿಸಿ ಶವದ ಮೇಲೆ ಬಿಳಿ ಬಟ್ಟೆಯನ್ನು ಕಟ್ಟುತ್ತಾರೆ. ಹಿರಿಯ ಮಗ ತಲೆಗೂದಲನ್ನು ಬೋಳಿಸಿಕೊಂಡು ಬೆಂಕಿಯ ಕೆಂಡವಿರುವ ಮಣ್ಣಿನ ಮಡಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಶವದ ಜೊತೆಗೆ ಹೋಗುತ್ತಾನೆ. ಸ್ಮಶಾನದಲ್ಲಿ ಶವವನ್ನು ಚಿತೆಗೆ ಮೂರು ಸಲ ಅಪ್ರದಕ್ಷಣಿ ಹಾಕಿಸುತ್ತಾರೆ. ನಂತರ ಶವವನ್ನು ಚಿತೆಯ ಮೇಲೆ ಮಲಗಿಸುತ್ತಾರೆ. ಕೆಲವರು ಹೆಣದ ಮೇಲಿರುವ ಎಲ್ಲ ಬಟ್ಟೆಗಳನ್ನು ಬಿಚ್ಚುತ್ತಾರೆ. ಹಿರಿಯ ಮಗ ನೀರು ತುಂಬಿರುವ ಮಣ್ಣಿನ ಮಡಿಕೆಯನ್ನು ಹೆಗಲ ಮೇಲೆ ಹೊತ್ತುಕೊಂಡು ಚಿತೆಗೆ ಮೂರು ಸಲ ಅಪ್ರದಕ್ಷಣಿ ಹಾಕುತ್ತಾನೆ. ಒಬ್ಬ ಹಿರಿಯ ಪ್ರತಿ ಸಲ ಪ್ರದಕ್ಷಣೆ ಹಾಕಿದಾಗ ಒಂದು ಹರಳಿನಿಂದ ಮಣ್ಣಿನ ಮಡಿಕೆಗೆ ತೂತು ಮಾಡುತ್ತಿರುತ್ತಾನೆ. ಮೂರನೆಯ ಸುತ್ತ ಅಪ್ರದಕ್ಷಣಿ ಹಾಕಿದ ಮೇಲೆ ಚಿತೆಗೆ ಬೆಂಕಿ ಹಚ್ಚಿ ಆ ಮಣ್ಣಿನ ಮಡಿಕೆಯನ್ನು ನೆಲಕ್ಕೆ ಚಲ್ಲಿ ಹಿಂತಿರುಗಿ ನೋಡದೇ ಹೋಗುತ್ತಾನೆ. ನಂತರ ಶವ ಸಂಸ್ಕಾರಕ್ಕೆ ಬಂದವರೆಲ್ಲ ಸತ್ತವನ ಮನೆಗೆ ಬಂದು ಅಲ್ಲಿ ಹಚ್ಚಿರುವ ಜ್ಯೋತಿಯನ್ನು ನೋಡಿ ತಮ್ಮ ತಮ್ಮ ಮನೆಗಳಿಗೆ ಹೋಗುತ್ತಾರೆ.

ಶವಸಂಸ್ಕಾರ ಮಾಡಿದ ಮಾರನೆಯ ದಿನ ಬೂದಿ ಬಳಿಯಲು ಹೋಗುತ್ತಾರೆ. ಅಂದು ಅಸ್ಥಿಗಳನ್ನು ಆರಿಸಿ ಒಂದೆಡೆ ಸಂಗ್ರಹಿಸಿಡುತ್ತಾರೆ. ಮಣ್ಣಿನ ಮಡಿಕೆಯನ್ನು ಒಡೆಯಲು ಬಳಸಿದ ಕಲ್ಲುಗಳನ್ನು ಚಿತೆಗೆ ಬೆಂಕಿ ಹಚ್ಚಿದ ವ್ಯಕ್ತಿ, ಸ್ಮಶಾನಕ್ಕೆ ಹೋಗಿ ಪ್ರತಿದಿನವೂ ಅವುಗಳನ್ನು ಪೂಜಿಸಬೇಕು. ಒಂಬತ್ತನೆಯ ದಿನಕ್ಕೆ ಅಸ್ಥಿಯನ್ನು ತೆಗೆದುಕೊಂಡು ಹೊಳೆಗೆ ಹೋಗಿ ಅಲ್ಲಿ ಅಸ್ಥಿ ಪೂಜಿಸಿ ಅದನ್ನ ಹೊಳೆಯಲ್ಲಿ ಬಿಡುತ್ತಾರೆ ಮತ್ತು ಒಂದು ಪಾತ್ರೆಯಲ್ಲಿ ಅನ್ನ ಮಾಡಿ ಅದಕ್ಕೆ ಕುಂಕುಮ ಬೆರೆಸಿ ಕಾಗೆಗಳಿಗೆ ಪಿಂಡವಾಗಿ ಕೊಡುತ್ತಾರೆ. ಈ ಪಿಂಡವನ್ನು ಕಾಗೆಗಳು ಸ್ವೀಕರಿಸದೇ ಹೋದರೆ, ಸತ್ತ ವ್ಯಕ್ತಿ ಏನೋ ಆಸೆಯಿಟ್ಟುಕೊಂಡು ಸತ್ತಿದ್ದಾನೆಂದೂ ಮತ್ತು ಅವನ ಆಸೆಯನ್ನು ಪೂರೈಸುತ್ತೇನೆಂದು ತಿಳಿಸಿದಾಗ ಕಾಗೆಗಳು ಬರುತ್ತವೆ. ಹನ್ನೊಂದನೆಯ ದಿನದವರೆಗೆ ಮನೆಯವರಿಗೆಲ್ಲ ಸೂತಕವಿರುತ್ತದೆ. ಹನ್ನೊಂದನೆಯ ದಿನ ಮನೆಯಲ್ಲ ಸಾರಿಸಿ, ಸುಣ್ಣ ಬಣ್ಣ ಹಚ್ಚಿ, ಗೋಮೂತ್ರ ಸಿಂಪಡಿಸಿ ಶುದ್ಧರಾಗುತ್ತಾರೆ. ಹನ್ನೆರಡನೆಯ ದಿನ ದಿನದ ಕಾರ್ಯ ಮಾಡುತ್ತಾರೆ. ಆ ದಿನ ಸತ್ತ ವ್ಯಕ್ತಿಯ ಬಂಧು-ಬಳಗದವರೆಲ್ಲ ಸೇರುತ್ತಾರೆ. ಸತ್ತ ವ್ಯಕ್ತಿಯ ಭಾವಚಿತ್ರವನ್ನಿಟ್ಟು ಪೂಜೆ ಮಾಡಿ ಅವನಿಗಾಗಿ ವಿಶೇಷ ಆಹಾರ ಪದಾರ್ಥಗಳನ್ನು ಸಿದ್ಧಪಡಿಸಿ ನೈವೇದ್ಯ ಹಿಡಿದು ಅದನ್ನು ಆಕಳಿಗೆ ಕೊಡುತ್ತಾರೆ. ಹೆಣವನ್ನು ಹೊತ್ತವರ ಬಾರವನ್ನ ಹನ್ನೆರಡನೆಯ ದಿನ ಇಳಿಸುತ್ತಾರೆ. ಅವರಿಗೆ ಅಂದು ಹೊಸ ಜನಿವಾರ ಕೊಡುತ್ತಾರೆ. ನಂತರ ಎಲ್ಲರೂ ಊಟ ಮಾಡುತ್ತಾರೆ.

ಪ್ರತಿ ವರ್ಷ ಸರ್ವಪಿತೃ ಅಮವಾಸ್ಯೆಯ ದಿನ ಹಿರಿಯರ ಪೂಜೆ ಮಾಡಿ ಅವರ ಆತ್ಮಗಳನ್ನು ಸಂತೃಪ್ತಿ ಪಡಿಸುವ ಸಂಪ್ರದಾಯ ಕಮ್ಮಾರರ ಸಮುದಾಯದಲ್ಲಿದೆ.

ಮಂಗಳೂರು ಮತ್ತು ಉಡುಪಿ ಪರಿಸರದ ವಿಶ್ವಕರ್ಮರು ಅಥವಾ ಕಮ್ಮಾರರು ವೈದಿಕ ಧರ್ಮದ ಪ್ರಭಾವಕ್ಕೆ ಇತ್ತಿತ್ತಲಾಗಿ ಅಂದರೆ ಸುಮಾರು ಎರಡು ದಶಕಗಳೊಳಗಾಗಿ ಒಳಗಾಗಿದ್ದರಿಂದ

ಅವರ ಶವಸಂಸ್ಕಾರದ ಆಚರಣೆಗಳಲ್ಲಿ ದಿನ ಕರ್ಮ ಮಾಡುವ ಸಂಪ್ರದಾಯದಲ್ಲಿ ಭಿನ್ನತೆ ಕಂಡು ಬರುತ್ತದೆ. ಪರಂಪರಾನುಗತವಾಗಿ ನಡೆದುಕೊಂಡು ಬಂದ ಆಚರಣೆಗಳು ಹೇಗಿದ್ದವು ಎಂಬುದನ್ನು ಈ ಹಿಂದೆ ವಿವರಿಸಲಾಗಿದೆ. ವೈದಿಕ ಧರ್ಮದ ಪ್ರಭಾವದಿಂದ ಈ ಆಚರಣೆಗಳು ಹೇಗೆ ಸ್ಥಿತ್ಯಂತರಗಳಾಗಿವೆ ಎಂಬುದನ್ನು ಗಮನಿಸಬಹುದಾಗಿದೆ.

ಮಾನವ ಜೀವಿಯು ಸೃಷ್ಟಿಯಾಗಲು ನೆರವೇರಿಸುವ ಗರ್ಭದಾನ ಸಂಸ್ಕಾರವು ಪ್ರಪ್ರಥಮ ಸಂಸ್ಕಾರವಾದರೆ ಅಂತ್ಯ ಸಂಸ್ಕಾರವು ಅವನ ಜೀವನದ ಕೊನೆಯ ಸಂಸ್ಕಾರ. ನಂತರ ಮೃತನಿಗೂ ಅವನ ಸಂಬಂಧಿಕರಿಗೂ ಯಾವುದೇ ನಂಟು ಇಲ್ಲ. ಆದ್ದರಿಂದ ಕಟ್ಟಕಡೆಯ ಶವದಹನ ಸಂಸ್ಕಾರವನ್ನು ಅಂತ್ಯೇಷ್ಟೆ ಎಂಬುದಾಗಿ ಕರೆದಿರುವುದು ಸಮಂಜಸ. ಶರೀರವು ಬೆಂಕಿಯಲ್ಲಿ ಸುಟ್ಟು ಭಸ್ಮವಾಗುವುದು ಅದರ ಅಂತ್ಯವನ್ನು ಸಾರಿ ಹೇಳುತ್ತದೆ.

**೩.೧೧.೧. ಶವ ಸಂಸ್ಕಾರ ವಿಧಿ:**

ಮೃತನ ಮನೆಯಲ್ಲಿ ಮೃತದೇಹಕ್ಕೆ ಸ್ನಾನ ಮಾಡಿಸಬೇಕು. ಆ ನಂತರ ಆ ದೇಹಕ್ಕೆ ಸುಗಂಧ ದ್ರವ್ಯಗಳನ್ನು ಲೇಪಿಸಿ ಹೊಸಬಟ್ಟೆ ಉಡಿಸಬೇಕು. ನಂತರ ಮೃತದೇಹವನ್ನು ಸ್ಮಶಾನಕ್ಕೆ ಕೊಂಡ್ಯೊಯಬೇಕು.

ಸ್ಮಶಾನದಲ್ಲಿ ಉತ್ತರ–ದಕ್ಷಿಣವಾಗಿ ಸುಮಾರು ಎಂಟು ಅಡಿಗಳ ಉದ್ದ, ಪೂರ್ವ–ಪಶ್ಚಿಮವಾಗಿ ಸುಮಾರು ನಾಲ್ಕು ಅಡಿಗಳ ಅಗಲ, ಸುಮಾರು ಎರಡು ಅಡಿಗಳಷ್ಟು ಆಳ ಇರುವಂತೆ ಹಳ್ಳ ತೆಗೆಯಬೇಕು. ಆ ಹಳ್ಳದಲ್ಲಿ ಸ್ವಲ್ಪ ಸಗಣಿ ಚಿಮುಕಿಸಿ, ಭೂಮಿಯ ಮಟ್ಟದವರೆಗೆ ಒಣ ಸೌದೆ ಜೋಡಿಸಬೇಕು. ಅದರ ಮೇಲೆ ಸತ್ತ ಶರೀರದ ತಲೆಯ ಮೇಲ್ಭಾಗ ಉತ್ತರ ದಿಕ್ಕಿಗೂ, ಕಾಲುಗಳು ದಕ್ಷಿಣ ದಿಕ್ಕಿಗೂ ಇರುವಂತೆ ಮಲಗಿಸಬೇಕು. ಆ ನಂತರ ಶರೀರ ಮುಚ್ಚಿ ಹೋಗುವಂತೆ ಆ ದೇಹದ ಎರಡರಷ್ಟು ತೂಕ ಸೌದೆಯನ್ನು ಒತ್ತಾಗಿ ಗೋಪುರಾಕಾರದಲ್ಲಿ ಒಟ್ಟಬೇಕು. ಕರ್ಪೂರದ ಗಡ್ಡೆಗಳನ್ನು ಅಲ್ಲಲ್ಲಿ ಇಡಬೇಕು.

ಕಾಯಿಸಿದ ತುಪ್ಪದಲ್ಲಿ ಕಸ್ತೂರಿ, ಚಂದನ, ಕೇಸರಿ, ಅಗರು ಮುಂತಾದ ಸುಗಂಧ ವಸ್ತುಗಳನ್ನು ಚೂರ್ಣದಲ್ಲಿ ಕಲಸಿಡಬೇಕು. ಈ ತುಪ್ಪದಲ್ಲಿ ಅದ್ದಿ ತೆಗೆದ ದೀವಟಿಗೆಯನ್ನು ಹೊತ್ತಿಸಿ ಶವದ ಶಿರದಿಂದ ಹಿಡಿದು ಪಾದಗಳವರೆಗೆ ಅಗ್ನಿಸ್ಪರ್ಶ ಮಾಡಬೇಕು. ಕರ್ಪೂರವು ಹೊತ್ತಿಕೊಂಡು ಅದರೊಟ್ಟಿಗೆ ಸೌದೆಯು ಹೊತ್ತಿಕೊಳ್ಳುವುದು. ಮೇಲಿಂದ ಮೇಲೆ ಕೆನ್ನಾಲಿಗೆಯಿಂದ ಶವವನ್ನು ಸುಡಲಾಂಭಿಸುವುದು. ವೇದ ಮಂತ್ರಗಳ ಘೋಷಣೆಯಾಗುತ್ತಿರುವಂತೆಯೇ ಶವದಹನ ಕಾರ್ಯ ಮುಂದುವರಿಯುವುದು. ಅಜ್ಯಾಹುತಿಯನ್ನು ಕೊಡುತ್ತಾ ಹೋದಂತೆಲ್ಲಾ ಶರೀರವು ಚೆನ್ನಾಗಿ ಬೆಂದು ಭಸ್ಮವಾಗುವುದು.

ಶರೀರ ಸುಟ್ಟು ಭಸ್ಮವಾದ ಬಳಿಕ ಸ್ಮಶಾನಕ್ಕೆ ಬಂದಿದ್ದವರೆಲ್ಲರೂ ಸಮೀಪದ ಜಲಾಶಯದಲ್ಲಿ ಮಿಂದು, ಒದ್ದೆ ಬಟ್ಟೆಗಳ ಸಹಿತ ಮೃತನ ಮನೆಗೆ ಆಗಮಿಸಬೇಕು. ಅಲ್ಲಿ ಸ್ವಸ್ತಿವಾಚನ, ಶಾಂತೀಕರಣ

ಮಂತ್ರಗಳನ್ನು ಹೇಳಿ ಸುಗಂಧ ವಸ್ತು ಮಿಶ್ರಿತ ತುಪ್ಪದ ಆಹುತಿಯನ್ನು ಕೊಡಬೇಕು. ಹೀಗೆ ಮಾಡುವುದರಿಂದ ಮೃತರ ಮನೆಯಲ್ಲಿ ವಾಯು ಶುದ್ಧವಾಗುವುದು ಮತ್ತು ಬಂಧುಗಳು ಪ್ರಸನ್ನ ಚಿತ್ತರಾಗುವರು.

**೩.೧೧.೨. ಅಸ್ಥಿ ಸಂಚಯನ:**

ಶವದಹನ ಮೂರನೆಯ ದಿನದಂದು ಸ್ಮಶಾನಕ್ಕೆ ಹೋಗಿ ಚಿತಾಭಸ್ಮದಲ್ಲಿ ದೊರಕುವ ಅಸ್ಥಿಗಳನ್ನು ಆರಿಸಬೇಕು. ಅದೇ ಭೂಮಿಯಲ್ಲಿ ಮತ್ತೊಂದೆಡೆ ಭೂ-ಸ್ಥಾಪನೆ ಮಾಡಬೇಕು. ಇಲ್ಲಿಗೆ ಅಂತ್ಯೇಷ್ಟಿ ಕರ್ಮ ಸಮಾಪ್ತಿಯಾಗುವುದು.

ನಂತರ ಸುಮಾರು ಹನ್ನೊಂದು ದಿನಗಳ ಕಾಲ ಉತ್ತರ ಕ್ರಿಯಾವಿಧಿಗಳನ್ನು ಪೂರೈಸಿದ ತರುವಾಯ ಹನ್ನೆರಡನೆಯ ದಿನ ಬಂಧುಗಳಿಗೆ ಊಟ ಹಾಕಿದ ನಂತರ ಈ ಕ್ರಿಯೆಯು ಕೊನೆಯಾಗುವುದು.

ಆಂಗ್ಲ ಭಾಷೆಯಲ್ಲಿ Life is a Journy from cradle to grave ಎಂಬ ಮಾತೊಂದುಂಟು. ಇದು ಅತ್ಯಂತ ಅರ್ಥಪೂರ್ಣವಾದ ಮಾತು. ವ್ಯಕ್ತಿಯ ಜೀವನ ಎಂಬುದು ತಾಯಿಯ ಗರ್ಭದಿಂದ ಪ್ರಾರಂಭವಾಗಿ ಭೂಮಿ ತಾಯಿಯ ಗರ್ಭ ಸೇರುವ ಒಂದು ಸುದೀರ್ಘ ಪಯಣ. ಈ ಪಯಣದ ಉದ್ದಕ್ಕೂ ಹಂತ ಹಂತವಾಗಿ ಏರಬೇಕಾದಂತಹ ಸೋಪಾನಗಳೇ ಸಂಸ್ಕಾರ ವಿಧಿಗಳು. ಈ ವಿಧಿಗಳು ಮನುಷ್ಯ ಪ್ರಾಣಿಯಷ್ಟೇ ಪ್ರಾಚೀನವಾದವುಗಳು.

**೩.೧೨. ಸಾವಿನ ನಂತರದ ಆಚರಣೆಗಳು:**

ಇತರೆ ಸಮುದಾಯಗಳಂತೆ ಕಮ್ಮಾರರಲ್ಲಿಯೂ ಸಾವಿನ ನಂತರ ದೆವ್ವ-ಭೂತ, ಪಿಶಾಚಿ ಇವುಗಳ ಬಗೆಗೆ ಬಹಳಷ್ಟು ನಂಬಿಕೆಯನ್ನಿಟ್ಟಿದ್ದಾರೆ. ಸತ್ತ ವ್ಯಕ್ತಿಯ ಆತ್ಮಕ್ಕೆ ಕೆಲವರು ಗಾಳಿ ಎಂದೂ ಕರೆಯುವರು. ಇದು ಸದಾ ಸುತ್ತುತ್ತಿರುತ್ತದೆ. ಎಂಬ ಭಾವನೆ ಅವರಲ್ಲಿದೆ. ಹೀಗಾಗಿ ದೈವಗಳಿಗಿಂತಲೂ ಹೆಚ್ಚು ಭಯ ಭಕ್ತಿಯಿಂದ ಸತ್ತವರ ಆತ್ಮಗಳನ್ನು ಕರೆದು ಪ್ರತಿ ವರ್ಷ ಅವುಗಳಿಗೆ ಪೂಜೆ ನೈವೇದ್ಯ ಮಾಡುವ ಸಂಪ್ರದಾಯ ಬೆಳೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಕಮ್ಮಾರರ ಸಮುದಾಯದಲ್ಲಿ ಕೆಲ ಪ್ರದೇಶಗಳಲ್ಲಿ ವಿಶಿಷ್ಟವಾಗಿ ಆಚರಿಸುವ ಆಚರಣೆಯೊಂದು ಕಂಡು ಬರುತ್ತದೆ. ಈ ಆಚರಣೆ ಸತ್ತ ವ್ಯಕ್ತಿಯ ದೇಹಕ್ಕೆ ನಡೆಯುವ ಸಂಸ್ಕಾರದ ದಿನವೇ ನಡೆಯುತ್ತದೆ. ಸತ್ತ ವ್ಯಕ್ತಿಯೊಬ್ಬ ಜೀವನದ ಮೇಲೆ, ಮಕ್ಕಳು, ಹೆಂಡತಿಯ ಮೇಲೆ, ಅನೇಕ ಆಹಾರ ಪದಾರ್ಥಗಳ ಮೇಲೆ, ಇನ್ನಿತರೆ ವಸ್ತುಗಳ ಮೇಲೆ ಅತಿಯಾದ ಆಸೆ ಇಟ್ಟುಕೊಂಡು ಅಕಸ್ಮಾತ್ ಸತ್ತರೆ, ಅವನು ಖಂಡಿತವಾಗಿ ದೆವ್ವ, ಪಿಶಾಚಿ ಆಗಿ ಕಾಡುತ್ತಾನೆ ಮತ್ತು ಅವನ ಆತ್ಮ ಮನೆಯವರಿಗೆ ಬಂದು ಅನೇಕ ತೊಂದರೆಗಳನ್ನು ಕೊಡುತ್ತದೆ ಎಂಬ ಬಲವಾದ ನಂಬಿಕೆ ಕೆಲ ಕುಟುಂಬಗಳಲ್ಲಿದೆ. ಹೀಗಾಗಿ ಅವರು ಶವ ಸಂಸ್ಕಾರದ ದಿನ ಶವವನ್ನು ಮನೆಯಿಂದ ಹೊರಗೆ ತಂದ ತಕ್ಷಣವೇ ಮನೆಯಲ್ಲಿಯ ಒಬ್ಬ ವ್ಯಕ್ತಿ ಯಾರಿಗೂ ತಿಳಿಯದಂತೆ ಮೊದಲು ಹಿತ್ತಲು ಬಾಗಿಲಿನ ಹೊಸ್ತಿಲಕ್ಕೆ ಮೂರು ಕಬ್ಬಿಣದ

ಚಿಕ್ಕ ಮಳೆಗಳನ್ನು ಮತ್ತು ಶವವನ್ನು ಮನೆಯ ಹೊರಗಿನ ಬಾಗಿಲಿನಿಂದ ದಾಟಿಸಿದ ಮೇಲೆ ಹೊರಗಿನ ಬಾಗಿಲಿನ ಹೊಸ್ತಿಲಕ್ಕೆ ಮೂರು ಮಳೆಗಳನ್ನು ಹೊಡೆಯುತ್ತಾನೆ. ಶವವನ್ನು ಸ್ಮಶಾನಕ್ಕೆ ಒಯ್ಯುತ್ತಿರುವಾಗ ಈ ಮಳೆಗಳನ್ನು ಹೊಡೆದ ವ್ಯಕ್ತಿ ತನ್ನ ಜೇಬಿನಲ್ಲಿ ಕಾಳುಗಳನ್ನು ತುಂಬಿಕೊಂಡು ಶವಯಾತ್ರೆಯಲ್ಲಿ ಕೊನೆಯ ವ್ಯಕ್ತಿಯಾಗಿ ನವಣಿಯನ್ನು(ಧಾನ್ಯ) ಯಾರ ಕಣ್ಣಿಗೂ ಕಾಣದಂತೆ ನೆಲಕ್ಕೆ ಬಿತ್ತುತ್ತಾ ಹೋಗುತ್ತಿರುತ್ತಾನೆ. ಶವವನ್ನು ಚಿತೆಯ ಸುತ್ತಲೂ ಮೂರು ಸುತ್ತು ಅಪ್ರದಕ್ಷಣೆ ಹಾಕಿಸುತ್ತಿರುವಾಗಲೂ ಈ ವ್ಯಕ್ತಿ ನವಣಿಯನ್ನು ಬಿತ್ತಿ ಉಳಿದ ಎಲ್ಲ ಕಾಳುಗಳನ್ನು ಅಲ್ಲಿ ಚೆಲ್ಲುತ್ತಾನೆ. ಹೀಗೆ ಮಾಡುವುದರಿಂದ ಸತ್ತ ವ್ಯಕ್ತಿ ಒಂದು ವೇಳೆ ದೆವ್ವ ಆಗಿದ್ದರೂ ಅವನು ಊರ ಒಳಗೆ ಪ್ರವೇಶ ಮಾಡಲಿಕ್ಕೆ ಸಾಧ್ಯವಾಗುವುದಿಲ್ಲ ಎಂದು ಹೇಳುತ್ತಾರೆ. ಏಕೆಂದರೆ ಸತ್ತ ವ್ಯಕ್ತಿಯು ದೆವ್ವವಾಗಿದ್ದರೆ ಅವನು ಊರನ್ನು ಪ್ರವೇಶಿಸಬೇಕಾದರೆ ಶವಯಾತ್ರೆಯ ಸಂದರ್ಭದಲ್ಲಿ ಬಿತ್ತದ ಎಲ್ಲಾ ನವಣಿ ಕಾಳುಗಳನ್ನು ಒಂದನ್ನೂ ಬಿಡದಂತೆ ಆರಿಸಿಕೊಳ್ಳುತ್ತ ಬರಬೇಕು. ಈ ನವಣಿ ಕಾಳುಗಳನ್ನು ಅನೇಕ ಪಕ್ಷಿಗಳು ತಿಂದಿರುತ್ತವೆ. ಅವುಗಳಿಂದ ಕಾಳುಗಳನ್ನು ಕಿತ್ತುಕೊಳ್ಳಲು ಸಾಧ್ಯವಾಗುವುದಿಲ್ಲ ಒಂದು ವೇಳೆ ಆ ಕಾಳುಗಳನ್ನು ಆರಿಸಿಕೊಂಡು ಬಂದರೆ ಮನೆಯ ಮುಂದಿನ ಮತ್ತು ಹಿಂದಿನ ಬಾಗಿಲಿನ ಹೊಸ್ತಿಲಿಗೆ ಮಳೆ ಬಡಿದಿರುತ್ತಾರೆ. ಇದನ್ನು ದಾಟಿಕೊಂಡು ಬರಲಿಕ್ಕೆ ಸಾಧ್ಯವಾಗುವುದಿಲ್ಲ ಎಂಬ ನಂಬಿಕೆ ಮತ್ತು ಧೈರ್ಯ ಇವರಲ್ಲಿದೆ.

**೩.೧೨.೧. ವಾರ್ಷಿಕ ಶ್ರಾದ್ಧ:**

ಸತ್ತ ವ್ಯಕ್ತಿಯ ತಿಥಿ, ನಕ್ಷತ್ರ ಇವುಗಳನ್ನು ಗಮನದಲ್ಲಿಟ್ಟುಕೊಂಡು ಸತ್ತ ದಿನದಿಂದ ಒಂದು ವರ್ಷಕ್ಕೆ ವಾರ್ಷಿಕ ಶ್ರಾದ್ಧವನ್ನು ಮಾಡುತ್ತಾರೆ. ಅಂದು ಬಂಧು-ಬಳಗದವರನ್ನು ಕರೆಯಿಸಿಕೊಂಡು ಸತ್ತ ವ್ಯಕ್ತಿ ಇಷ್ಟಪಡುತ್ತಿದ್ದ ಆಹಾರ ಪದಾರ್ಥಗಳನ್ನು ಸಿದ್ಧಪಡಿಸಿ ಸತ್ತ ವ್ಯಕ್ತಿಯ ಭಾವ ಚಿತ್ರವನ್ನಿಟ್ಟು ಹೊಸ ಬಟ್ಟೆಗಳನ್ನು ತಂದು ಪೂಜಿಸಿ ನೈವೇದ್ಯ ಮಾಡಿ ಒಂದು ನೈವೇದ್ಯವನ್ನು ಆಕಳಿಗೆ ಕೊಟ್ಟು ನಂತರ ಎಲ್ಲರೂ ಊಟ ಮಾಡುತ್ತಾರೆ.

**೩.೧೨.೨. ಸರ್ವಪಿತೃ ಶ್ರಾದ್ಧ:**

ಮಹಾಲಯ ಅಮವಾಸ್ಯೆಯ ಒಂದು ದಿನ ಸತ್ತ ಎಲ್ಲ ವ್ಯಕ್ತಿಗಳ ಹೆಸರಿನಲ್ಲಿ ಪೂಜೆ ಮಾಡಿ ನೈವೇದ್ಯ ಮಾಡಿ ಅವರನ್ನು ತೃಪ್ತಿ ಪಡಿಸುತ್ತಾರೆ.

**೩.೧೨.೩. ಮನೆ ಬಿಡುವುದು:**

ಸತ್ತ ವ್ಯಕ್ತಿಯ ಮೂಹೂರ್ತ ಕೆಟ್ಟದಾಗಿದ್ದರೆ ೩, ೬, ೧೨ ತಿಂಗಳುಗಳವರೆಗೆ ಮನೆಯನ್ನು ಬಿಡುವ ಸಂಪ್ರದಾಯ ಇವರಲ್ಲಿದೆ. ನಂತರ ಸಂಪ್ರದಾಯದ ಪ್ರಕಾರ ಮನೆಗೆ ಶಾಂತಿ ಮಾಡಿ ಮತ್ತೆ ಗೃಹ ಪ್ರವೇಶ ಮಾಡುತ್ತಾರೆ.

**೩.೧೩. ಕೌಟುಂಬಿಕ ಪದ್ಧತಿ:**

ಕಮ್ಮಾರರ ಸಮುದಾಯದಲ್ಲಿ ಒಂದು ಕಾಲಕ್ಕೆ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಂಡುಬರುತ್ತಿದ್ದವು. ಕಮ್ಮಾರಿಕೆಯ ವೃತ್ತಿಯಿಂದ ಕುಟುಂಬ ನಿರ್ವಹಣೆ ಸಾಧ್ಯವಾಗದಿದ್ದಾಗ ಕುಟುಂಬದ

ಇತರೆ ಸದಸ್ಯರು ವಿವಿಧ ವೃತ್ತಿಗಳನ್ನು ಕೈಗೊಳ್ಳಲು ಪ್ರಾರಂಭಿಸಿದ ಮೇಲೆ ಮತ್ತು ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಹತ್ತಿದರು. ಇದರಿಂದ ಕಮ್ಮಾರರ ಸಮುದಾಯದಲ್ಲಿ ಹಂತ ಹಂತವಾಗಿ ವಿಭಕ್ತ ಕುಟುಂಬಗಳು ಬೆಳೆಯಲಾರಂಭಿಸಿದವು. ಕಮ್ಮಾರರಲ್ಲಿ ಅವಿಭಕ್ತ ಅಥವಾ ವಿಭಕ್ತ ಯಾವುದೇ ಕುಟುಂಬವಿರಲಿ ಪುರುಷನೇ ಮನೆಯ ಯಜಮಾನನಾಗಿರುತ್ತಾನೆ.

ಮಾತೃದೇವತಾ ಆರಾಧಕರಾದ ಈ ಕಮ್ಮಾರರ ಕುಟುಂಬಗಳಲ್ಲಿ ಒಂದು ಕಾಲಕ್ಕೆ ಮಾತೃ ಪ್ರಧಾನ ವ್ಯವಸ್ಥೆಯೇ ಜಾರಿಯಲ್ಲಿತ್ತು ಎಂಬುದು ತಿಳಿದು ಬರುತ್ತದೆ. ಇಂದು ಸಹ ಸಾಮಾನ್ಯವಾಗಿ ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ಮಹಿಳೆಯರೇ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ. ಕಮ್ಮಾರರಲ್ಲಿ ಮೇಲ್ನೋಟಕ್ಕೆ ಪಿತೃಪ್ರದಾನ ವ್ಯವಸ್ಥೆ ಜಾರಿಯಲ್ಲಿರುವುದು ಕಂಡುಬರುತ್ತದೆ. ಮನೆಯ ಹೊರಗಿನ ಜವಾಬ್ದಾರಿಗಳನ್ನು ಪುರುಷರು ನಿರ್ವಹಿಸಿದರೆ ಮನೆಯ ಒಳಗಿನ ಜವಾಬ್ದಾರಿಗಳನ್ನು ಮಹಿಳೆಯರು ನಿರ್ವಹಿಸುತ್ತಿರುವುದು ಕಂಡು ಬರುತ್ತದೆ.

ಕಮ್ಮಾರರು ಆಸ್ತಿವಂತರಲ್ಲ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ದುಡಿದು ಬಂದ ಹಣದಿಂದ, ದವಸ ಧಾನ್ಯಗಳನ್ನು ಖರೀದಿಸಿ ಜೀವನ ಸಾಗಿಸುತ್ತ ಬಂದವರು. ಶೇ೫೦ರಷ್ಟು ಕುಟುಂಬಗಳು ಒಂದು ಅಥವಾ ಎರಡು ಏಕರೆ ಭೂಮಿಯನ್ನು ಹೊಂದಿದವರು ಕಂಡುಬರುತ್ತಾರೆ. ಪ್ರತಿಯೊಂದು ಹಳ್ಳಿಯಲ್ಲಿರುವ ಇವರು ವಾಸಿಸಲಿಕ್ಕೆ ಸ್ವಂತ ಮನೆ ಹೊಂದಿರುವುದು ಕಂಡುಬರುತ್ತದೆ. ಅಲ್ಪ ಸ್ವಲ್ಪ ಪರಂಪರಾನುಗತವಾಗಿ ಬಂದ ಆಸ್ತಿಯಲ್ಲಿ ಗಂಡು ಮಕ್ಕಳು ಪಾಲುದಾರರಾಗಿರುತ್ತಾರೆ. ಹೆಣ್ಣು ಮಕ್ಕಳಿಗೆ ಆಸ್ತಿ ಹಂಚಿಕೆಯಲ್ಲಿ ತಾರತಮ್ಯವಿರುವುದು ಕಂಡುಬರುತ್ತದೆ. ಹೆಣ್ಣು ಮಕ್ಕಳಿಗೆ ಮದುವೆ ಸಂದರ್ಭದಲ್ಲಿ ಸಾಧ್ಯವಾದಷ್ಟು ಅವರಿಗೆ ಬೇಕಾದ ಎಲ್ಲಾ ವಸ್ತುಗಳನ್ನು, ಜೊತೆಗೆ ವರದಕ್ಷಣೆಯನ್ನೂ ಕೊಡುತ್ತೇವೆ. ಹೀಗಾಗಿ ಅವರಿಗೆ ಆಸ್ತಿಯಲ್ಲಿ ಪಾಲು ಕೊಡುವುದಿಲ್ಲ ಎಂಬ ಅಭಿಪ್ರಾಯವನ್ನು ಕೆಲ ಕಮ್ಮಾರರು ವ್ಯಕ್ತ ಪಡಿಸುತ್ತಾರೆ.

ಒಂದು ಕಾಲದಲ್ಲಿ ಕಮ್ಮಾರಿಕೆ ತಂದೆಯಿಂದ ಮಕ್ಕಳಿಗೆ ವರ್ಗವಾಗುತ್ತಿತ್ತು. ಗಂಡು ಮಕ್ಕಳು ಚಿಕ್ಕವರಿದ್ದಾಗಲೇ ಈ ವೃತ್ತಿಯನ್ನು ಹೇಳಿಕೊಡಲಾಗುತ್ತಿತ್ತು. ಇಂದು ಆ ಸ್ಥಿತಿ ಬದಲಾಗಿದೆ. ಕಮ್ಮಾರಿಕೆ ವೃತ್ತಿಯ ಮೂಲಕ ಬದುಕಲಿಕ್ಕೆ ಸಾಧ್ಯವಿಲ್ಲ ಎಂಬುದನ್ನು ಕಂಡು ಅವರ ಮಕ್ಕಳು ತಂದೆಯ ವೃತ್ತಿಯನ್ನು ಅನುಸರಿಸುತ್ತಿಲ್ಲ. ಈ ವೃತ್ತಿಯಿಂದ ನೆಮ್ಮದಿ ಮತ್ತು ಆರ್ಥಿಕವಾಗಿ ಬೆಳೆಯಲು ಸಾಧ್ಯವಾಗುತ್ತಿಲ್ಲ. ದೈಹಿಕವಾಗಿ ಎಷ್ಟೇ ಶ್ರಮವಹಿಸಿ ದುಡಿದರೂ ಅವರ ಶ್ರಮಕ್ಕೆ ತಕ್ಕ ಪ್ರತಿಫಲ ಇಂದು ದೊರೆಯುತ್ತಿಲ್ಲ. ಈ ಕಾರಣಕ್ಕಾಗಿ ಅನೇಕ ಕಮ್ಮಾರರ ಮಕ್ಕಳು ಬೇರೆ ಬೇರೆ ವೃತ್ತಿಗಳನ್ನು ಹುಡುಕಿಕೊಂಡು ನಗರ ಪ್ರದೇಶಗಳಿಗೆ ಹೋಗುತ್ತಿರುವುದು ಇತ್ತೀಚೆಗೆ ಸಾಮಾನ್ಯವಾಗಿದೆ.

**೩.೧೪. ಗೋತ್ರಗಳು:**

ಬೆಡಗುಗಳು ಸಾಮಾಜಿಕ ಕುಟುಂಬದಲ್ಲಿ ಸಂಕೀರ್ಣವಾದವುಗಳಾಗಿವೆ. ನಾಗರಿಕ ಮತ್ತು ಸಂಸ್ಕೃತಿಯ ವಿಕಾಸದ ಚಾರಿತ್ರಿಕ ಹೆಜ್ಜೆ ಗುರುತುಗಳೇ ಈ ಬೆಡಗುಗಳು. ಪ್ರಾಚೀನ ಕಾಲದಿಂದಲೂ

ಮಾನವ ಅನೇಕ ಆಚಾರ ವಿಚಾರ, ನಂಬಿಕೆ, ನಿಷೇದ, ವಿಧಿ ವಿಧಾನಗಳನ್ನು ಅನುಸರಿಸುತ್ತಾ ಬಂದಿದ್ದಾನೆ. ಪ್ರತಿಯೊಂದು ಮನೆತನದ ಚರಿತ್ರೆಯನ್ನು ಬೆಡಗುಗಳ ಮೂಲಕ ತಿಳಿದುಕೊಳ್ಳಬಹುದು. ಬುಡಕಟ್ಟು ಸಮುದಾಯಗಳು ತಮ್ಮ ರಕ್ತ ಸಂಬಂಧವನ್ನು ಏರ್ಪಡಿಸಿಕೊಳ್ಳಬೇಕೆಂದರೆ ಬೆಡಗುಗಳು (ಗೋತ್ರಗಳು) ಮುಖ್ಯವಾಗಿರುತ್ತವೆ. ಕಮ್ಮಾರ ಸಮುದಾಯದಲ್ಲಿ ಗೋತ್ರ, ವಂಶ ಎಂದು ಕರೆಯುತ್ತಾರೆ. ಕೆಲವೊಂದು ಗೋತ್ರದ ಆಧಾರದ ಮೇಲೆ ಆ ಮನೆತನದ ವೃತ್ತಿ, ದೇವರು, ಸಂಸ್ಕೃತಿ, ಮೂಲಪುರುಷನ ಇತಿಹಾಸ, ಆಚಾರ, ವಿಚಾರ, ವಿಧಿ ನಿಷೇಧಗಳನ್ನು ತಿಳಿದುಕೊಳ್ಳಬಹುದು.

ಶಿಲ್ಪಿ, ಕಮ್ಮಾರ, ಬಡಗಿ, ಅಕ್ಕಸಾಲಿ, ಕಂಚುಗಾರ ಎಂಬ ವೃತ್ತಿ ಸೂಚಕ ಪದಗಳು ಮೇಲ್ನೋಟಕ್ಕೆ ಜಾತಿ ಸೂಚಕಗಳಂತೆ ಭಾಸವಾಗುತ್ತವೆ. ಆದರೆ ಈ ಜನಗಳ ಬದುಕಿನ ವಿವರ ವಿನ್ಯಾಸಗಳನ್ನು ಪಾರಂಪರಿಕ ಜಾನಪದೀಯ ಅಂಶಗಳನ್ನು ಅಭ್ಯಸಿಸಿದರೆ ಈ ಐದು ವೃತ್ತಿಗಳನ್ನು ಒಂದೇ ಜಾತಿಯ ಜನರು ನಿರ್ವಹಿಸುತ್ತಿದ್ದಾರೆ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಬಹುಶ: ತುಂಬಾ ಹಿಂದೆ ಈ ಐದು ಪಂಗಡಗಳು ಒಂದೇ ಮೂಲವಾಗಿದ್ದು, ಕಾಲಾಂತರ ಯಾವುದೇ ಒಂದು ಘಟ್ಟದಲ್ಲಿ ಛಿದ್ರಗೊಂಡು ಭಿನ್ನವಾಗಿರಬೇಕು ಎನಿಸುತ್ತದೆ. ಈ ಐದು ಸಮುದಾಯದವರು ತಾವು ಒಂದೇ, ನಾವು ಪಾಂಚಾಲರು, ವಿಶ್ವಕರ್ಮರು ಎಂದು ಹೇಳಿಕೊಂಡರೂ, ರಕ್ತ ಸಂಬಂಧದಂತಹ ಸಂದರ್ಭಗಳಲ್ಲಿ ತುಂಬಾ ಕಟ್ಟುನಿಟ್ಟಿನ ಪಾಲನೆಗಳನ್ನು ನಡೆಸುತ್ತಾ ಒಬ್ಬರಿಗೊಬ್ಬರು ಸಂಬಂಧಿಕರು ಎಂದು ಹೇಳಿಕೊಳ್ಳುತ್ತಾರೆ. ವಿಶ್ವಕರ್ಮರಲ್ಲಿರುವ ಗೋತ್ರಗಳು ಈ ಕೆಳಗಿನಂತಿವೆ.

| ದೈವ | ಮೂಲಪುರುಷ | ಗೋತ್ರ | ವೃತ್ತಿ |
|---|---|---|---|
| ರುದ್ರ | ಮನು | ಸಾನಗ | ಲೋಹ |
| ವಿಷ್ಣು | ಮಯ | ಸನಾತನ | ಕಾಷ್ಠ |
| ಬ್ರಹ್ಮ | ತ್ವಷ್ಟ್ರ | ಅಹಭೂನ | ಕಾಂಸ್ಯ,ಕಂಚು |
| ಇಂದ್ರ | ಶಿಲ್ಪಿ | ಪ್ರತ್ನ | ಶಿಲಾ |
| ಸೂರ್ಯ | ದೈವಜ್ಞ | ಸುಪರ್ನಾಸ್ವ | ಸ್ವರ್ಣ |

ಭಗವಾನ್ ವಿಶ್ವಕರ್ಮನ ಪ್ರಥಮ ಸದ್ಯೋಜಾತ ಮುಖದಿಂದ ಉತ್ಪನ್ನನಾದ ಮನುವು ತನ್ನ ಶುಭ ಕರ್ಮಗಳ ಕಾರಣದಿಂದ ಬ್ರಹ್ಮರ್ಷಿ ಎಂದು ಕರೆಯಲ್ಪಟ್ಟನು. ಆತನ ಗೋತ್ರವು ಸಾನಗ, ಉಪಗೋತ್ರಗಳು ಇಪ್ಪತ್ತೈದು. ಅವುಗಳನ್ನು ಗಣಗೋತ್ರಗಳೆಂದು ಕರೆಯುತ್ತಾರೆ. ಈತನು ತಿಳಿದ ಪ್ರಮುಖ ವೇದ ಋಗ್ವೇದ. ಉಪವೇದ ಆಯುರ್ವೇದ. ಈತನು ಅಶ್ವಲಾಯನ ಸೂತ್ರವನ್ನು ಅಧ್ಯಯನ ಮಾಡಿ ಲೋಹ ಸಂಹಿತೆಯಲ್ಲಿ ಪ್ರವೀಣನೆನಿಸಿ ಕಬ್ಬಿಣ ಸಂಬಂಧಿ ಶಿಲ್ಪದಲ್ಲಿ ಪರಿಣಿತನಾದನು ತ್ರಿಕೋನ ಕುಂಡದಲ್ಲಿ ಯಜ್ಞ ಮಾಡುತ್ತಾ ರುದ್ರನ ಉಪಾಸಕನಾಗಿ ಅಖಿಲ ಬ್ರಹ್ಮಾಂಡದ ನಿವಾಸಿಗಳಿಗೆ ಲೋಹ ಶಿಲ್ಪಗಳ ರಚನೆ ಮಾಡಿ ಉಪಕಾರಿಯಾಗಿದ್ದಾನೆ.

ವಿಶ್ವಕರ್ಮನ ದ್ವಿತೀಯ ವಾಮದೇವ ಮುಖದಿಂದ ಬ್ರಹ್ಮರ್ಷಿ ಮಯನು ಉತ್ಪನ್ನನಾದನು. ಆತನ ಗೋತ್ರ ಸನಾತನ, ಉಪ ಗೋತ್ರಗಳು ಇಪ್ಪತ್ತೈದು. ಈತನು ತಿಳಿದ ಪ್ರಮುಖ ವೇದ ಯಜುರ್ವೇದ. ಉಪವೇದ ಧನುರ್ವೇದ. ಈತನು ಆಪಸ್ತಂಬ ಸೂತ್ರ ಸಂಹಿತೆಯನ್ನು ಅಧ್ಯಯನ ಮಾಡಿ ಚೌಕಾಕಾರದ ಕುಂಡದಲ್ಲಿ ಯಜ್ಞ ಮಾಡುತ್ತಾ ಭಗವಾನ್ ವಿಷ್ಣುವಿನ ಉಪಾಸಕನಾಗಿ ಕಾಷ್ಟ ಶಿಲ್ಪದಲ್ಲಿ ಪಾರಂಗತನಾಗಿದ್ದನು.

ವಿಶ್ವಕರ್ಮನ ತೃತೀಯ ಅಘೋರ ಮುಖದಿಂದ ಬ್ರಹ್ಮರ್ಷಿ ತ್ವಷ್ಟ ಉತ್ಪನ್ನನಾದನು. ಈತನ ಗೋತ್ರ ಅಹಭೂನ, ಉಪಗೋತ್ರಗಳು ಇಪ್ಪತ್ತೈದು. ಈತನು ತಿಳಿದ ಪ್ರಮುಖ ವೇದ ಸಾಮವೇದ. ಉಪವೇದ ಗಾಂಧರ್ವ ವೇದ. ದ್ರಾಕ್ಷಾಯಾನ ಸೂತ್ರವನ್ನು ಅಧ್ಯಯನ ಮಾಡಿ ತಾಮ್ರ ಸಂಹಿತೆಯಲ್ಲಿ ಪರಿಣಿತನಾಗಿದ್ದನು. ಈತನು ಗೋಲಾಕಾರದ ಕುಂಡದಲ್ಲಿ ಯಜ್ಞ ಮಾಡುತ್ತಾ ಬ್ರಹ್ಮ ದೇವನ ಉಪಾಸಕನಾಗಿ ತಾಮ್ರಕ್ಕೆ ಸಂಬಂಧಿತ ವಸ್ತುಗಳ ನಿರ್ಮಾಣದಲ್ಲಿ ಅದ್ವಿತೀಯ ಪರಿಣಿತನಾಗಿದ್ದನು.

ವಿಶ್ವಕರ್ಮನ ಚತುರ್ಥ ತತ್ಪುರುಷ ಮುಖದಿಂದ ಬ್ರಹ್ಮರ್ಷಿ ಶಿಲ್ಪಿಯು ಉತ್ಪನ್ನನಾದನು. ಈತನ ಗೋತ್ರ ಪ್ರತ್ನ. ಉಪಗೋತ್ರಗಳು ೨೫. ಈತನು ತಿಳಿದ ಪ್ರಮುಖ ವೇದ ಅಥರ್ವಣವೇದ. ಉಪವೇದ ಶಿಲ್ಪವೇದ. ಬೋಧಾಯನ ಸೂತ್ರವನ್ನು ಅಧ್ಯಯನ ಮಾಡಿ ಶಿಲ್ಪ ಸಂಹಿತೆಯಲ್ಲಿ ಪರಿಣಿತನಾದನು. ಷಟ್ಕೋಣ ಕುಂಡದಲ್ಲಿ ಯಜ್ಞ ಮಾಡುತ್ತಾ ಇಂದ್ರನ ಉಪಾಸಕನಾಗಿ ಶಿಲಾ ಶಿಲ್ಪದಲ್ಲಿ ಅದ್ಭುತ ಪ್ರಗತಿ ಸಾಧಿಸಿದನು. ಈತನ ವಂಶಜರು ಅನೇಕ ಪ್ರಕಾರದ ಶಿಲ್ಪಗಳಲ್ಲಿ ಪರಿಣತಿ ಹೊಂದಿದ್ದಾರಲ್ಲದೆ ದೇವಾಲಯ, ವಿಶಾಲ ಭವನಗಳು, ಜಲಾಶಯಗಳ ನಿರ್ಮಾಣದಲ್ಲಿ ಪ್ರವೀಣರಾಗಿದ್ದರು.

ವಿಶ್ವಕರ್ಮನ ಪಂಚಮ ಈಶಾನ ಮುಖದಿಂದ ಬ್ರಹ್ಮರ್ಷಿ ದೈವಜ್ಞನು ಉತ್ಪನ್ನನಾದನು. ಈತನ ಗೋತ್ರ ಸುಪರ್ಣಶ್ಯ ಉಪಗೋತ್ರಗಳು ೨೫. ಈತನು ತಿಳಿದ ಪ್ರಮುಖ ವೇದ ಸುಕ್ಷ್ಮವೇದ. (ಪ್ರಣವವೇದ) ಉಪವೇದಗಳಾಗಿ ಇತಿಹಾಸ, ಪುರಾಣ ಮೊದಲಾದವನ್ನು ಅಭ್ಯಾಸ ಮಾಡಿದನು. ಖಾತ್ಯಾಯನ ಸೂತ್ರವನ್ನು ಅಧ್ಯಯನ ಮಾಡಿ ಸ್ವರ್ಣ ಶಿಲ್ಪದಲ್ಲಿ ಕುಶಲನಾಗಿದ್ದನು. ಅಷ್ಟಕೋಣ ಕುಂಡದಲ್ಲಿ ಯಜ್ಞ ಮಾಡುತ್ತಾ ಸೂರ್ಯ ಭಗವಾನನನ್ನು ಆರಾಧಿಸುತ್ತ ಬಂಗಾರದ ವಸ್ತುಗಳ ನಿರ್ಮಾಣದಲ್ಲಿ ಪರಿಣಿತಿಯನ್ನು ಹೊಂದಿದ್ದನು. ಈ ಪ್ರಕಾರ ಐದು ಬ್ರಹ್ಮರ್ಷಿಗಳು ಕಬ್ಬಿಣ, ಮರ, ತಾಮ್ರ, ಶಿಲೆ, ಬಂಗಾರ ಇವುಗಳಲ್ಲಿ ಅಲೌಕಿಕ ವಸ್ತುಗಳನ್ನು ನಿರ್ಮಿಸಿ ಲೋಕ ವಿಖ್ಯಾತರಾದರು. ಈ ವಸ್ತುಗಳು ಪ್ರಾಣಿ, ಮನುಷ್ಯರೆಲ್ಲರಿಗೂ ಉಪಯೋಗವಾಗುತ್ತಿದ್ದವು. ಇವುಗಳ ಸಹಾಯದಿಂದ ಯಜ್ಞ, ಪೂಜೆ, ಉಪಾಸನೆ ಮಾಡುತ್ತಾ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಫಲಕಗಳನ್ನು ಪಡೆಯುವಲ್ಲಿ ಬ್ರಹ್ಮಾಂಡದ ಸಕಲರೂ ಸಫಲರಾಗುತ್ತಿದ್ದರು. ಇವರ ಕಾರ್ಯಗಳಿಂದ ಉಪಕಾರ ಪಡೆದ ಮನುಷ್ಯರು ಇವರನ್ನು ಯಾವ ಕಾಲಕ್ಕೂ ಮರೆಯುವಂತಿಲ್ಲ.

ಒಂದು ಸಲ ಐವರು ಪುತ್ರರು ಭಗವಾನ್ ವಿಶ್ವಕರ್ಮನ ಸಮ್ಮುಖದಲ್ಲಿ ವಿರಾಜಮಾನರಾಗಿದ್ದರು. ಅಗ ಪ್ರಭು ಮಕ್ಕಳೇ ನೀವೆಲ್ಲರೂ ವಿದ್ಯಾಧ್ಯಯನವನ್ನು ಪೂರೈಸಿ ಅನೇಕ ಕಲ್ಯಾಣಕಾರಿ ಮಹತ್ವಪೂರ್ಣ ಕೆಲಸಗಳನ್ನು ಮಾಡಿ ದೇವತೆಗಳಿಂದಲೂ, ಮಾನವರಿಂದಲೂ ಪ್ರಶಂಸೆಯನ್ನು ಗಳಿಸಿಕೊಂಡಿದ್ದೀರಿ. ಇನ್ನು ನೀವು ವಂಶಾಭಿವೃದ್ಧಿಯನ್ನು ಮಾಡಿಕೊಂಡು ಅನೇಕಾನೇಕ ಜನಹಿತಕಾರಕ ಕೆಲಸಗಳನ್ನು ಮಾಡಬೇಕಾಗಿದೆ. ಅದಕ್ಕಾಗಿ ನಾನು ಶೀಘ್ರವಾಗಿ ಒಂದು ವ್ಯವಸ್ಥೆ ಮಾಡುತ್ತೇನೆ. ಅಲ್ಲಿಯವರೆಗೆ ವಿಶ್ರಾಂತಿ ತೆಗೆದುಕೊಳ್ಳಿ ಎಂದು ಹೇಳಿ ವಿಶ್ವಕರ್ಮನು ಇಲೋಲಥದ ಒಂದು ಮುಖ್ಯ ಗುಹೆಯಲ್ಲಿ ತಪಸ್ಸಿಗೆ ಕುಳಿತನು. ಸಮಾಧಿ ಯೋಗದಲ್ಲಿದ್ದ ಭಗವಂತನು ಅಂಗೀರಾ ಮೊದಲಾದ ಋಷಿಗಳನ್ನು ಸ್ಮರಿಸಿದನು. ಪ್ರಭುವಿನ ಮನಸ್ಸಿನ ಸಂಕೇತವನ್ನು ಅರಿತ ಅಂಗೀರ, ಪರಾಶರ, ಕೌಶಿಕ, ಭೃಗು, ಜೈಮಿನಿ ಮಹರ್ಷಿಗಳು ಭಗವಾನ್ ವಿಶ್ವಕರ್ಮನು ತಪಸ್ಸು ಮಾಡುತ್ತಿದ್ದ ಇಲೋಲಗಥದ ಪರ್ವತದ ಗುಹೆಗೆ ಆಗಮಿಸಿ ಪ್ರಭುವಿನ ಸ್ತೋತ್ರ ಮಾಡತೊಡಗಿದರು.

ಮಹರ್ಷಿಗಳು ಬಂದಿರುವ ವಿಷಯ ಅಂತರ್ಯದಿಂದ ಅರಿತ ಭಗವಂತನು ಸಮಾಧಿಯಿಂದ ಜಾಗೃತನಾದನು. ಪಂಚ ಪುತ್ರರಿಗೂ ಪ್ರಭು ಸಮಾಧಿ ಯೋಗದಿಂದ ವಿಮುಖರಾದ ವಿಷಯ ತಿಳಿದು ಅವರೂ ಪ್ರಭು ಸನ್ನಿಧಿಗೆ ಬಂದರು. ಅಲ್ಲಿ ಐದು ಮಹರ್ಷಿಗಳನ್ನು ಕಂಡು ಅವರಿಗೆ ಅದರ ಪೂರ್ವಕ ನಮಸ್ಕಾರ ಮಾಡಿ ಆಶೀರ್ವಾದ ಪಡೆದರು. ಸುಂದರ, ಸುಶೀಲ, ತೇಜಸ್ವಿ ವಿನಮ್ರ, ಬ್ರಹ್ಮಚಾರಿ ನವಯುವಕರನ್ನು ಕಂಡು ಮುಗ್ಧರಾದ ಮಹರ್ಷಿಗಳು ಅವರ ಪರಿಚಯವನ್ನು ಮಾಡಿಕೊಂಡು ಅವರೆಲ್ಲರ ಕಾರ್ಯ ಕುಶಲತೆಯನ್ನು ಅರಿತವರಾಗಿ ತಮ್ಮ ಪುತ್ರಿಯರನ್ನು ಕೊಟ್ಟು ವಿವಾಹ ಮಾಡುವ ಬಗ್ಗೆ ಪ್ರಭು ವಿಶ್ವಕರ್ಮನಲ್ಲಿ ವಿಚಾರ ವಿನಿಮಯ ಮಾಡಿದರು. ಮಹರ್ಷಿಗಳ ಇಚ್ಛೆಯನ್ನು ಸ್ವೀಕರಿಸಿದ ಪ್ರಭುವು ತನ್ನ ಅನುಮತಿ ಕೊಡುತ್ತಾನೆ.

ಪ್ರಭು ವಿಶ್ವಕರ್ಮನ ಅನುಮತಿಯು ದೊರಕಿದ ಕೂಡಲೇ ವಿವಾಹ ಸಮಾರಂಭಕ್ಕೆ ಪ್ರಾರಂಭ ಮಾಡುವರು. ಸ್ವಯಂ ವಾಸುದೇವನು, ದೇವಗುರು, ಬ್ರಹಸ್ಪತಿಗಳಲ್ಲಿಗೆ ಹೋಗಿ ಮದುವೆಗೆ ಮಹೂರ್ತ ತೆಗೆಸಿಕೊಂಡು ಬರುವನು. ಮದುವೆಯ ದಿನ ನಿಶ್ಚಿತವಾದ ಕೂಡಲೇ ಇಲೋಲಗಥದಲ್ಲಿ ಸಂಭ್ರಮದ ವಾತಾವರಣ ಎಲ್ಲಡೆಯಲ್ಲೂ ಕಂಡುಬರುವುದು. ಆಹ್ವಾನ ಪತ್ರವನ್ನು ಸ್ವೀಕರಿಸಿ ದೇವತೆಗಳು, ಯಕ್ಷ, ಗಂಧರ್ವ, ಮಾನವ, ನಾಗ, ಕಿನ್ನರ, ಋಷಿಮುನಿ ಮೊದಲಾದವರೆಲ್ಲರೂ ಇಲಾಚಕ್ಕೆ ಬಂದರು. ಒಂದೇ ದಿನ ಐವರು ಬ್ರಹ್ಮರ್ಷಿಗಳ ವಿವಾಹವಾಗಬೇಕಾಗಿತ್ತು. ಐದು ಕಡೆಗಳಲ್ಲಿ ಚಪ್ಪರ ಹಾಕಿ ಅಲಂಕಾರ ಮಾಡಲಾಗಿತ್ತು. ಐದು ಕಡೆಗಳಲ್ಲಿ ಏಕಕಾಲದಲ್ಲಿ ಮೆರವಣಿಗೆ ಏರ್ಪಾಡಾಗಿತ್ತು. ಪ್ರಭು ವಿಶ್ವಕರ್ಮನು ಐದು ರೂಪಗಳನ್ನು ಧರಿಸಿ ಐದು ಕಡೆಗಳಲ್ಲಿ ಉಪಸ್ಥಿತನಿದ್ದನು.

ಅಂಗೀರ ಮಹರ್ಷಿಯ ಅಶ್ರಮದಲ್ಲಿ ಮನು, ಪರಾಶರ ಮಹರ್ಷಿ ಅಶ್ರಮದಲ್ಲಿ ಮಯ, ಕೌಶಿಕ ಮಹರ್ಷಿಯ ಅಶ್ರಮದಲ್ಲಿ ತ್ವಷ್ಟ್ರ, ಭೃಗು ಮಹರ್ಷಿಯ ಅಶ್ರಮದಲ್ಲಿ ಶಿಲ್ಪ, ಜೈಮಿನಿ ಮಹರ್ಷಿಯ ಅಶ್ರಮದಲ್ಲಿ ದೈವಜ್ಞ ಉಪಸ್ಥಿತರಾಗಿ ನಿರ್ದಿಷ್ಟ ಪಡಿಸಿದ ಮುಹೂರ್ತದಲ್ಲಿ

ವಿವಾಹಿತರಾದರು. ಮನು ಪತ್ನಿ ಕಾಂಚನಾ, ಮಯ ಪತ್ನಿ ಸುಲೋಚನಾ, ತ್ವಷ್ಟ್ರ ಪತ್ನಿ ಜಯಂತಿ, ಶಿಲ್ಪ ಪತ್ನಿ ಕರುಣಾ, ದೈವಜ್ಞ ಪತ್ನಿ ಚಂದ್ರಿಕಾ. ಪ್ರಾಣಿಗ್ರಹಣ ಸಂಸ್ಕಾರಗಳು ಮುಗಿದ ತರುವಾಯ ಐವರೂ ತಮ್ಮ ತಮ್ಮ ಪತ್ನಿಯರೊಂದಿಗೆ ಮರವಣಿಗೆಯಲ್ಲಿ ಇಲೋಲಗಢದ ಪರ್ವತಕ್ಕೆ ಬಂದು ತಂದೆಯಾದ ಪ್ರಭು ವಿಶ್ವಕರ್ಮನ ಆಜ್ಞೆಯಂತೆ ಗೃಹಸ್ಥಾಶ್ರಮ ಪ್ರವೇಶ ಮಾಡಿದರು.

ಅವರ ವಂಶದಲ್ಲಿ ಬೇರೆ ಬೇರೆ ಗೋತ್ರಗಳು ಆಚರಣೆಗೆ ಬಂದವು. ಪ್ರತ್ಯೇಕ ಬ್ರಹ್ಮರ್ಷಿಗಳ ವಂಶದಲ್ಲಿ ಇಪ್ಪತ್ತೈದು ಗೋತ್ರಗಳು ಆಚರಣೆಯಲ್ಲಿದ್ದವು. ಸಾನಗ ಗೋತ್ರಿಯು ಮನು ಬ್ರಹರ್ಷಿಯ ಇಪ್ಪತ್ತೈದು ಗೋತ್ರಗಳು –ವಿಶ್ವವೇತ್ರ, ಸಂವರ್ತ, ಭೂಬಲ, ಮಾಮನ್ಯು, ಮನ್ಯುಪತಿ, ಜಯತ್ಕುಮಾರ, ಭಾನುಮತಿ, ಪುರಂಜಯ, ಶ್ವೇತಾಂಗಲ, ಸಮಂತ, ವಿಶ್ವಾತ್ಮ, ಮನು, ವಿಶ್ವಕರ್ಮ, ಕಾಶ್ಯಪ, ಬಾಬ್ರಾಜ, ಉಪಸಾಗನ, ಚಿತ್ರಾವಸು, ಸರ್ವಭದ್ರ, ಮಧು, ಭಾಸ್ವಂತ, ವನಜ, ಚಿತ್ರಾಧರ್ಮ, ಸುಲೋಚನಾ, ಪ್ರಭೋದಕ, ಸುಪತ, ಸತ್ಯಕ.

ಸನಾತನ ಗೋತ್ರಿಯ ಮನು ಬ್ರಹ್ಮರ್ಷಿಯ ಇಪ್ಪತ್ತೈದು ಗೋತ್ರಗಳು–ವಿಶ್ವಧರ್ಮ, ವಿದಾತ್ಮ, ಧಾರ್ಮಿಕ, ಸನತ್ಕುಮಾರ, ಮಾನುಷ, ಅದಿತ್ಯಸೇನ, ಶಾಂತಮತಿ, ತಕ್ಷ, ಭಾವಭೋಧ, ವರ್ಧತ, ಸುತಕ್ಷಾ, ಪ್ರತಿತಕ್ಷ, ವಿಶ್ವಚಕ್ಷು, ವಾಮದೇವ ಉಪಸನಾತನ, ಪಣ್ಣಾಗ, ಸುಮೇಧ, ವಿಶೃತ, ವಿಶ್ವದಕ್ಷ, ವಿಶ್ವತೋಮುಖ, ವಿದ್ಯಂತ, ಪರಿಷಂಗ, ಜಯದ, ಪ್ರಹರ್ಷಿ, ರೈವತ.

ಅಹಭೂನ ಗೋತ್ರಿಯ ತ್ವಷ್ಟ ಬ್ರಹ್ಮರ್ಷಿಯ ಇಪ್ಪತ್ತೈದು ಗೋತ್ರಗಳು–ಅಧಿಧಾತ್ಯ, ಕುಶಧರ್ಮ, ಪ್ರತಿಪಕ್ಷ, ಯಜ್ಞಪಾಲ, ಸಂವರ್ತ, ವಿಶ್ವಮಯ, ಮೋದಮತಿ, ವಿತಕ್ಷ, ಪದ್ಮರಕ್ಷ, ಲೋಕೇಶ, ತ್ರಿಮುಖ, ವಿಶ್ವರೂಪ, ಕಾಂಡವಾ, ಭದ್ರದತ್ತ, ಉಪಾಹಭೂನು, ವಿಘನಸ, ಜಯಸೇನ, ಚಿತ್ರಸೇನ, ಜಾತರೂಪ, ಭೋದಾಯನ, ಹರಿಧರ್ಮ, ಬ್ರಹ್ಮದೀಕ್ಷಿತ, ವಿನಯ, ದೇವಲ, ಪ್ರಭೋಗತ.

ಪ್ರತ್ನ ಗೋತ್ರೀಯ ಶಿಲ್ಪ ಬ್ರಹ್ಮರ್ಷಿಯ ಇಪ್ಪತ್ತೈದು ಗೋತ್ರಗಳು – ದೇಶಿಕ, ಸಹಸ್ರಬಾಹು, ಚಿತ್ರಕ, ಲೋಕವೇತ್ರ, ಪ್ರಹರ್ಷಣ, ವಜ್ರಜಿತ, ವಸುಧರ್ಮ, ಗಿರಿಧರ್ಮ, ಇಂದ್ರ ಸೇನ, ವಾಸ್ತುಕ, ಸನಾಬಸ, ರುವಿದತ್ತ, ಉಪ ಪ್ರತ್ನ, ಪಭೋಧ ಮನು, ವ್ಯಂಜಕ, ದೇವಭದ್ರ, ಜ್ಞಾನಭದ್ರ, ವಿಶ್ವ ಭದ್ರ ಇಂದ್ರಸೇನ ವಾಸ್ತುಭ, ಪ್ರಜ್ಞಾಮತಿ, ಭೋಕ್ತ, ವ್ಯಮನು, ವೇದಪಾಲ, ರಾಜಧರ್ಮ, ಶಕ್ವರ.

ಸುಪರ್ಣಾಶ್ವ ಗೋತ್ರೀಯ ದೈವಜ್ಞ (ವಿಶ್ವಜ್ಞ) ಬ್ರಹ್ಮರ್ಷಿ ಇಪ್ಪತ್ತೈದು ಗೋತ್ರಗಳು– ಸಂಜ್ಞಕ, ಯಾಜ್ಞಿಕ, ಶೃತಿ ವರ್ಧನ, ಮುನಿಸುವೃತ, ಮಣಿಭದ್ರ, ಕರ್ದಮ, ಅಚ್ಯುತ, ಅರ್ಜಿತ, ಅರ್ವಂತ, ಆದಿತ್ಯಸೇನ, ಸಾಂಖ್ಯಾಯನ, ಸೌರಸೇನ, ಪರಿತ, ವಿಶ್ವಜ್ಞ, ಸುಪರ್ಣ, ಸಾಂತ್ವ, ಉಪಗೋಪ, ಸುದರ್ಶನ, ತೇಜೋಧರ್ಮ, ಮೈತ್ರೇಯ, ಉಪಯಜ್ಞ, ನಿಗಮ, ಆದಿತ್ಯ, ದೇವಸೇನ, ಭೋಧಕ.

ಈ ಎಲ್ಲಾ ಬ್ರಹ್ಮರ್ಷಿಗಳು ಶಿಲ್ಪ ಶಾಸ್ತ್ರದಲ್ಲಿ ವಿಶ್ವ ಪ್ರಖ್ಯಾತರಾದವರು. ಇವರೆಲ್ಲರು ಶಿಲ್ಪ ಶಾಸ್ತ್ರವಲ್ಲದೆ ಅನೇಕ ವಿದ್ಯೆಗಳನ್ನು ಪ್ರಾಪ್ತಿಮಾಡಿಕೊಂಡಿದ್ದರು. ಇವರೆಲ್ಲರೂ ಅನೇಕ ಪ್ರಕಾರದ ಜ್ಞಾನ, ವಿಜ್ಞಾನ, ವೇದ, ವೇದಾಂಗ, ಶಾಸ್ತ್ರ, ಮರಾಣ ಮೊದಲಾದವುಗಳಲ್ಲಿ ಪಾರಂಗತರಾಗಿದ್ದರು.

ಇವರು ಪೃಥ್ವಿಯಲ್ಲಿ ಅನೇಕ ಹೆಸುರುಗಳಿಂದ ಪ್ರಸಿದ್ಧರಾಗಿದ್ದರು. ಅವುಗಳಲ್ಲಿ ಕೆಲವು ಹೆಸರು ಈ ರೀತಿ ಇವೆ. ದೀಕ್ಷಿತ, ಮಹಾಮುನಿ, ಪಂಡಿತ, ಧರ್ಮಾಧಿಕಾರಿ, ವೇದಪಾಠಕ, ವಿಶ್ವಬ್ರಾಹ್ಮಣ, ಆಚಾರ್ಯ, ಪಂಚಾಲ, ರಥಪತಿ, ರಥಕಾರ, ತಕ್ಷ, ತಂಕಾಸ, ಕರ್ಮಕಾರ, ಅಂಗೀರಾ, ಜಾಂಗಿಡ, ಕಂಸಾಲಿ, ನಾರಾಶಂಸ, ಅಕ್ಕಸಾಲಿ, ದೀವಾನ, ಕಮಾಲಿಯಾನ, ಪಂಚಶಿಲ್ಪ, ಕೋಕಾಸ, ಸೌಧನ್ವ ಪೌರುಷೇಯ, ನಾಶಂಸ ಮೊದವಾದವು.

**೩.೧೫. ಸ್ತ್ರೀಯರ ಸ್ಥಾನಮಾನಗಳು:**

ಕಮ್ಮಾರರು ಮಾತೃದೇವತೆಯ ಆರಾಧಕರು. ಈ ಮಾತೃ ದೇವತೆಗಳಿಗೆ ಕೊಡುವ ಗೌರವಾಧಾರಣೆಗಳನ್ನು ಕುಟುಂಬದ ಸ್ತ್ರೀಯರಿಗೆ ಕೊಡುವ ಪರಂಪರೆ ಪರಂಪರಾನುಗತವಾಗಿ ಬೆಳೆದು ಬಂದಿರುವುದನ್ನು ಇವರಲ್ಲಿ ಕಾಣುತ್ತೇವೆ. ಒಂದು ಕಾಲದಲ್ಲಿ ಮಹಿಳೆಯರೇ ಈ ಸಮುದಾಯದ ಆಸ್ತಿಗೆ ವಾರಸುದಾರಳಾಗಿರುತ್ತಿದ್ದಳು. ತಾಯಿಯಿಂದ ಹೆಣ್ಣುಮಕ್ಕಳಿಗೆ ಆಸ್ತಿ ವರ್ಗಾವಣೆಯಾಗುತ್ತಿತ್ತು. ಈಗ ಕುಟುಂಬದ ಆಸ್ತಿ ಕುಟುಂಬದ ಯಜಮಾನನ ಹೆಸರಿನಲ್ಲಿರುತ್ತದೆ. ಈ ಆಸ್ತಿ ಗಂಡು ಮಕ್ಕಳಿಗೆ ಹಂಚಿಕೆಯಾಗುತ್ತದೆ.

ಕಮ್ಮಾರರ ಕುಟುಂಬಗಳಲ್ಲಿ ಮೇಲ್ನೋಟಕ್ಕೆ ಪಿತೃಪ್ರಧಾನ ವ್ಯವಸ್ಥೆ ಇರುವುದು ಕಂಡು ಬಂದರೂ ಕುಟುಂಬದ ಒಳಾಡಳಿತ ವ್ಯವಸ್ಥೆಯಲ್ಲಿ ಮಹಿಳೆ ಪ್ರಧಾನ ಪಾತ್ರವಹಿಸುತ್ತಿರುವುದನ್ನು ಇಂದು ಕಾಣುತ್ತೇವೆ. ಅನೇಕ ಕುಟುಂಬಗಳಲ್ಲಿ ಕುಟುಂಬದ ನಿರ್ವಹಣೆಯ ಜವಾಬ್ದಾರಿ ಮಹಿಳೆಯನ್ನೇ ಅವಲಂಬಿಸಿರುತ್ತದೆ. ಮನೆಯಲ್ಲಿಯ ಪ್ರತಿಯೊಂದು ಆಗು ಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸಿ ತೀರ್ಮಾನ ಕೈಗೊಳ್ಳುತ್ತಾಳೆ. ಮನೆಯಲ್ಲಿ ನಡೆಯುವ ಪ್ರತಿಯೊಂದು ಮಂಗಲ ಕಾರ್ಯದ ಜವಾಬ್ದಾರಿಯನ್ನು ಇವಳೇ ನಿರ್ವಹಿಸುತ್ತಿರುತ್ತಾಳೆ. ಕಮ್ಮಾರರ ಕುಟುಂಬಗಳಲ್ಲಿಯ ಮಹಿಳೆಯರಲ್ಲಿ ಸಾಮಾನ್ಯವಾಗಿ ಅನಕ್ಷರತೆಯ ಪ್ರಮಾಣವು ಹೆಚ್ಚಾಗಿರುವು ಕಂಡುಬರುತ್ತದೆ. ಆದರೆ ವ್ಯವಹಾರಿಕ ಜೀವನದಲ್ಲಿ ಇವರು ಅಕ್ಷರಸ್ತರಿಗಿಂತ ಬಲು ಚುರುಕು. ಗಂಡಸರು ಕಮ್ಮಾರಿಕೆಯಲ್ಲಿ ತೊಡಗಿಕೊಂಡರೆ ಇವರು ಕಸೂತಿ, ಚಿತ್ರಕಲೆ, ಮುಂತಾದ ಚಿಕ್ಕ ಚಿಕ್ಕ ಕಲಾತ್ಮಕ ವಸ್ತುಗಳನ್ನು ತಯಾರಿಸುತ್ತಾರೆ. ಗಣೇಶ ಚತುರ್ತಿಯ ಸಂದರ್ಭದಲ್ಲಿ ಮಣ್ಣಿನಿಂದ ಗಣಪತಿ ಮೂರ್ತಿಗಳನ್ನು ಕೆಲ ಹೆಣ್ಣುಮಕ್ಕಳು ಸಿದ್ಧಪಡಿಸುವುದನ್ನು ಕಾಣುತ್ತೇವೆ. ಕೆಲವೊಂದು ಪ್ರದೇಶಗಳಲ್ಲಿ ಈ ಸಮುದಾಯದ ಮಹಿಳೆಯರು ವೃತ್ತಿಯಲ್ಲಿ ನಿರತನಾದ ಗಂಡನಿಗೆ ಸಹಾಯ ಮಾಡುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದ್ದೇನೆ.

**೩.೧೬. ರಕ್ತ ಸಂಬಂಧಗಳು:**

ಕಮ್ಮಾರರಲ್ಲಿ ತಂದೆಯ ಮೂಲಕವೇ ರಕ್ತಸಂಬಂಧವನ್ನು ಗುರುತಿಸಿಕೊಳ್ಳುತ್ತಾರೆ. ತಂದೆಯ ನಂತರ ಗಂಡು ಸಂತತಿಯ ಮೂಲಕ ಕುಟುಂಬ, ವಂಶ, ಕುಲಗೋತ್ರ, ಮನೆದೇವರು, ಕರುಳುಬಳ್ಳಿ

ಸಂಬಂಧ, ವಿವಾಹ ಮೊದಲಾದ ಸಾಮಾಜಿಕ ಆಂಶಗಳು ರಕ್ತ ಸಂಬಂಧದ ಆಧಾರದ ಮೇಲೆಯೆ ರಚಿತವಾಗಿರುತ್ತದೆ. ತಂದೆ-ತಾಯಿ, ಅಕ್ಕ-ತಂಗಿ , ಅಣ್ಣ-ತಮ್ಮ, ಚಿಕ್ಕಪ್ಪ-ದೊಡ್ಡಪ್ಪ, ಅತ್ತೆ-ಮಾವ, ಮುಂತಾದವರ ಸುತ್ತ ಕುಟುಂಬ ಮತ್ತು ರಕ್ತ ಸಂಬಂಧ ಕೇಂದ್ರಿಕೃತವಾಗಿರುತ್ತದೆ. ನಾವೆಲ್ಲರೂ ಒಂದೇ ರಕ್ತ ಸಂಬಂಧಿಗಳು, ಒಡನಾಡಿಗಳು, ಕುಟುಂಬದವರು, ವಂಶದವರು, ನೆಂಟರು, ಅಣ್ಣ ತಮ್ಮಂದಿರು ಎಂಬ ಅಭಿಮಾನ ಮತ್ತು ತನ್ನತನ ಈ ಸಮುದಾಯಲ್ಲಿ ಪ್ರಧಾನವಾಗಿದೆ.

ಕಮ್ಮಾರರು, ಅಕ್ಕಸಾಲಿಗರು, ಬಡಿಗರು, ಶಿಲ್ಪಿಗಳು, ಕಂಚುಗಾರರು ಇವರೆಲ್ಲರೂ ರಕ್ತ ಸಂಬಂಧಿಗಳೇ ಅಗಿರುವುದರಿಂದ ಅವರಲ್ಲಿ ಪ್ರೀತಿ ವಿಶ್ವಾಸಗಳಿಂದ ಕೂಡಿದ ಸಹಕಾರ ಮತ್ತು ಸಂಬಂಧಗಳು ಬೆಳೆದಿರುತ್ತವೆ. ಇವರ ಕುಟುಂಬಗಳಲ್ಲಿ ಒಗ್ಗಟ್ಟು ಮತ್ತು ಐಕ್ಯತೆ ಮೂಡಲು ರಕ್ತ ಸಂಬಂಧವೇ ಪ್ರಮುಖ ಕಾರಣವಾಗಿದೆ. ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಒಳಪಂಗಡ ವಿವಾಹ ಅಥವಾ ಒಳ ಬಾಂಧವ್ಯ ವಿವಾಹ ಪದ್ಧತಿಗೆ ಹೆಚ್ಚು ಮಹತ್ವ ಕೊಡುತ್ತಾರೆ. ಅಂತರ್ಜಾತಿಯ ವಿವಾಹಕ್ಕೆ ಇವರಲ್ಲಿ ಅವಕಾಶವಿಲ್ಲ. ತಂದೆಯಷ್ಟೇ ಗೌರವವನ್ನು ಸೋದರಮಾವನಿಗೆ, ತಾಯಿಯಷ್ಟೇ ಗೌರವವನ್ನು ಸೋದರತ್ತೆಗೆ ಕೊಡುವ ಸಂಪ್ರದಾಯ ಈ ಸಮುದಾಯದಲ್ಲಿ ಬೆಳೆದುಕೊಂಡು ಬಂದಿದೆ. ಒಳಪಂಗಡಗಳಿಂದ ಕುಲ ಗೋತ್ರಗಳು ಬೇರೆ ಬೇರೆಯಾದರು ಮುಲತಃ ಒಂದೇ ಕುಟುಂಬದ ರಕ್ತ ಸಂಬಂದಿಗಳಂತೆ ಬಾಳಿ ಬದುಕುವ ಸಂಸ್ಕೃತಿ ಇವರದಾಗಿದೆ.

**೩.೧೭. ಶಾರೀರಿಕ ಲಕ್ಷಣಗಳು:**

ಕಮ್ಮಾರರು ಸಾಮಾನ್ಯವಾಗಿ ಐದು ಅಡಿ ಐದು ಇಂಚು ಉದ್ದದಲ್ಲಿರುವುದು ಕಂಡು ಬರುತ್ತದೆ. ಕಪ್ಪು ಮತ್ತು ಗೋಧಿ ಮಿಶ್ರಿತ ಕಂದು ಬಣ್ಣದವರೇ ಹೆಚ್ಚಾಗಿ ಕಂಡು ಬರುತ್ತಾರೆ. ದಿನಕ್ಕೆ ೮ ರಿಂದ ೧೦ ಗಂಟೆಗಳ ಕಾಲ ಸದಾ ಬೆಂಕಿಯ ಮುಂದೆ ಕುಳಿತು ಕೆಲಸ ಮಾಡುತ್ತಿರುವುದರಿಂದ ಇವರ ಮೈಬಣ್ಣ ಸುಟ್ಟು ಕಪ್ಪಾಗಿರುವುದು ಸಹಜ. ದುಂಡವಾಗಿರುವ ತಲೆ, ಸಾಮಾನ್ಯವಾಗಿ ದಪ್ಪವಾಗಿರುವ ಮೂಗು ಇರುವವರನ್ನು ಕಾಣುತ್ತೇವೆ. ಕೆಲವರು ಗುಂಗುರು ಕೂದಲನ್ನು ಹೊಂದಿದವರಾಗಿದ್ದರೆ. ಇವರು ಕಟ್ಟು ಮಸ್ತಾದ ಶರೀರವನ್ನು ಹೊಂದಿರುತ್ತಿದ್ದರು. ಆದರೆ ಇಂದು ತಿನ್ನಲ್ಲಿಕ್ಕೆ ಸರಿಯಾದ ಪೌಷ್ಠಿಕಾಂಶದ ಕೊರತೆ ಇದ್ದುದರಿಂದ ಕಟ್ಟು ಮಸ್ತಾದ ಶರೀರವನ್ನು ಹೊಂದಿದವರು ಕಡಿಮೆ ಎಂದು ಹೇಳಬೇಕಾಗುತ್ತದೆ. ಹೆಂಗಸರು ಸಾಮಾನ್ಯವಾದ ಎತ್ತರ ಹೊಂದಿದ್ದು ಇವರು ಕಪ್ಪು ಮತ್ತು ಗೋಧಿ ಮಿಶ್ರಿತ ಕಂದು ಬಣ್ಣದವರಾಗಿದ್ದಾರೆ.

**೩.೧೮. ಮನೆಗಳ ರಚನೆ:**

ಕಮ್ಮಾರಿಕೆ ವೃತ್ತಿ ಸಾಮಾನ್ಯವಾಗಿ ಸಮ್ಮೃದ್ಧವಾಗಿ ಕಂಡು ಬರುವುದು ಗ್ರಾಮೀಣ ಪ್ರದೇಶಗಳಲ್ಲಿ. ಎಲ್ಲಿ ಕೃಷಿಕ ವೃತ್ತಿ ಇರುತ್ತದೆಯೋ ಅಲ್ಲಿ ಕಮ್ಮಾರರು ಕಂಡು ಬರುತ್ತಾರೆ. ಕರ್ನಾಕದದ ಯಾವುದೇ ಗ್ರಾಮೀಣ ಪ್ರದೇಶವನ್ನು ಪ್ರವೇಶಿಸಿದರೆ ಅಲ್ಲಿ ಕಮ್ಮಾರರ ಸಮುದಾಯದವರು ಕಂಡು ಬರುತ್ತಾರೆ.

ಕಮ್ಮಾರಿಕೆ ವೃತ್ತಿಯಲ್ಲಿ ಅಲೆಮಾರಿಗಳು ಇರುವುದು ಕಂಡು ಬರುತ್ತದೆ. ಇವರನ್ನು ಅಲೆಮಾರಿ ಕಮ್ಮಾರರು ಎಂದೇ ಕರೆಯುವರು. ಸಾಮಾನ್ಯವಾಗಿ ಮೇ ಅಥವಾ ಜೂನ್ ತಿಂಗಳಲ್ಲಿ ಮುಂಗಾರು ಪ್ರಾರಂಭವಾದ ಮೇಲೆ ಈ ಅಲೆಮಾರಿ ಕಮ್ಮಾರರು ಗ್ರಾಮೀಣ ಪ್ರದೇಶಗಳಿಗೆ ಬಂದು ಊರ ಹೊರಗೆ ತಮ್ಮದೆ ಅದ ಟೆಂಟ್ ಹಾಕಿಕೊಂಡು ಕೃಷಿಗೆ ಬೇಕಾದ ವಸ್ತುಗಳನ್ನು ಸಿದ್ಧಪಡಿಸಿ ಕೊಡುತ್ತಾ ಸಂಚರಿಸುತ್ತಿರುತ್ತಾರೆ. ಸಾಮಾನ್ಯವಾಗಿ ಯಾವ ಊರುಗಳಲ್ಲಿ ಖಾಯಂ ಕಮ್ಮಾರರು ಇರುವುದಿಲ್ಲವೊ ಆ ಊರುಗಳಿಗೆ ಹೋಗಿ ಅಲ್ಲಿ ತಮ್ಮ ವೃತ್ತಿಯನ್ನು ಪ್ರಾರಂಭಿಸುತ್ತಾರೆ. ಗ್ರಾಮಗಳಲ್ಲಿ ವಾಸಿಸುತ್ತಿರುವ ಕಮ್ಮಾರರು ಸಾಮಾನ್ಯವಾಗಿ ಇತರೆ ಸಮುದಾಯದವರು ವಾಸಿಸುವ ಓಣಿಗಳಲ್ಲಿಯೇ ಮನೆ ಕಟ್ಟಿಕೊಂಡು ವಾಸಿಸುತ್ತಿರುವುದನ್ನು ಕಾಣುತ್ತೇವೆ. ತಮ್ಮ ವೃತ್ತಿಗಾಗಿ ಕೆಲವರು ಊರ ಹೊರಗೆ ಸಣ್ಣದಾದ ಮನೆ ಅಥವಾ ಟೆಂಟ್ ಹಾಕಿಕೊಂಡಿರುತ್ತಾರೆ. ಊರ ಒಳಗೆ ಇವರು ಕೆಲಸವನ್ನು ಮಾಡುತ್ತಿದ್ದರೆ ಇತರರಿಗೆ ತೊಂದರೆಯಾಗುತ್ತದೆ ಎಂಬ ಕಾರಣದಿಂದ ಊರ ಹೊರಗೆ ಕುಲುಮೆಗಳನ್ನು ಹಾಕಿಕೊಳ್ಳುವುದು ಒಂದು ಕಾಲಕ್ಕಿತ್ತು. ಇಂದು ಅನೇಕರು ಹಳ್ಳಿಗಳ ಮಧ್ಯದಲ್ಲಿಯೇ ತಮ್ಮ ಕುಲುಮೆಗಳನ್ನು ಹಾಕಿಕೊಂಡು ಕೆಲಸದಲ್ಲಿ ನಿರತವಾಗಿರುವುದನ್ನು ಕಾಣಬಹುದು.

ಕಮ್ಮಾರರು ತಮ್ಮ ವೃತ್ತಿಗೆ ಅನೂಕೂಲವಾಗಲೆಂದು ಮೇಲೆ ತಗಡಿನ ಸೀಟು ಅಥವಾ ಹೆಂಚನ್ನು ಹಾಕಿ ಒಳಗೆ ಗಾಳಿ ಬರುವುದಕ್ಕೆ ಅವಕಾಶ ಮಾಡಿಕೊಂಡಿರುತ್ತಾರೆ. Work Shopನ ಪ್ರವೇಶದಲ್ಲಿ ಸಾಮಾನ್ಯವಾಗಿ ಬಾಗಿಲು ಇರುವುದಿಲ್ಲ. ಕೆಲ ಪ್ರದೇಶಗಳಲ್ಲಿ ಕಮ್ಮಾರರು ಹೆಂಚಿನ ಗುಡಿಸಲು ಹಾಗೂ ಹುಲ್ಲಿನ ಗುಡಿಸಲುಗಳನ್ನು ಹಾಕಿಕೊಂಡಿರುತ್ತಾರೆ. ಆದರೆ ಹುಲ್ಲಿನ ಗುಡಿಸಲುಗಳಿರುವುದು ತೀರ ಕಡಿಮೆ ಯಾಕೆಂದರೆ ಬೆಂಕಿಯ ಜೊತೆಗೆ ಕೆಲಸ ಮಾಡುತ್ತಿರುವುದರಿಂದ ಬೆಂಕಿ ತಗಲುವ ಸಾಧ್ಯತೆ ಹೆಚ್ಚಾಗಿರುವುದರಿಂದ ಹುಲ್ಲಿನ ಗುಡಿಸಲುಗಳನ್ನು ಹಾಕಿಕೊಳ್ಳುವುದು ತೀರ ಅಪರೂಪ. ಕೊಳ್ಳೆಗಾಲ ತಾಲೂಕಿನಲ್ಲಿ ಕೆಲ ಕಮ್ಮಾರರು ವಾಸಿಸುವುದಕ್ಕಾಗಿ ಹುಲ್ಲಿನ ಮನೆಗಳನ್ನು ನಿರ್ಮಿಸಿಕೊಂಡಿರುವುದು ಕಂಡು ಬರುತ್ತದೆ.

ಕಮ್ಮಾರರು ವಾಸಿಸುವ ಮನೆಗಳು ಅಯಾ ಪ್ರದೇಶದ ಮಾದರಿಯಲ್ಲೇ ಇರುವುದು ಕಂಡು ಬರುತ್ತವೆ. ಸಾಮಾನ್ಯವಾಗಿ ಚೌಕಕಾರದ ಮನೆಗಳು ಇರುವುದು ಕಂಡು ಬರುತ್ತದೆ. ಮನೆಯ ಮೇಲೆ ಹೆಂಚನ್ನು ಹಾಕಿರುತ್ತಾರೆ. ಕಮ್ಮಾರರಲ್ಲಿ ಕೆಲಸದ ಮನೆ ಮತ್ತು ವಾಸಿಸುವ ಮನೆ ಬೇರೆ ಬೇರೆಯಾಗಿರುತ್ತದೆ. ವಾಸದ ಮನೆಯ ಪಕ್ಕದಲ್ಲಿ ಕೆಲಸದ ಮನೆ ಇರುತ್ತದೆ. ಅಲ್ಲಿ ತಿದಿ (ಗಾಳಿ ಬೀಸುವ ಯಂತ್ರ ) ಕುಲುಮೆ, ಅಡಿಗಲ್ಲು, ಒಂದು ಕಬ್ಬಣದ ಪೆಟ್ಟಿಗೆ, ನೀರಿಗಾಗಿ ಚಿಕ್ಕ ದೋಣಿ ಇರುತ್ತದೆ. ಕೆಲವೊಬ್ಬರು ತಮ್ಮ ವಸ್ತುಗಳನ್ನಿಡಲು ಗೋಡೆಯಲ್ಲಿ ಕಪಾಟು ಮಾಡಿರುತ್ತಾರೆ. ಕೆಲಸದ ಮನೆಯ ಮಾಳಿಗೆ ಎತ್ತರದಲ್ಲಿರುತ್ತದೆ. ಬೆಂಕಿ ಮಾಳಿಗೆಗೆ ತಾಗದಂತೆ ಎಚ್ಚರಿಕೆ ವಹಿಸುತ್ತಾರೆ. ಮೂರು ನಾಲ್ಕು ಜನ ಒಳಗೆ ಕುಳಿತುಕೊಳ್ಳುವಷ್ಟೇ ಸ್ಥಳಾವಕಾಶವನ್ನು ಮಾಡಿಕೊಂಡಿರುತ್ತಾರೆ. ಅಷ್ಟೇನು ಸ್ಥಿತಿವಂತರಲ್ಲದ ಕಮ್ಮಾರರ ಮನೆಗಳು ಅತ್ಯಂತ ಸರಳವಾಗಿರುತ್ತವೆ. ಕೆಲವರು ಮನೆಯ

ಮುಂದೆ ಸಾಕಷ್ಟು ಸ್ಥಳಾವಕಾಶ ಮಾಡಿಕೊಂಡು ಅಲ್ಲಿಯೇ ಕುಲುಮೆಯನ್ನು ಹಾಕಿಕೊಂಡಿರುವ ಕುಟುಂಬಗಳೂ ಕಂಡುಬರುತ್ತವೆ. ಮನೆಯ ಒಳರಚನೆಯಲ್ಲಿ ದೇವರು ಕೋಣೆ ಮತ್ತು ಅಡುಗೆ ಮನೆ ಬೇರೆ ಬೇರೆಯಾಗಿರುತ್ತದೆ. ಮನೆಯ ಒಂಬಾಗದಲ್ಲಿ ಸ್ನಾನಕ್ಕೆ ಬಂದು ಚಿಕ್ಕ ರೂಮ್ ಮಾಡಿಕೊಂಡಿರುತ್ತಾರೆ. ಮಲಗುವುದಕ್ಕಾಗಿ ವಿಶೇಷವಾದ ಕೊಠಡಿಗಳನ್ನು ನಿರ್ಮಿಸಿಕೊಂಡಿರುವುದು ಹೆಚ್ಚಾಗಿ ಕಂಡುಬರುವುದಿಲ್ಲ. ಕಮ್ಮಾರರು ಹೆಚ್ಚಾಗಿ ಶಕ್ಕಸಕ್ಕಾಗಿ ಹೊರಗೆ ಹೋಗುವುದರಿಂದ Toilet ರೂಮ್ ಕಟ್ಟಿಕೊಂಡಿರುವುದಿಲ್ಲ.

**೩.೧೯. ಕುಲುಮೆಗಳ ರಚನೆ:**

"ಯಾವುದೇ ಒಂದು ಸಂಸ್ಕೃತಿಯ ಹುಟ್ಟು ಮತ್ತು ಬೆಳವಣಿಗೆಯಲ್ಲಿ ಶ್ರಮಿಕ ವರ್ಗದ ಪಾಲು ಅಧಿಕವಾಗಿಯೇ ಇರುತ್ತದೆ. ಹಿಂದಿನ ಕಾಲದಲ್ಲಿ ಗುಂಪು ಗುಂಪುಗಳಿದ್ದು ಜನಸಮುದಾಯಗಳು ಸಂಸ್ಕೃತಿಯನ್ನು ಕಟ್ಟಿದವು ಎನ್ನುವ ವಾದವೊಂದಿದ್ದರೆ, ಕಾಲಾಂತರದಲ್ಲಿ ಆ ಗುಂಪುಗಳು ವಿಭಜನೆಗೊಳ್ಳುತ್ತಾ ತಮ್ಮ ತಮ್ಮೊಳಗೆ ಶ್ರಮ ಶಕ್ತಿಯನ್ನು ವಿಂಗಡಿಸಿಕೊಂಡಿರಬೇಕು. ಹೀಗೆ ವಿಂಗಡನೆಗೊಂಡ ಜನ ಸಮುದಾಯಗಳೇ ನಂತರದ ಕಾಲದಲ್ಲಿ ಜಾತಿ, ಬುಡಕಟ್ಟುಗಳಾಗಿ ರೂಪಾಂತರಗೊಂಡಿರಬೇಕೆನಿಸುತ್ತದೆ. ಒಂದು ಸಂಸ್ಕೃತಿಯ ಹುಟ್ಟು ಬೆಳವಣಿಗೆಗಳನ್ನು ಗುರುತಿಸುವಾಗ ಆ ಸಂಸ್ಕೃತಿ ಬೆಳೆದು ಬಂದ ಪರಿಸರದಲ್ಲಿಯೇ ಆ ಸಂಸ್ಕೃತಿ ಕಟ್ಟಿದವರ ನೆಲೆಗಳು ಇರುವುದನ್ನು ಸಂಶೋಧಕರು ಗುರುತಿಸಿದ್ದಾರೆ. ಹಿರೆ ಬೆಣಕಲ್ಲಿನಲ್ಲಿ ದೊರೆತ ಲೋಹ ಸಂಸ್ಕೃತಿಯ ಕಾಲದ ಸಮಾಧಿಗಳಲ್ಲಿ ಕಬ್ಬಿಣದ ಆಯುಧಗಳ ಅವಶೇಷಗಳಿರುವುದಾಗಿ ತಿಳಿಸುವುದರೊಂದಿಗೆ, ಈ ಕಬ್ಬಿಣ ಆಯುಧಗಳ ತಯಾರಿಕೆ ಕಾರ್ತಿಕೇಯ ವನದಲ್ಲಿ (ಸಂಡೂರು ಪ್ರಾಂತ) ಆಗಿರಬೇಕೆಂದು ಅಭಿಪ್ರಾಯ ಪಡಲಾಗಿದೆ".೩

ಎಡ್ವರ್ಡ್ ಥರ್ಸ್ಟನ್ ಅವರ ಪ್ರಕಾರ ಕಮ್ಮಾರರು ಪ್ರಾಚೀನ ಕಾಲದಿಂದ ಕಬ್ಬಿಣ ತಯಾರಿಸುವ ವೃತ್ತಿಯಲ್ಲಿ ತೊಡಗಿಕೊಂಡವರು ಮತ್ತು ಈ ಸಮುದಾಯವನ್ನು ಕೀಳು ಜಾತಿಗಳಲ್ಲಿ ಒಂದು ಎಂದು ಪರಿಗಣಿಸಿದ್ದರಿಂದ ಇವರು ಊರಿನ ಹೊರ ಭಾಗದಲ್ಲಿ ಕುಲುಮೆಗಳನ್ನು ಸಿದ್ಧಪಡಿಸಿಕೊಂಡು ಅಲ್ಲ ಕಾರ್ಯನಿರ್ವಹಿಸುತ್ತದ್ದರು ಎಂದು ಅಭಿಪ್ರಾಯ ಪಡುತ್ತಾರೆ.

"ಕಮ್ಮಾರರು ಸಾಮಾನ್ಯವಾಗಿ ಊರ ಹೊರ ಭಾಗದಲ್ಲಿ ಕುಲುಮೆಗಳನ್ನು ಹೊಂದಿರುತ್ತಿದ್ದರು. ಇವರು ಕುಲುಮೆಗಳು ಸಾಮಾನ್ಯವಾಗಿ ಉತ್ತರ ದಿಕ್ಕಿನ ಕಡೆಗೆ ಮುಖ ಮಾಡಿಕೊಂಡಿರುತ್ತಿದ್ದುದನ್ನು ಕಾಣಬಹುದು.

೧. ಅಡಿಗಲ್ಲು

೨. ತಿದಿ

೩. ಕುಲುಮೆ

೪. ಕೆಲಮಾಡುವ ಕಮ್ಮಾರ ಕುಳಿತುಕೊಳ್ಳುವ ಸ್ಥಳ

೫. ನೀರಿನ ಬಾನಿ

೬. ತಿದಿ ಎಳೆಯುವವನು

೭. ಕಬ್ಬಿಣ ಬಡಿಯುವವರು

೮. ದೇವರ ಫೋಟೊಗಳು ಹೆಚ್ಚಾಗಿ ಕಾಳಿಕಾಂಬ ಮತ್ತು ವಿಶ್ವಕರ್ಮರ ಫೋಟೊಗಳು

೯. ಅಗಿಷ್ಟಿಕೆ.[೪]

ಕಮ್ಮಾರರು ಪ್ರಾಚೀನ ಕಾಲದಿಂದಲೂ ತಿದಿಯನ್ನು ಉಪಯೋಗಿಸುತ್ತಿದ್ದರು. ಆದರೆ ಅದರ ಸ್ಥಾನದಲ್ಲಿ ಬ್ಲೋವರ್ಗಳು ಆಕ್ರಮಿಸಿಕೊಂಡಿವೆ. ಕೆಲವು ಕುಲುಮೆಗಳನ್ನು ನಾಲ್ಕು ಕಂಬ ಹಾಕಿ ಅದರ ಮೇಲೆ ತೆಂಗಿನ ಗರಿಗಳನ್ನು ಹಾಕಿ ಕುಲುಮೆಯನ್ನು ತಯಾರಿಸುತ್ತಿದ್ದರು. ಆದರೆ ಇತ್ತೀಚೆಗೆ ಮೇಲ್ಭಾಗಕ್ಕೆ ಹುಲ್ಲು ಅಥವಾ ಹೆಂಚನ್ನು ಹೊದಿಸುತ್ತಾರೆ.

"೧. ಕುಲುಮೆಗಳ ಮುಖ ಸಾಮಾನ್ಯವಾಗಿ ಉತ್ತರಭಾಗಕ್ಕೆ ಇರುತ್ತದೆ. ಕೆಲವು ಕಡೆ ಪೂರ್ವಕ್ಕೆ ಇಡುತ್ತಾರೆ.

೨. ಕುಲುಮೆಗಳು ಸಾಮಾನ್ಯವಾಗಿ ಊರ ಹೊರಗೆ ಇರುತ್ತವೆ.

೩. ಕುಲುಮೆ ಮತ್ತು ಕಬ್ಬಿಣವನ್ನು ಕಾಳಿ ಎಂದು ಪೂಜಿಸುತ್ತಾರೆ.

೪. ಕುಲುಮೆಯಲ್ಲಿ ಒಬ್ಬ ತಿದಿಕಾರ, ಹಾಗೂ ಕೆಲಸ ನಿರ್ವಹಿಸುವ ವ್ಯಕ್ತಿ ಇರುತ್ತಾನೆ.

೫. ಕಲುಮೆಕಾರನು ಸಾಮಾನ್ಯವಾಗಿ ಕುಲುಮೆಯ ಬಲಭಾಗದಲ್ಲಿ ಕುಳಿತು ಕೆಲಸ ನಿರ್ವಹಿಸುತ್ತಾನೆ.

೬. ಕೆಲವೊಂದು ಕಡೆಗಳಲ್ಲಿ ಕುಲುಮೆ ಮತ್ತು ಮನೆಗಳು ಎರಡೂ ಕೂಡ ಒಂದೇ ಸೂರಿನ ಅಡಿಯಲ್ಲಿ ಇರುತ್ತವೆ.

೭. ಕೆಲಸದ ಉಪಕರಣಗಳನ್ನು ದೇವರೆಂದು ಪೂಜಿಸುತ್ತಾರೆ. ಮತ್ತು ಇವುಗಳನ್ನು ಒಂದು ಕಡೆ ಜನರು ತಿರುಗಾಡದ ಸ್ಥಳದಲ್ಲಿ ಇಡುತ್ತಾರೆ.

೮. ದೀಪಾವಳಿಯ ಆಯುಧ ಪೂಜೆಯ ದಿನ ತಮ್ಮ ಕೆಲಸದ ಉಪಕರಣಗಳಿಗೆ ಪೂಜೆ ಮಾಡುತ್ತಾರೆ."[೫]

**೩.೨೦. ಆಹಾರ ಪದ್ಧತಿ:**

ಆದಿವಾಸಿಗಳ ಆಹಾರ ಪದ್ಧತಿ ಒಂದು ಕಾಲಕ್ಕೆ ವಿಶಿಷ್ಟವಾಗಿತ್ತು. ನೈಸರ್ಗಿಕವಾದ ಮತ್ತು ಹೆಚ್ಚು ಪ್ರೊಟೀನ್, ಕೆಲೊರಿಸ್, ಇರುವ ಗೆಡ್ಡೆ ಗೆಣಸುಗಳನ್ನು ಅವರು ಬಳಸುತ್ತಿದ್ದರು. ಕಬ್ಬಿಣದ ಕೆಲಸದಲ್ಲಿ ನಿರತರಾದವರಿಗೆ ಹೆಚ್ಚಿನ ಶಕ್ತಿ ಬೇಕಾಗುತ್ತದೆ. ಈ ಕಾರಣದಿಂದ ಅವರು ದೇಹಕ್ಕೆ ಹೆಚ್ಚು ಶಕ್ತಿ ನೀಡುವ ಅಹಾರ ಪದಾರ್ಥಗಳನ್ನು ಬಳಸುತ್ತಿದ್ದರು ಶ್ರಮಜೀವಿಗಳಾದ ಇವರು ಸಾಮಾನ್ಯವಾಗಿ ನಾಲ್ಕು ಸಲ ಆಹಾರ ಸೇವಿಸುತ್ತಿರುತ್ತಾರೆ. ಇಂದು ಸ್ಥಿತಿ ಬದಲಾಗಿದೆ. ಕಮ್ಮಾರಿಕೆ ವೃತ್ತಿಯಿಂದ ಇವರು ಕುಟುಂಬ ನಿರ್ವಹಣೆಗೆ ತೊಂದರೆಯಾಗುತ್ತಿರುವುದರಿಂದ ಸರ್ಕಾರದ ರೇಶನ್ ಅಂಗಡಿಗಳಿಂದ ಸತ್ವರಹಿತವಾಗಿರುವ ಆಹಾರ ಧಾನ್ಯಗಳನ್ನು ಖರೀದಿಸಿ ಅವುಗಳನ್ನೇ ಬಳಸುತ್ತಿದ್ದಾರೆ. ಇದರಿಂದ

ಕಮ್ಮಾರರಲ್ಲಿರುವ ಶಾರೀರಿಕ ಶಕ್ತಿ ಕುಂದುತ್ತಾ ನಡೆಯುತ್ತಿದೆ ಹಾಗೂ ಅನೇಕ ರೋಗಗಳಿಂದ ಬಳಲುವಂತಾಗಿದೆ.

ಕಮ್ಮಾರರು ಒಂದು ಕಾಲದಲ್ಲಿ ಬೇಟೆಯಾಡುತ್ತಿದ್ದರೆಂದು ತಿಳಿಯುತ್ತದೆ. ವೈದಿಕ ಸಂಪ್ರದಾಯ ಇವರನ್ನು ಹಂತ ಹಂತವಾಗಿ ಅವರಿಸಕೊಳ್ಳತೊಡಗಿದ ಮೇಲೆ ಇವರು ಬೇಟೆಯಾಡುವುದನ್ನು ಬಿಟ್ಟಿದ್ದಾರೆ. ಪ್ರಾದೇಶಿಕವಾದ ಆಹಾರ ಪದ್ಧತಿಯನ್ನೇ ಇವರು ಅವಲಂಬಿಸಿ ಬದುಕುತ್ತಿದ್ದಾರೆ. ಕರಾವಳಿ ಪ್ರದೇಶದಲ್ಲಿ ವಾಸಿಸುವ ಕಮ್ಮಾರರಿಗೆ ಕುಚಲಕ್ಕಿ ಪ್ರಮುಖ ಆಹಾರವಾಗಿದೆ. ಇವರು ಅಕ್ಕಿಯಿಂದಲೇ ಅನೇಕ ಆಹಾರ ಪದಾರ್ಥಗಳನ್ನು ಸಿದ್ದಪಡಿಸಿಕೊಳ್ಳುತ್ತಾರೆ. ಅವುಗಳಲ್ಲಿ ಅಕ್ಕಿ ಗಂಜಿ (ಬೆಳಿಗ್ಗೆ ಕುಡಿಯಲು) ನೀರಗಂಜಿ, ಅನ್ನ, ಅಕ್ಕಿರೊಟ್ಟಿ, ದೋಸೆ, ಇಡ್ಲಿ, ಅಕ್ಕಿ ಕಡುಬು, ಮುಂತಾದವುಗಳನ್ನು ತಯಾರಿಸುತ್ತಾರೆ. ಹಬ್ಬ, ಹುಣ್ಣಿಮೆ, ಜಾತ್ರೆಗಳಲ್ಲಿ ಒಬ್ಬಟ್ಟು, ಸಿಹಿಕಡುಬು ಮಾಡುತ್ತಾರೆ. ತರಕಾರಿಗಳನ್ನೆಲ್ಲಾ ಸೇರಿಸಿ ಸಾಂಬಾರು ತಯಾರಿಸುತ್ತಾರೆ. ಕೊಬ್ಬರಿ ಹಾಗೂ ಕೊಬ್ಬರಿ ಎಣ್ಣೆಯನ್ನು ಹೆಚ್ಚಾಗಿ ಬಳಸುತ್ತಾರೆ. ಅನೇಕ ತರದ ಸೊಪ್ಪುಗಳನ್ನು ಬಳಸುವುದನ್ನು ಕಾಣುತ್ತೇವೆ.

ನವರಾತ್ರಿ, ದೀಪಾವಳಿ, ಯುಗಾದಿ ಮುಂತಾದ ಸಂದರ್ಭಗಳಲ್ಲಿ ವಿಶೇಷವಾದ ಸಿಹಿ ಅಡುಗೆ ಮಾಡುತ್ತಾರೆ. ಋತುಮಾನಕ್ಕೆ ತಕ್ಕಂತೆ ಆಹಾರ ಸ್ವೀಕರಿಸುವ ಕ್ರಮ ಒಂದು ಕಾಲಕ್ಕಿತ್ತು. ಇತ್ತಿತ್ತಲಾಗಿ ಎಲ್ಲಾ ಕಾಲದಲ್ಲಿ ಒಂದೇ ಆಹಾರವನ್ನು ಬಳಸುತ್ತರುವುದು ಕಂಡುಬರುತ್ತದೆ.

ಬೇಸಿಗೆಯಲ್ಲಿ ಲಿಂಬೆ ಹಣ್ಣಿನ ಪಾನಕ, ಬೀರುಂಡೆ ಪಾನಕ, ಕಲ್ಲಂಗಡಿ ಜೂಸ್ ಮಜ್ಜಿಗೆ ಮುಂತಾದವುಗಳನ್ನು ಹೆಚ್ಚಾಗಿ ಬಳಸುತ್ತಾರೆ.

**೩.೨೧. ಉಡುಗೆ ತೊಡುಗೆಗಳು:**

ಪ್ರತಿಯೊಂದು ಬುಡಕಟ್ಟು ಸಮುದಾಯ ತನ್ನದೇ ಆದ ಉಡುಗೆ ತೊಡುಗೆಯ ಮೇಲೆಯೂ ತನ್ನ Identity ಯನ್ನು ಕಂಡು ಕೊಂಡಿರುತ್ತದೆ. ಕೆಲ ಸಮುದಾಯಗಳ ವೇಷ ಭೂಷಣಗಳನ್ನು ಗಮನಿಸಿ ಇವರು ಇಂತಹ ಸಮುದಾಯದವರು ಎಂದು ಖಚಿತವಾಗಿ ಹೇಳಲು ಸಾಧ್ಯವಾಗುತ್ತದೆ. ಆದರೆ ಆಧುನಿಕತೆಯ ಇಂದಿನ ಸಂದರ್ಭದಲ್ಲಿ ಅದು ಸಾಧ್ಯವಾಗುತ್ತಿಲ್ಲ ಎಂದು ಹೇಳಬಹುದು.

ಕಮ್ಮಾರಿಕೆ ವೃತ್ತಿ ಅತ್ಯಂತ ಕಠಿಣವಾದದ್ದು. ಈ ವೃತ್ತಿಯಲ್ಲಿ ಅಧಿಕವಾದ ಶ್ರಮವನ್ನು ಉಪಯೋಗಿಸಬೇಕಾಗುತ್ತದೆ. ವೃತ್ತಿಯಲ್ಲಿ ನಿರತ ಕಮ್ಮಾರರು ಸಾಮಾನ್ಯವಾಗಿ ಎಂದೂ ಮೈಮೇಲೆ ಅಂಗಿಯನ್ನು ಧರಿಸುವುದಿಲ್ಲ. ಕುಲುಮೆಯಲ್ಲಿರುವ ಬೆಂಕಿಯ ಪ್ರಖರತೆ ಮೈಯನ್ನೆಲ್ಲಾ ಆವರಿಸಿಕೊಂಡಿರುತ್ತದೆ. ಬೆಂಕಿಯ ಜಳದ ತಾಪಕ್ಕೆ ಒಂದೇ ಸವನೆ ಮೈಯಿಂದ ಬೆವರು ಸುರಿಯುತ್ತಿರುತ್ತದೆ. ಅದಕ್ಕಾಗಿ ಅವರು ಮೈಮೇಲೆ ಅಂಗಿಯನ್ನು ಹಾಕಿಕೊಳ್ಳುವುದಿಲ್ಲ. ಕೆಲವರು ನಿಲುವಂಗಿ ಹಾಕಿರುತ್ತಾರೆ. ಅದು ಅಪರೂಪ. ಮೊಣಕಾಲು ಮೇಲೆ ಬರುವಂತೆ ಧೋತರವನ್ನು ತೊಟ್ಟುಕೊಂಡಿರುತ್ತಾರೆ. ಕೆಲವರು ಇತ್ತಿತ್ತಲಾಗಿ ಪಟ್ಟೆ ಚಡ್ಡಿ ಅಥವಾ ಉದ್ದ ಚೋಣ್ಣ ( Half pant)ಧರಿಸಿರುತ್ತಾರೆ. ತಲೆಗೆ ಟವೆಲ್ ಕಟ್ಟಿರುತ್ತಾರೆ. ಪೂಜೆ, ಮಂಗಲ ಕಾರ್ಯಗಳಲ್ಲಿ ಕೆಂಪು

ಅಥವಾ ಹಳದಿ ಬಣ್ಣದ ಧೋತರ ಧರಿಸಿರುತ್ತಾರೆ. ಹೆಂಗಸರು ಒಂದು ಕಾಲಕ್ಕೆ ಕಚ್ಚೆಹಾಕಿದ ಸೀರೆಯನ್ನುಡುತ್ತಿದ್ದರು ಇಂದು ಅದು ಕಾಣುವುದು ಅಪರೂಪ.

ಕಮ್ಮಾರಿಕೆ ವೃತ್ತಿಯಲ್ಲಿ ತೊಡಗಿಸಿಕೊಳ್ಳದೇ ಇರುವ ಸಂದರ್ಭದಲ್ಲಿ ಬಿಳಿ ಧೋತರ (ಏರುಗಚ್ಚೆ) ಬಿಳಿಯ ಅಂಗಿ (ನಿಲುವಂಗಿ) ತಲೆಯ ಮೇಲೊಂದು ಮುಂಡಾಸು, ಕೆಲವರು ಲುಂಗಿಯ ತರ ಬಿಳಿ ಪಂಚೆಯನ್ನುಟ್ಟುಕೊಂಡಿರುತ್ತಾರೆ. ತಲೆಯಲ್ಲಿ ಕೆಲವರು ಜುಟ್ಟವನ್ನು ಬಿಟ್ಟಿರುತ್ತಾರೆ. ಕೆಲವರು ಕೊರಳಿಗೆ ಶಾಲು ಆಥವಾ ಟವೆಲ್ ಹಾಕಿಕೊಂಡಿರುತ್ತಾರೆ. ಹಣೆಯ ಮೇಲೆ ಗಂಧ ಹಚ್ಚಿಕೊಂಡಿರುವುದುಂಟು.

ಆಧುನಿಕ ಪರಿಸರದ ಉಡುಗೆ ತೊಡುಗೆಗಳು ಕಮ್ಮಾರರ ಯುವ ಪೀಳಿಗೆಯನ್ನು ಆಕರ್ಷಿಸಿವೆ. ಗಂಡಸರು ಪ್ಯಾಂಟ್, ಶರ್ಟ್, ಹೆಣ್ಣು ಮಕ್ಕಳು ಚೂಡಿದಾರ, ನೈಟಿ, ಸಲ್ವಾರ್ ಮುಂತಾದ ವಸ್ತುಗಳನ್ನು ಧರಿಸುತ್ತಿದ್ದಾರೆ.

**೩.೨೨. ನಂಬಿಕೆ ನಿಷೇಧಗಳು:**

ನಂಬಿಕೆ, ನಿಷೇಧ ಸಂಪ್ರದಾಯಗಳನ್ನು ಹೊಂದಿರದೇ ಇರದ ಸಮುದಾಯಗಳೇ ಇಲ್ಲ. ಇದರಿಂದ ಕಮ್ಮಾರರು ಹೊರತಾಗಿಲ್ಲ. ಕೆಲ ನಂಬಿಕೆ ನಿಷೇಧಗಳು ಸಾಮಾನ್ಯವಾಗಿದ್ದರೆ ಕೆಲವು ಅಯಾ ಸಮುದಾಯಗಳಿಗೆ ಮಾತ್ರ ಸೀಮಿತವಾಗಿರುತ್ತವೆ. ಈ ನಂಬಿಕೆ ನಿಷೇಧಗಳು ಅಯಾ ಸಮುದಾಯದ ಸ್ವಾಸ್ಥ್ಯವನ್ನು ಕಾಪಾಡುತ್ತವೆ ಎಂಬ ಅಚಲವಾದ ನಂಬಿಕೆ ಅವರಲ್ಲಿರುತ್ತದೆ. ಸಮುದಾಯಗಳ ನಡೆ, ನುಡಿ, ಆಚರಣೆ, ಸಂಪ್ರದಾಯ, ನಂಬಿಕೆ, ನಿಷೇಧಗಳು ಅ ಸಮುದಾಯಗಳ ಅಲಿಖಿತ ಕಾನೂನುಗಳಾಗಿರುತ್ತವೆ. ಅವುಗಳನ್ನು ಸಮುದಾಯಗಳು ಕಟ್ಟುನಿಟ್ಟಿನಿಂದ ಪಾಲಿಸಿಕೊಂಡು ಬಂದಿರುತ್ತವೆ. ಸಮುದಾಯಗಳಲ್ಲಿ ಪ್ರಚಲಿತವಿರುವ ನಂಬಿಕೆ, ನಿಷೇಧ, ಸಂಪ್ರದಾಯಗಳಿಗೆ, ತಗ್ಗಿ-ಬಗ್ಗಿ ನಡೆಯದಿದ್ದರೆ ಅಥವಾ ಅವುಗಳನ್ನು ಪಾಲಿಸದಿದ್ದರೆ ಅಂತಹವರನ್ನು ಸಮುದಾಯಗಳು ಬಹಿಷ್ಕರಿಸುವುದುಂಟು.

"ಮನುಷ್ಯನಿಗೆ ಸಹಜವೂ ಸ್ವಾಭಾವಿಕವೂ ಹಿಂದಿನವರಿಂದ ನಂಬಿಕೆ-ನಿಷೇಧಗಳು ಬಳುವಳಿಯಾಗಿ ಬಂದುದು ಎಂಬ ನಂಬಿಕೆ. ಆಚರಣೆ ವಿಧಿ-ವಿಧಾನಗಳ ಪ್ರಾಕ್ತನ ಅಥವಾ ಜನಪದ ಮನಸ್ಸು ಬದ್ಧವಾಗಿರುತ್ತದೆ. ಈ ರೀತಿಯಲ್ಲಿ ಬದ್ಧವಾದ ಮನಸ್ಸುಗಳು ತಮ್ಮದೇ ಅದ ನಂಬಿಕೆ, ವಿಧಿ-ವಿಧಾನಗಳನ್ನು ಅನುಸರಿಸುತ್ತವೆ. ಇಲ್ಲಿಯ ನಂಬಿಕೆಗಳನ್ನು ಸಮೂಹಿಕ ಮತ್ತು ವೈಯಕ್ತಿಕ ಎಂದು ಗುರುತಿಸಬಹುದು"[೬] ಒಂದೆ ಸಮುದಾಯ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದರೆ ಆ ಪರಿಸರಕ್ಕೆ ಅನುಗುಣವಾಗಿ ನಂಬಿಕೆ ನಿಷೇಧಗಳು ಭಿನ್ನ ಭಿನ್ನವಾಗಿರುವುದನ್ನು ಕಾಣುತ್ತೇವೆ.

೧. ಕಮ್ಮಾರರು ಕಬ್ಬಿಣದ ಭಿಕ್ಷೆಯನ್ನು ಕೊಟ್ಟರೆ ಮನೆಯಲ್ಲಿಯ ಲಕ್ಷ್ಮೀ ಹೊರಟು ಹೋಗುತ್ತಾಳೆಂಬ ನಂಬಿಕೆ. (ಮಂಟೇಸ್ವಾಮಿ ಕಾವ್ಯದಲ್ಲಿ ಸಿದ್ದಾಪ್ಪಾಜಿಗೆ ಹಲಗೂರಿನ ಕಮ್ಮಾರರು ಕಬ್ಬಿಣ ಭಿಕ್ಷೆ ನೀಡದೇ ಇರವುದನ್ನು ಗಮನಿಸಬಹುದು.)

೨. ಕಬ್ಬಿಣವನ್ನು ಕಾಳಿ ಎಂದು ಪೂಜಿಸುವುದು.

೩. ಕಬ್ಬಿಣವನ್ನು ಕೈಯಲ್ಲಿ ಹಿಡಿದುಕೊಂಡರೆ ಗಾಳಿ ಭೂತ ದೆವ್ವವಳು ಹತ್ತಿರ ಸುಳಿಯುವುದಿಲ್ಲ.

೪. ಕಾಯಿಸಿದ ಕಬ್ಬಿಣವನ್ನು ನೀರಿನಲ್ಲಿ ಅದ್ದಿ ಅ ನೀರನ್ನು ಕುಡಿಸಿದರೆ ಅಂಜಿಕೆ, ಭಯ ಮಾಯವಾಗುತ್ತದೆ.

೫. ಅತಿಯಾಗಿ ಮಳೆ ಬರುತ್ತಿದ್ದರೆ ಕಬ್ಬಿಣವನ್ನು ಹೊರಗೆ ಚೆಲ್ಲಿದರೆ ಮಳೆ ಕಡಿಮೆಯಾಗುತ್ತದೆ.

೬. ಕೆಟ್ಟ ಕನಸುಗಳು ಬೀಳುತ್ತಿದ್ದರೆ ಕಬ್ಬಿಣವನ್ನು ತಲೆಯ ಹಿಂಬದಿಯಲ್ಲಿ ಇಟ್ಟುಕೊಂಡು ಮಲಗಬೇಕು.

೭. ಮದುವೆ, ಮುಂಜಿವೆ ಮುಂತಾದ ಸಂದರ್ಭಗಳಲ್ಲಿ ಕಬ್ಬಿಣವನ್ನು ಪೂಜಿಸಲೇಬೇಕು.

೮. ಕಬ್ಬಿಣದ ಮೊಳೆಯನ್ನು ಮನೆಯ ಹಿತ್ತಲ ಮತ್ತು ಮುಂದಿನ ಬಾಗಿಲಿನ ಹೊಸ್ತಲಿಗೆ ಹೊಡೆದರೆ ದೆವ್ವ ಭೂತಗಳು ಒಳಗೆ ಪ್ರವೇಶಿಸುವುದಿಲ್ಲ.

೯. ರಾತ್ರಿ ಹೊತ್ತಿನಲ್ಲಿ ಕಬ್ಬಿಣದ ಯಾವುದೇ ವಸ್ತುವನ್ನು ಇತರರಿಗೆ ಬಳಕೆಗೆ ನೀಡಬಾರದು.

೧೦. ಋತುಮತಿಯಾದ ಹೆಣ್ಣು ಮಲಗುವ ಸ್ಥಳದಲ್ಲಿ ಕಬ್ಬಿಣದ ವಸ್ತುವನ್ನು ಇಡುವುದರಿಂದ ಭಯ ನಿವಾರಣೆಯಾಗುತ್ತದೆ. ದೃಷ್ಟಿ ದೋಷಗಳು, ದುಷ್ಟ ಶಕ್ತಿಗಳು ಅವಳ ಹತ್ತಿರ ಸುಳಿಯುವುದಿಲ್ಲ.

೧೧. ಗರ್ಭಿಣಿ ಸ್ತ್ರೀಯರ ಮತ್ತು ಬಾಣಂತಿಯರ ಹತ್ತಿರ ಕಬ್ಬಿಣ ಇಡುವುದರಿಂದ ದುಷ್ಟ ಶಕ್ತಿಗಳು ದೃಷ್ಟಿ ದೋಷಗಳು ಅವಳ ಹತ್ತಿರ ಬರುವುದಿಲ್ಲ ಎಂಬ ನಂಬಿಕೆ.

೧೨. ಮನಸ್ಸಿನಲ್ಲಿ ಅರಾಧ್ಯ ದೈವಗಳನ್ನು ಬೇಡಿಕೊಂಡರೆ ದೇವರ ಬಲ ಭಾಗದಿಂದ ಹೂ ಬಿದ್ದರೆ ಶುಭ, ಎಡಕ್ಕೆ ಬಿದ್ದರೆ ಅಶುಭ.

೧೩. ಶುಕ್ರವಾರ ಮನೆಯ ಸೊಸೆ ತವರಿಗೆ ಹೋಗಬಾರದು.

೧೪. ರಾತ್ರಿಯ ಹೊತ್ತು ಕಸ ಗುಡಿಸಬಾರದು, ಮನೆಯಿಂದ ಕಸ ರಾತ್ರಿ ಹೊರ ಹಾಕಬಾರದು.

೧೫. ಮಾತನಾಡುವಾಗ ಹಲ್ಲಿ ಲೊಚುಗುಟ್ಟಿದರೆ, ಮಾತನಾಡುವ ಮಾತು ಸತ್ಯವಾಗಿರುತ್ತದೆ.

೧೬. ಮನೆಯ ಮಾಳಿಗೆ ಮೇಲೆ ಅಥವಾ ಮುಂದುಗಡೆ ಕಾಗೆ ಕೂಗಿದರೆ ಅತಿಥಿಗಳು ಬರುತ್ತಾರೆ.

೧೭. ಹೆಣ್ಣು ಮಕ್ಕಳು ಋತುಮತಿಯಾದರೆ ಮನೆಯ ಪ್ರತ್ಯೇಕ ಕೋಣೆ ಅಥವಾ ಮೂಲೆಯಲ್ಲಿರಬೇಕು.

೧೮. ಶುಭ ಕಾರ್ಯಗಳಿಗೆ ಮತ್ತೈದೆಯರು ಮುಂದಾಗಿ ಕಾರ್ಯ ನಿರ್ವಹಿಸಬೇಕು.

೧೯. ಮದು ಮಕ್ಕಳು ಕುಲದೇವರುಗಳಿಗೆ ದೈವಕ್ಕೆ ನಮಸ್ಕಾರ ಮಾಡಬೇಕು.

೨೦. ಋತುಮತಿ ಹಾಗೂ ಬಾಣಂತಿಯರು ಮಲಗುವಾಗ ತಲೆಯ ಹಿಂಬದಿಯಲ್ಲಿ ಕುಡುಗೋಲು, ಚಪ್ಪಲಿ ಅಥವಾ ಕಸಬರಿಗೆ ಇದ್ದರೆ ದುಷ್ಟಶಕ್ತಿಗಳು ಅವರ ಬಳಿ ಸುಳಿಯುವುದಿಲ್ಲ.

೨೧. ಬಿಸಿನೀರಿನಿಂದ ಸ್ನಾನ ಮಾಡುವುದು ಗರ್ಭಿಣಿ ಸ್ತ್ರೀಗೆ ಬಹಳ ಉತ್ತಮ.

೨೨. ಹುಟ್ಟಿನಿಂದ ಮಗುವಿಗೆ ಎಣ್ಣೆ ಸ್ನಾನ ಮಾಡಿಸಬೇಕು.

೨೩. ಶವದ ಬಳಿ ತುಳಸಿ ಗಿಡ ನೆಟ್ಟರೆ ಸತ್ತ ವ್ಯಕ್ತಿ ದೈವ ಸಂಭೂತನಾಗುತ್ತಾನೆ.

೨೪. ಹೆಣ್ಣು ಮಕ್ಕಳು ತುಂಬಿದ ನೀರಿನ ಬಿಂದಿಗೆ ಹೊತ್ತುಕೊಂಡು ಎದುರಿಗೆ ಬಂದರೆ ಅಂದಿನ ವ್ಯಾಪಾರ ಹೆಚ್ಚಾಗುತ್ತದೆ.

೨೫. ಹೂವಿನ ಬುಟ್ಟಿ ಎದುರಾದರೆ ಹೋಗುವ ಕೆಲಸ ನಿರ್ವಿಘ್ನವಾಗಿ ನಡೆಯುತ್ತದೆ.

೨೬. ಕ್ಷೌರಿಕ ವ್ಯಕ್ತಿ ಎದುರಿಗೆ ಬಂದರೆ ಅಂದಿನ ವ್ಯಾಪಾರ ಉತ್ತಮವಾಗಿರುತ್ತದೆ.

೨೭. ಋತುಮತಿಯಾದ ಮತ್ತು ತಿಂಗಳು ಮುಟ್ಟಾದ ಹೆಂಗಸರನ್ನು ಮುಟ್ಟಬಾರದು. ಈ ಸಂದರ್ಭದಲ್ಲಿ ಅವರ ಕೈಯಲ್ಲಿ ಇತರರ ಮಕ್ಕಳನ್ನು ಕೊಡಬಾರದು ಮತ್ತು ಅವರು ಮನೆಬಿಟ್ಟು ಯಾರ ಮನೆಗೂ ಹೊಗಬಾರದು.

೨೮. ಕಾಳಿದೇವಿಯನ್ನು ನೆನಪಿಸಿಕೊಂಡರೆ ದುಷ್ಟಶಕ್ತಿಗಳು ಹತ್ತಿರ ಸುಳಿಯುವುದಿಲ್ಲ.

೨೯. ಮಳೆಯಿಂದ ಕೂಡಿದ ಗುಡುಗು ಬಂದರೆ ಚೊಚ್ಚಲ ಮಕ್ಕಳು ಹೊರಗಡೆ ಹೋಗುವಂತಿಲ್ಲ.

೩೦. ಕಟ್ಟಿಗೆ ಹೊರೆ ಎದುರಿಗೆ ಬಂದರೆ ಶುಭ ಕಾರ್ಯಗಳಿಗೆ ಹೋಗುವಂತಿಲ್ಲ.

೩೧. ಋತುಮತಿಯಾದ ಹುಡುಗಿ ಹೆಚ್ಚಾಗಿ ತಿರುಗಾಡಬಾರದು.

೩೨. ಬಾಣಂತಿಯರು ನೀರು ಹರಿಯುವ ಸ್ಥಳಕ್ಕೆ ಹೋಗುವಂತಿಲ್ಲ.

೩೩. ಗರ್ಭವತಿಯಾಗಿದ್ದ ಸಮಯದಲ್ಲಿ ಪೇರಲ ಕಾಯಿ, ಪಪ್ಪಾಯಿ ತಿನ್ನಬಾರದು.

೩೪. ಹುಟ್ಟಿದ ಮಗುವನ್ನು ಇನ್ನೊಬ್ಬರ ಕೈಯಲ್ಲಿ ಕೊಡಬಾರದು.

೩೫. ತಾಯಂದಿರು ಬಂಜೆ ಹೆಣ್ಣಿನ ಎದುರಿಗೆ ತನ್ನ ಮಗುವಿಗೆ ಹಾಲು ಕುಡಿಸಬಾರದಂತೆ.

೩೬. ಶವ ಸಂಸ್ಕಾರಕ್ಕೆ ಹೋದವರು ನೇರವಾಗಿ ಮನೆಗಳಿಗೆ ಪ್ರವೇಶಿಸುವಂತಿಲ್ಲ.

೩೭. ಸಾವು ಸಂಬಂಧಿಸಿದ ಕುಟುಂಬದ ಸದಸ್ಯರು ತಮ್ಮ ಸೂತಕ ಕಳೆಯುವವರೆಗೆ ಇತರೆ ಸಮುದಾಯದವರ ಮನೆಗಳಿಗೆ ಪ್ರವೇಶ ಮಾಡುವಂತಿಲ್ಲ.

೩೮. ಸತ್ತ ವ್ಯಕ್ತಿಯ ಮೃತ ದೇಹವನ್ನು ಮೂರು – ನಾಲ್ಕು ದಿವಸಗಳವರೆಗೆ ಇಟ್ಟುಕೊಳ್ಳುವಂತಿಲ್ಲ.

ಉಲ್ಕಪಾತದಿಂದ ಕಬ್ಬಣವು ಮಾನವನಿಗೆ ಮೊದಲು ದೊರೆಯಿತು ಎಂಬ ನಂಬಿಕೆ ಪಾಶ್ಚಾತ್ಯರಲ್ಲಿದೆ. ಈ ಕಾರಣದಿಂದ ಕಬ್ಬಿಣವನ್ನು ಸ್ವರ್ಗದಿಂದ ಇಳಿದು ಬಂದ ಕಪ್ಪು ದೇವತೆ ಎಂಬುದಾಗಿ ಈಜಿಪ್ತಿನ ಜನರು ಭಾವಿಸಿದ್ದರು. ಬ್ಯಾಬಿಲೋನಿಯಾದವರು ಕಬ್ಬಿಣವನ್ನು ಸ್ವರ್ಗದ ಬೆಂಕಿ ಎನ್ನುತ್ತಾರೆ. ಶನಿದೇವರ ವಕ್ರದೃಷ್ಟಿ ನಿವಾರಣೆಗಾಗಿ ಕಬ್ಬಿಣ ದಾನ ಮಾಡುತ್ತಾರೆ. ದೇವಾಲಯಗಳಿಗೆ ಎಳ್ಳೆಣ್ಣೆ ಕೊಡುವಾಗ ಕಬ್ಬಿಣದ ಬಾಣಲೆಯಲ್ಲಿ ಹಾಕಿ ಅದರಲ್ಲಿ ಮುಖ ನೋಡಿ ಕೊಟ್ಟರೆ ಗ್ರಹಚಾರ ಪರಿಹಾರವಾಗುತ್ತದೆ ಎಂಬ ನಂಬಿಕೆ ಇದೆ.

ಬಿರುಗಾಳಿ ಮಿಂಚು, ಸಿಡಿಲು ಬರುವಾಗ ಅಂಗಳಕ್ಕೆ ಕಬ್ಬಿಣದ ತುಂಡು ಹಾಕಿದರೆ ಸಿಡಿಲಿನಲ್ಲಿಯ ಭಾದೆ ತಟ್ಟುವುದಿಲ್ಲ. ಕೋಳಿಗೂಡಿನಲ್ಲಿ ಕಬ್ಬಿಣದ ತುಂಡು ಇಟ್ಟರೆ ಸಿಡಿಲಿನಿಂದ ಮೊಟ್ಟೆ ಕೆಟ್ಟು ಹೋಗುವುದಿಲ್ಲ ಎಂಬ ನಂಬಿಕೆ ಈಗಲೂ ಇದೆ. ಕಬ್ಬಿಣ ಸಿಕ್ಕಿರೆ ಹೆಕ್ಕಿಕೊಳ್ಳಬಾರದು ಎಂಬ

ನಂಬಿಕೆಯೂ ಇದೆ. ಕಬ್ಬಿಣವನ್ನು ಹಣ ಕೊಡದೇ ತರಬಾರದು. ಕಬ್ಬಿಣವನ್ನು ಕದಿಯಬಾರದೆಂಬ ನಂಬಿಕೆ ಇದೆ. ಆದರೆ ಕೆಲವು ಪ್ರದೇಶದಲ್ಲಿ ಕಬ್ಬಿಣದ ಲಾಳ ಸಿಕ್ಕರೆ ಶುಭವೆಂದು ಕೆಲವರು ಭಾವಿಸುತ್ತಾರೆ. ಕಬ್ಬಿಣವು ಭೂತ ಪ್ರೇತಗಳ ಬಾಧೆಯನ್ನು ದೂರಗೊಳಿಸುತ್ತದೆ. ಸ್ಮಶಾನಕ್ಕೆ ಕಬ್ಬಿಣ ಹಾಕಿದರೆ ಸತ್ತವರಿಗೆ ನೆಲೆ ಇಲ್ಲದಂತಾಗುತ್ತದೆ ಎಂಬ ನಂಬಿಕೆ ಗ್ರೀಕರಲ್ಲಿದೆ. ಪಿಶಾಚಿಗಳನ್ನು ಅಹ್ವಾನಿಸಿ ಕಬ್ಬಿಣದ ಮೊಳೆ ಹೊಡೆದರೆ ಪಿಶಾಚಿಗಳ ಕಾಟ ತಪ್ಪುತ್ತದೆ ಎಂಬ ನಂಬಿಕೆ ಇದೆ. ಫಲ ಕೊಡದ ಮರಗಳಿಗೆ ಹೆಣ್ಣುಮಕ್ಕಳು ಬೆತ್ತಲೆಯಾಗಿ ಹೋಗಿ ಕಬ್ಬಿಣದ ಮೊಳೆ ಹೊಡೆದರೆ ಆ ವೃಕ್ಷವು ಫಲ ಕೊಡುತ್ತದೆ. ಬಾಣಂತಿ ಅಥವಾ ಮುಟ್ಟಾದವಳು ಮಲಗುವಾಗ ಚಾಪೆಯ ಅಡಿಯಲ್ಲಿ ಕಬ್ಬಿಣದ ಚೂರು ಅಥವಾ ಚಾಕು ಇಟ್ಟುಕೊಂಡರೆ ಪ್ರೇತಬಾಧೆ ತಟ್ಟುವುದಿಲ್ಲ. ಕಾಡು ಪದಾರ್ಥಗಳನ್ನು ಆಹಾರಕ್ಕಾಗಿ ಬೇಯಿಸುವಾಗ ಅದಕ್ಕೊಂದು ತುಂಡು ಕಬ್ಬಿಣ ಹಾಕುತ್ತಾರೆ. ಕಣಿಲೆ (ಎಳೆಬಿದಿರಿನ ಮೊಗ್ಗು) ಯನ್ನು ಆಹಾರಕ್ಕಾಗಿ ಕೊಯ್ಯುವಾಗ ಕತ್ತಿಯಿಂದ ಕೊಯ್ಯುವುದಿಲ್ಲ. ಹಾಗೇನಾದರು ಕೊಯ್ದರೆ ಕಣಿಲೆಯು ವಿಷವಾಗಿ ಪರಿವರ್ತವಾಗುತ್ತದೆ ಎಂಬ ನಂಬಿಕೆ ಇದೆ.

ಕಬ್ಬಿಣವನ್ನು ಚಾಪೆಯಲ್ಲಿಟ್ಟು ಮಲಗಿದರೆ ಕೆಟ್ಟ ಕನಸು ಬೀಳುವುದಿಲ್ಲ. ಉತ್ತರ ಭಾರತದಲ್ಲಿ ಮನೆಯ ಬಾಗಿಲಿಗೆ ಕುದುರೆ ಲಾಳ ಬಡಿದರೆ ಭೂತ ಪ್ರವೇಶವಾಗುವುದಿಲ್ಲವೆಂದು ನಂಬುತ್ತಾರೆ. ಈ ನಂಬಿಕೆ ರೊಮನ್ನರಲ್ಲಿಯೂ ಇದೆ. ಮಕ್ಕಳ ಕೈಗೆ ಕಬ್ಬಿಣದ ಬಳೆ ಹಾಕಿದರೆ ಪ್ರೇತದ ಸೋಂಕು ಆಗುವುದಿಲ್ಲ. ಕೊರಗರು ಕಬ್ಬಿಣದ ಬಳೆ ಧರಿಸುತ್ತಾರೆ. ಐರ್ಲೆಂಡಿನ ಜನ ನಾಲ್ಕನೆಯ ಬೆರಳಿಗೆ ಕಬ್ಬಿಣದ ಉಂಗುರ ಹಾಕಿದರೆ ಶುಭವೆಂದು ಭಾವಿಸುತ್ತಾರೆ. ಕೋರಿಯಾದ ಪುರೋಹಿತರು ಕಬ್ಬಿಣ ಮುಟ್ಟುವುದಿಲ್ಲ. ಕಮ್ಮಾರನ ಅಡಿಗಲ್ಲಿನ ಮೇಲೆ ಕುಳಿತರೆ ಕುಂಡೆಯಲ್ಲಿ ಕುರ ಆಗುತ್ತದೆ. ಈ ನಂಬಿಕೆ ರಡ್ ಇಂಡಿಯನ್ನರಲ್ಲಿ ಇಂದಿಗೂ ಇದೆ. ಪ್ರಾಚೀನ ಹಿಬ್ರೂಗಳ ಮಕ್ಕಳ ಶಿಶ್ನದ ಮುಂತೊಗಲು ಕತ್ತರಿಸಲು ಕಬ್ಬಿಣ ಬಳಸುತ್ತಿರಲಿಲ್ಲ. ಕಲ್ಲಿನ ಅಲಗಿನಿಂದಲೇ ಕತ್ತರಿಸುತ್ತಿದ್ದರು. ದಕ್ಷಿಣ ಆಫ್ರಿಕಾದ ಒವೆಂಬರ್ ಜನರಲ್ಲೂ ಈ ಪದ್ಧತಿ ಇದೆ. ಹಿಬ್ರೂಗಳ ದೇವಾಲಯಗಳಿಗೆ ಸುತ್ತಿಗೆಯ ಪೆಟ್ಟು ಕೇಳಬಾರದು. ಭಾರತೀಯ ಧಾರ್ಮಿಕ ವಿಧಿಗಳಲ್ಲಿ ಕಬ್ಬಿಣದ ಪಾತ್ರೆ ಬಳಸುವುದಿಲ್ಲ. ಆಟಿ ಅಮವಾಸ್ಯೆಯ ದಿನ ಬೆತ್ತಲಾಗಿ ಹೋಗಿ ಪಾಲೆ ಮರದಿಂದ ತೊಗಟೆ ತಂದು ಅದರ ರಸ ತೆಗೆದು ಕುಡಿಯುವ ಪದ್ಧತಿ ಇದೆ. ತೊಗಟೆ ತೆಗೆಯುವಾಗ ಅದನ್ನು ಕತ್ತಿಯಿಂದ ಕಡಿಯಬಾರದು. ಕಲ್ಲಿನಿಂದಲೇ ಜಜ್ಜಿ ರಸ ತೆಗೆಯಬೇಕು.

ಜನಪದರು ಕಬ್ಬಿಣವನ್ನು ಅನೇಕ ರೋಗಗಳಿಗೆ ಔಷಧಿಯನ್ನಾಗಿ ಬಳಸುತ್ತಿದ್ದರು. ಕಮ್ಮಾರನು ತನ್ನ ಕರ್ಮ ಶಾಲೆಯಲ್ಲಿಟ್ಟುರುವ ಮರಿಗೆ (ಕಬ್ಬಿಣ ಕಾಯಿಸಿ ಹಾಕುವ ಪಾತ್ರೆ)ಯ ನೀರು ಅನೇಕ ರೋಗಗಳಿಗೆ ಔಷಧಿಯಾಗಿ ಬಳಸಲ್ಪಡುತ್ತಿತ್ತು. ಬೆತ್ತಲೆಯಾಗಿ ಹೋಗಿ ಈ ನೀರನ್ನು ದಿನನಿತ್ಯ ತಂದು ಕುಡಿದರೆ ವಾತರೋಗ, ಉಗ್ಗುರೋಗ ನಿವಾರಣೆಯಾಗುತ್ತದೆ. ಕಬ್ಬಿಣದ ಕಿಟ್ಟವನ್ನು ಚನ್ನಾಗಿ ಅರೆದು ನೆಕ್ಕಿದರೆ ಕೆಮ್ಮು ಕಡಿಮೆಯಾಗುತ್ತದೆ. ನೀರಿಗೆ ಕಬ್ಬಿಣ ಕಾಯಿಸಿ ಹಾಕಿ ಆ ನೀರನ್ನು

ಮುಕ್ಕಳಿಸುವುದರಿಂದ ಹಲ್ಲುನೋವು ಕಡಿಮೆಯಾಗುತ್ತದೆ. ಕಾದ ಕಬ್ಬಿಣದ ತುಂಡಿನ ಮೇಲೆ ಜೀರಿಗೆ ಉಪ್ಪುಹಾಕಿ ನೀರು ಸುರಿದು ಆ ನೀರನ್ನು ಕುಡಿದರೆ ಮುಟ್ಟಾಗುವ ಸಂದರ್ಭದಲ್ಲಿಯ ಹೊಟ್ಟೆನೋವು ಕಡಿಮೆಯಾಗುತ್ತದೆ. ಕತ್ತಿಯ ಬಾಯಿಗೆ ತುಂಬೆರಸ ಮತು ಸುಣ್ಣ ಬೆರೆಸಿ ಅದನ್ನು ಗಾಯಕ್ಕೆ ಹಚ್ಚಿದರೆ ಗಾಯ ಗುಣವಾಗುತ್ತದೆ. ಕಾಮಾಲೆ ರೋಗಕ್ಕೆ ಕಬ್ಬಿಣದ ಸರಿಗೆಯಿಂದ ಖಾಯಿಸಿದರೆ ಗುಣವಾಗುತ್ತದೆ. ದನಗಳ ಚಪ್ಪೆ ರೋಗ ನಿವಾರಣೆಗೆ ಕಬ್ಬಿಣ ಕಾಯಿಸಿ ಬರೆ ಎಳೆಯುತ್ತಾರೆ. ಮೂರ್ಛೆರೋಗ, ಬಾಲಗ್ರಹ ತಟ್ಟಿದವರ ಕೈಯಲ್ಲಿ ಕಬ್ಬಿಣದ ತುಂಡನ್ನು ಕೊಟ್ಟರೆ ಬೇಗನೇ ಮೊದಲಿನ ಸ್ಥಿತಿಗೆ ಬರುತ್ತಾರೆ ಎಂಬ ನಂಬಿಕೆಗಳು ಭಾರತೀಯರಲ್ಲಿವೆ. ಕಬ್ಬಿಣದ ಅಸ್ತ್ರಕ್ಕೆ ಕಾಗೆಯ ರಕ್ತದಲ್ಲಿ ಕುದುರೆಯ ಲದ್ದಿಯನ್ನು ಅರೆದು ಹಚ್ಚಿದರೆ ಆ ಅಸ್ತ್ರದಿಂದ ಆದಂತಹ ಗಾಯ ಗುಣವಾಗುತ್ತದೆ ಎಂದು ಹೇಳುತ್ತಾರೆ.

**೩.೨೩. ವರ್ತಮಾನದ ಸ್ಥಿತಿಗತಿಗಳು:.**

ಕಬ್ಬಣದ ಅದಿರನ್ನು ಕಂಡು ಕೊಂಡು ಅದನ್ನು ಶುದ್ಧೀಕರಿಸಿಕೊಂಡು ಅನೇಕ ಉಪಕರಣಗಳನ್ನು ಸೃಷ್ಟಿ ಮಾಡುವುದರ ಮೂಲಕ ಮಾನವನ ಬದುಕಿನಲ್ಲಿ ಕ್ರಾಂತಿಯನ್ನು ಮಾಡಿದ ಕಮ್ಮಾರರ ಬದುಕು ಇಂದು ಅತಂತ್ರವಾಗಿದೆ. ಕಬ್ಬಣದ ಬಳಕೆಯನ್ನು ಕೃಷಿಕ ವೃತ್ತಿಯಲ್ಲಿ ಪ್ರಾರಂಭಿಸಿದ ಮೇಲೆ ಉತ್ಪಾದನೆ ವ್ಯವಸ್ಥೆ ಹೆಚ್ಚಾಗತೊಡಗಿತು. ಕೃಷಿ ನೀತಿ ಅವಿಷ್ಕಾರಗೊಂಡಂತೆಲ್ಲ ಕಬ್ಬಣದ ಬಳಕೆ ಹೆಚ್ಚಾಗತೊಡಗಿತು. ಕಬ್ಬಿಣ ಯುಗ ಮಾನವನ ಬದುಕಿನ ಸಂಕ್ರಮಣ ಕಾಲವೆಂದೇ ಹೇಳಬೇಕಾಗುತ್ತದೆ. ಕಮ್ಮಾರರು ಕೇವಲ ಕೃಷಿಗೆ ಮಾತ್ರವಲ್ಲದೇ ಅನೇಕ ಆಯುಧಗಳನ್ನು ಕಬ್ಬಿಣದ ಮೂಲಕ ಸಿದ್ಧಪಡಿಸಿ ರಾಜ ಮಹಾರಾಜರ ಮನಸ್ಸನ್ನು ತಮ್ಮತ್ತ ಸೆಳೆದವರು. ಕಮ್ಮಾರಿಕೆ ವೃತ್ತಿಯನ್ನು ನಿರ್ವಹಿಸುತ್ತಿದ್ದವರ ಬೇಡಿಕೆ ಒಂದು ಕಾಲಕ್ಕೆ ಹೆಚ್ಚಾಗಿತ್ತು ಮತ್ತು ಆ ಕಾಲಘಟ್ಟದಲ್ಲಿ ಆರ್ಥಿಕವಾಗಿ ಸದ್ರಢರಾಗಿದ್ದರು. ರಾಜರು ಆಯುಧಗಳನ್ನು ತಯಾರಿಸುವುದಕ್ಕೊಸ್ಕರ ಕಮ್ಮಾರರಿಗೆ ಹೆಚ್ಚಿನ ಹಣ ಮತ್ತು ಇತರ ಸೌಲತ್ತುಗಳನ್ನು ಕೊಟ್ಟು ಅವರನ್ನು ತಮ್ಮಲ್ಲಿಯೇ ಇಟ್ಟುಕೊಳ್ಳುತ್ತಿದ್ದರು ಮತ್ತು ಕಮ್ಮಾರಕೆ ವೃತ್ತಿಗೆ ಹೆಚ್ಚಿನ ಪ್ರೊತ್ಸಾಹಗಳನ್ನು ನೀಡುತ್ತಿದ್ದರು.

ವಿಜಯನಗರ ಅರಸರ ಕಾಲಕ್ಕೆ ಕಬ್ಬಿಣದಿಂದ ತಯಾರಿಸಿದ ಶಸ್ತ್ರಾಸ್ತ್ರಗಳನ್ನು ಇತರ ವಸ್ತುಗಳನ್ನು ಅರಬ್ ದೇಶಗಳಿಗೆ ರಫ್ತುಮಾಡಿ ಅಲ್ಲಿಂದ ಕುದುರೆಗಳನ್ನು ಆಮದು ಮಾಡಿಸಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ವಿಜಯನಗರ ಆರಸರ ಕಾಲಕ್ಕೆ ಕಬ್ಬಿಣದ ಕೆಲಸಗಾರರಿಗೆ ಅನೇಕ ಪ್ರೊತ್ಸಾಹಗಳು ದೊರೆತಿದ್ದವು.

ಪಾಸ್ಚ್ಯಾತ್ಯರು ಭಾರತವನ್ನು ಆಳಲಿಕ್ಕೆ ಪ್ರಾರಂಭಿಸಿದ ಮೇಲೆ ಬೃಹತ್ ಕೈಗಾರಿಕೆಗಳು ಭಾರತವನ್ನು ಪ್ರವೇಶಿಸಿದವು. ಈ ಕೈಗಾರಿಕೆಗಳು ಇಲ್ಲಿಯ ಕಬ್ಬಿಣದ ಅದಿರನ್ನು ಬಳಸಿಕೊಂಡು ಕೃಷಿ ಕೃಷಿಯೇತರ ಚಟುವಟಿಕೆಗಳಿಗೆ ಬೇಕಾದ ಅನೇಕ ವಸ್ತುಗಳನ್ನು ಸಿದ್ಧಪಡಿಸತೊಡಗಿದರು. ಇದರಿಂದ ಗುಡಿ

ಕೈಗಾರಿಕೆಗಳನ್ನೇ ನಂಬಿ ಬದುಕುತ್ತಿದ್ದ ಅನೇಕ ಸಮುದಾಯಗಳು ಹಂತ ಹಂತವಾಗಿ ನಿರ್ಗತಿಕರಾಗ ತೊಡಗಿದರು.

ಯುರೋಪಿಯನ್ನರು ಪರಿಚಯಿಸಿದ ಕಬ್ಬಿಣ ಭಾರತೀಯರು ಸಂಪ್ರದಾಯಿಕವಾಗಿ ತಯಾರಿಸುತ್ತಿದ್ದ ಕಬ್ಬಿಣಕ್ಕಿಂತ ಅತೀ ಕಡಿಮೆ ವೆಚ್ಚದಲ್ಲಿ ದೊರೆಯುತ್ತಿತ್ತು. ಸಾಂಪ್ರದಾಯಿಕ ಕಬ್ಬಿಣ ತಯಾರಿಕರಿಂದಲೇ ಪಡೆದ ಕಬ್ಬಿಣ ತಯಾರಿಕೆ ತಂತ್ರಗಾರಿಕೆಯನ್ನು ಕಾರ್ಖಾನೆಗಳಿಗೆ ಅಳವಡಿಸಿ ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣ ತಯಾರಿಸತೊಡಗಿದಂತೆ ತಮ್ಮ ಶ್ರಮ ಶಕ್ತಿಯನ್ನೇ ನಂಬಿ ಜೀವನ ನಡೆಸುತ್ತಿದ್ದ ಶ್ರಮಿಕ ಸಮುದಾಯಗಳಿಗೆ ದಿಕ್ಕು ತೋಚದಂತಾಗಿ ಪರ್ಯಾಯ ಜೀವನ ಮಾರ್ಗಗಳಿಗೆ ವಲಸೆ ಹೊದರು.

ಕೆಲ ಕಮ್ಮಾರರು ಮಾರುಕಟ್ಟೆಯಲ್ಲಿ ಸುಲಭ ಬೆಲೆಯಲ್ಲಿ ದೊರೆಯುವ ಕಬ್ಬಿಣ ಖರೀದಿಸಿ ಕೃಷಿ ಹಾಗು ಕೃಷಿಯೇತರ ಉಪಕರಣಗಳ ತಯಾರಿಕೆಯಲ್ಲಿ ತೊಡಗಿಕೊಂಡರು. ಕೃಷಿಗೆ ಸಂಬಂಧಿಸಿದ ಉಪಕರಣಗಳು ಕಾರ್ಖಾನೆಗಳ ಮೂಲಕ ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಬರತೊಡಗಿದಾಗ ಮತ್ತು ಕೃಷಿಕ ವೃತ್ತಿಯಲ್ಲಿ ಆಧುನಿಕ ಉಪಕರಣಗಳನ್ನು ಬಳಸಲು ಪ್ರಾರಂಭಿಸಿದ ಮೇಲೆ ಇವರ ಬದುಕು ಇನ್ನೂ ಅಂತಂತ್ರವಾಗತೊಡಗಿತು. ಈಗ ಕೊಡಲಿ, ಕುಡುಗೋಲು, ಚಕ್ಕಡಿಗೆ ಹಳಿ ಹಾಕುವುದು, ಮುಂತಾದ ಸಣ್ಣ ಪುಟ್ಟ ಕೆಲಸಗಳನ್ನು ಮಾತ್ರ ನಿರ್ವಹಿಸುತ್ತಾ ಅನಿವಾರ್ಯವಾಗಿ ಆ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಬೇಕಾಗಿದೆ.

ಕಮ್ಮಾರರಿಗೆ ಕಮ್ಮಾರಿಕೆ ವೃತ್ತಿಯನ್ನು ಬಿಟ್ಟರೆ ಯಾವ ವೃತ್ತಿಗಳು ಅವರಿಗೆ ಬಾರದೆ ಇರುವುದರಿಂದ ಅನಿವಾರ್ಯತೆಯಿಂದ ಈ ವೃತ್ತಿಗೆ ಅಂಟಿಕೊಂಡಿದ್ದಾರೆ. ಅನಕ್ಷರಸ್ತರಾಗಿರುವ ಇವರು ಈ ವೃತ್ತಿಯಲ್ಲಿ ಆಧುನಿಕತೆಯನ್ನು ಬೆಳೆಸಿಕೊಂಡಿದ್ದರೆ ಇಂದು ಈ ಆಧುನಿಕ ಯುಗದಲ್ಲಿ ಬದುಕುತ್ತಿದ್ದರು. ಅದು ಅವರಿಂದ ಸಾಧ್ಯವಾಗುತ್ತಿಲ್ಲ. ಹೀಗಾಗಿ ಇಂದು ಕಮ್ಮಾರರ ಮಕ್ಕಳು ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಕೆಲವರು ಕೂಲಿ ಕಾರ್ಮಿಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಒಟ್ಟಿನಲ್ಲಿ ಇಂದು ಆಧುನಿಕತೆಯ ಭರಾಟೆಯಲ್ಲಿ ಸಿಕ್ಕಿಕೊಂಡು ಹೀನಾಯ ಬದುಕನ್ನು ಈ ಕಮ್ಮಾರರು ಸಾಗಿಸುತ್ತಿದ್ದಾರೆ. ಪಾರಂಪರಿಕ ವೃತ್ತಿಯಲ್ಲಿ ಆಧುನಿಕತೆಯನ್ನು ಸೇರಿಸಿಕೊಳ್ಳಲಾಗದೆ ಮೂಲ ವೃತ್ತಿಯನ್ನು ಬಿಡಲಾಗದೇ ಅತಂತ್ರ ಸ್ಥಿತಿಯಲ್ಲಿದ್ದಾರೆ.

ವರ್ತಮಾನದಲ್ಲಿ ಕಮ್ಮಾರರನ್ನು ಅಧ್ಯಯನ ಮಾಡುವ ಸಲುವಾಗಿ ಕರ್ನಾಟಕದ ಕರಾವಳಿ ಜಿಲ್ಲೆಗಳಾದ ಉಡುಪಿ, ಮಂಗಳೂರು ಹಾಗೂ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲದಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಸಮುದಾಯವನ್ನು ಆಧ್ಯಯನ ಮಾಡುವ ಸಲುವಾಗಿ ಮತ್ತು ಭಿನ್ನತೆಗಳನ್ನು ದಾಖಲಿಸುವ ಕಾರಣಕ್ಕಾಗಿ ಕಮ್ಮಾರ ಸಮುದಾಯದ ಅನೇಕ ತಿಳುವಳಿಕೆದಾರರನ್ನು ಸಂದರ್ಶಿಸಿದ್ದೇನೆ. ಜೊತೆಗೆ ಅವರ ಪ್ರದೇಶಗಳಲ್ಲಿ ಕೆಲವು ದಿನಗಳು ತಂಗಿದ್ದೇನೆ. ಇದರಿಂದಾಗಿ ಇವರನ್ನು ಸೂಕ್ಷ್ಮವಾಗಿ ನೋಡಲು ನನಗೆ ಸಾಧ್ಯವಾಯಿತು. ಹಲವಾರು ವ್ಯಕ್ತಿಗಳ ಜೊತೆ ಮುಕ್ತವಾಗಿ

ಮಾತನಾಡಿದ್ದೇನೆ. ಅವರು ತಮ್ಮ ಅನುಭವನಗಳನ್ನು ನನ್ನ ಜೊತೆ ಹಂಚಿಕೊಂಡಿದ್ದಾರೆ. ಈ ಸಮುದಾಯದ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳನ್ನು ಅಂಕಿ ಅಂಶದ ಮೂಲಕ ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಜಿಲ್ಲೆಗಳಲ್ಲಿಯ ಕಮ್ಮಾರರು ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಹಲವು ವೈವಿಧ್ಯತೆಗಳನ್ನು ಹೊಂದಿರುವ ಕಾರಣಕ್ಕಾಗಿ (Household Survey) ಮಾಡಿ ಅಧ್ಯಯನ ಮಾಡಲಾಗಿದೆ. ಕಮ್ಮಾರರು ತಮ್ಮ ಮೂಲ ಉದ್ಯೋಗದಿಂದ ಹೊಟ್ಟೆ ಹೊರೆಯಲು ಸಾಧ್ಯವೇ ಇಲ್ಲ ಎಂಬುದನ್ನು ಈಗಾಗಲೇ ಕಂಡುಕೊಂಡಿದ್ದಾರೆ. ಅದರೂ ತಮ್ಮ ಮೂಲ ವೃತ್ತಿಯ ಬಗ್ಗೆ ಕೆಲವೊಮ್ಮೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದಾರೆ.

ಶಿಕ್ಷಣ ಪಡೆದು ಸರ್ಕಾರಿ ಹುದ್ದೆಯನ್ನು ಗಿಟ್ಟಿಸಿಕೊಳ್ಳುವ ಇವರ ಸಾಧನೆ ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ. ಬೆರಳೆಣಿಕೆಯಷ್ಟು ಜನ ಸತತ ಪರಿಶ್ರಮದಿಂದ ಬೇರೆ ವೃತ್ತಿಗಳನ್ನು ನಿರ್ವಹಿಸುತ್ತಾ ಆರ್ಥಿಕವಾಗಿ ಸ್ವಲ್ಪ ಉನ್ನತ ಸ್ಥಿತಿಯಲ್ಲಿರುವುದು ಕಂಡು ಬರುತ್ತದೆ. ನಗರೀಕರಣದ ಪ್ರಭಾವಕ್ಕೆ ಒಳಗಾಗಿ ಇವರು ಈ ವೃತ್ತಿಗಿಂತ ವಿವಿಧ ಅಂಗಡಿಗಳಲ್ಲಿ ದುಡಿಯುತ್ತಿರುವುದು, ಆಟೋ ಚಾಲನೆ, ಇನ್ನಿತರ ಸಣ್ಣ ಪುಟ್ಟ ಉದ್ಯೋಗಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ನಗರೀಕರಣಕ್ಕೂ ಈ ಕಮ್ಮಾರ ವೃತ್ತಿಗೂ ಸರಿ ಬರುವುದಿಲ್ಲ. ಕಾರಣ ಮಂಗಳೂರು ನಗರ ಪ್ರಾಂತ್ಯದಲ್ಲಿ ಹಿಂದಿನ ಹಲವಾರು ಕಮ್ಮಾರರ ಕುಲುಮೆಗಳು ಒಂದೂ ಕೂಡ ಸಿಗದಿರುವಂತಹ ಸ್ಥಿತಿ ಉಂಟಾಗಿದೆ.

ಕಮ್ಮಾರರ ಸ್ಥಿತಿಗಳು ಸುಧಾರಿಸಬೇಕಾದರೆ ಮೊದಲು ಈ ಸಮುದಾಯದ ಜನರಿಗೆ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸುವುದು ಅವಶ್ಯಕವಾಗಿದೆ. ಅವರಿಗೆ ಪ್ರಾಥಮಿಕ, ಮಾಧ್ಯಮಿಕ, ಪದವಿಪೂರ್ವ, ಪದವಿ, ತಾಂತ್ರಿಕ, ವೈದ್ಯಕೀಯ, ಶಿಕ್ಷಣದ ಅವಕಾಶಗಳನ್ನು ಕಲ್ಪಿಸಬೇಕಾಗಿದೆ. ಭೂರಹಿತ ಕುಟುಂಬಗಳಿಗೆ ಭೂಮಿಯನ್ನು ಹಂಚುವುದರ ಮೂಲಕ ಕೃಷಿಗೆ ಸಂಬಂಧಿಸಿದ ಉತ್ತೇಜನ ನೀಡಬೇಕಾಗುತ್ತದೆ. ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡಿರುವ ಕಮ್ಮಾರರಿಗೆ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ಅನುಕೂಲ ಮಾಡಿಕೊಡಬೇಕಾಗಿದೆ. ಈ ಸಮುದಾಯದ ಇಲ್ಲಾ ಪಂಗಡಗಳನ್ನು ಸಂವಿಧಾನ ಬದ್ಧವಾಗಿ ಅನುಸೂಚಿತ ಪಟ್ಟಿಯಲ್ಲಿ ಈಗಾಗಲೇ ಸೇರಿಸಿದ್ದು, ಅದು ಕಾರ್ಯೋನ್ಮುಖವಾಗುವಂತೆ ಮಾಡಿ ಇವರಿಗೆ ಸಾಮಾಜಿಕ ನ್ಯಾಯ ಒದಗಿಸಿ ಅವರ ಅಭಿವೃದ್ಧಿಗೆ ಸಹಕಾರ ನೀಡಬೇಕು. ಈ ಸಮುದಾಯವು ಸರ್ವಾಂಗಿಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅವರಿಗೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿ ಗುಣಾತ್ಮಕ ಅಭಿವೃದ್ಧಿಯ ಮಾರ್ಗೋಪಾಯಗಳನ್ನು ಕಂಡುಹಿಡಿದು ಅಭಿವೃದ್ಧಿ ಯೋಜನೆಗಳನ್ನು ರೂಪಿಸಬೇಕಾಗಿದೆ. ಕಮ್ಮಾರ ಸಮುದಾಯವು ಉಂಬಾ ಕಷ್ಟಕರವಾದ ಕೆಲಸವನ್ನು ಮಾಡುವುದರಿಂದ ಆಗಾಗ ಅಪಾಯಗಳು ಬಂದೊದಗುತ್ತವೆ. ವಯಸ್ಸಾದ ಮೇಲೆ ತುಂಬಾ ಕಷ್ಟ ಪಡುತ್ತಾರೆ. ಅದ್ದರಿಂದ ಇವರಿಗೆ ಸೂಕ್ತವಾದ ಆರೋಗ್ಯ ಭದ್ರತೆ ಬೇಕು. ಹಾಗು ವಯಸ್ಸಾದ ನಂತರ ಇವರಿಗೆ ದುಡಿಯಲು ಅಸಾಧ್ಯವಾದದ್ದರಿಂದ ಸಮಾಜಕ್ಕೆ ಬೇಡವಾದ ಜನರಾಗುತ್ತಾರೆ. ಅದ್ದರಿಂದ ಇವರಿಗೆ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳನ್ನು

ಜಾರಿಗೊಳಿಸಬೇಕು. ವೃದ್ಧಾಪ್ಯ ವೇತನ, ವಿಧವಾ ವೇತನ ಇನ್ನು ಮುಂತಾದ ಕಾರ್ಯಕ್ರಮಗಳನ್ನು ಜಾರಿಗೊಳಿಸುವಾಗ ಕಮ್ಮಾರ ಸಮುದಾಯಗಳಿಗೆ ಪ್ರಾಶಸ್ತ್ಯ ನೀಡಬೇಕು. ಹಾಗು ಅವರು ಮಾಡುವ ಉದ್ಯೋಗಕ್ಕೆ ಸಂಬಂಧಿಸಿದ ಸಲಕರಣೆಗಳನ್ನು ಮುಕ್ತವಾಗಿ ನೀಡಬೇಕು. ಹಾಗೇಯೇ ಅವರು ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆಯನ್ನೊದಗಿಸಿ ಪ್ರಮಾಣಿಕವಾದ ಬೆಲೆ ನಿಗದಿಮಾಡುವ ಕಾರ್ಯವನ್ನು ಸರ್ಕಾರ ಮಾಡಿದ್ದಲ್ಲಿ ಅಪಾಯದ ಅಂಚಿನಲ್ಲಿರುವ ಈ ಕಮ್ಮಾರರ ಗುಡಿ ಕೈಗಾರಿಕೆಗಳನ್ನು ಉಳಿಸಲು ಸಾಧ್ಯವಾಗುತ್ತದೆ. ಇಲ್ಲವಾದರೆ ಪುರಾತನ ಕಾಲದಿಂದ ನಡೆದುಕೊಂಡು ಬಂದಂತಹ ಈ ವೃತ್ತಿ ಮಾಯವಾಗುವುದರಲ್ಲಿ ಸಂಶಯಲ್ಲ.

ಕಮ್ಮಾರರನ್ನು ಒಂದು ಕಾಲಕ್ಕೆ ಸಮಾಜ ಅಸ್ಪೃಷ್ಯತೆಯಿಂದ ಕಾಣುತಿತ್ತು. ಭಾರತ ಸರ್ಕಾರವು ಕಮ್ಮಾರರು ಮೂಲನಿವಾಸಿಗಳೆಂದು ಪರಿಗಣಿಸಿ ಮುಖ್ಯವಾಹಿನಿಗೆ ತರುವ ಸಲುವಾಗಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿತು. ಈ ಸೌಲಭ್ಯ ಪಡೆಯುತ್ತಿರುವ ಕಮ್ಮಾರರನ್ನು ಇತರೆ ಸಮುದಾಗಳು ಮತ್ತಷ್ಟು ಕೀಳಾಗಿ ಕಾಣಲಾರಂಭಿಸಿದವು. ಅದರಲ್ಲಿ ಪುರೋಹಿಶಾಹಿ ವರ್ಗದಿಂದ ಮತ್ತಷ್ಟು ತೊಂದರೆಯನ್ನು ಈ ಸಮುದಾಯ ಅನುಭವಿಸುವಂತಾಯಿತು. ವಿಶ್ವಕರ್ಮರಲ್ಲಿಯ ಇತರೆ ಪಂಗಡಗಳು ಸಹ ಇವರನ್ನು ಕೀಳಾಗಿ ಕಾಣುತ್ತಿದ್ದವು. ಈಗ ಈ ಸ್ಥಿತಿ ಬದಲಾಗಿದೆ. ವಿಶ್ವಕರ್ಮರೆಲ್ಲರು ನಾವು ಒಂದು ಎಂಬ ಭಾವನೆ ಮೂಡಿದೆ. ಆದರೆ ಅತ್ಯಂತ ಹಿಂದುಳಿದ ಈ ಸಮುದಾಯ ಇಂದಿಗೂ ಪರಿಶಿಷ್ಟ ಪಂಗಡದ ಸೌಲಭ್ಯ ಪಡೆದುಕೊಳ್ಳಲು ಹಿಂದೇಟು ಹಾಕುತ್ತಿದೆ. ಇದಕ್ಕೆ ಕಾರಣ ವೈದಿಕ ಪರಂಪರೆ ಎಂದು ಹೇಳಿದರೆ ತಪ್ಪಾಗಲಾರದು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ಕಮ್ಮಾರರು ಪರಿಶಿಷ್ಟ ವರ್ಗದ ಸೌಲಭ್ಯಗಳನ್ನು ಪಡೆದು ಮುಖ್ಯವಾಹಿನಿಯತ್ತ ಚಲಿಬೇಕೆಂಬ ಆಸೆ ಹೊಂದಿದ್ದರೂ ಇತರರು ಇವರ ಕಾಲೆಳೆಯುತ್ತಿರುವುದು ಕಂಡು ಬರುತ್ತದೆ.

**೩.೨೪. ನ್ಯಾಯ ಪದ್ಧತಿ:**

"ಪ್ರಪಂಚದ ಎಲ್ಲಾ ಆದಿವಾಸಿಗಳ ಸಮುದಾಯಗಳಲ್ಲಿ ತಮ್ಮದೇ ಆದ ಮತ್ತು ವಿಶಿಷ್ಟವಾದ ನ್ಯಾಯ ಪದ್ಧತಿಯನ್ನು ಪರಂಪರಾನುಗತವಾಗಿ ಅನುಸರಿಸಿ ಕೊಂಡು ಬಂದಿರುವುದನ್ನು ಕಾಣುತ್ತೇವೆ. ಅತ್ಯಂತ ಕಟ್ಟುನಿಟ್ಟಿನಿಂದ ಪಾಲಿಸಿಕೊಂಡು ಬರುತ್ತಿದ್ದ ಸಮುದಾಯಗಳ ನ್ಯಾಯ ಪಂಚಾಯತಿ ವ್ಯವಸ್ಥೆ ಇಂದು ಸಡಿಲವಾಗುತ್ತಿರುವುದನ್ನು ಎಲ್ಲ ಸಮುದಾಯಗಳಲ್ಲಿಯೂ ಕಾಣುತ್ತೇವೆ. ಇದಕ್ಕೆ ಆಧುನಿಕ ನ್ಯಾಯ ಪದ್ಧತಿಯೇ ಕಾರಣವಾಗಿದೆ. ಪ್ರತಿಯೊಂದು ಸಣ್ಣ ಪುಟ್ಟ ವ್ಯಾಜ್ಯಗಳು ನ್ಯಾಯಾಲಯದ ಮೆಟ್ಟಿಲು ಹತ್ತುತ್ತಿರುವುದರಿಂದ ಅವುಗಳ ಪ್ರಭಾವಗಳು ಆದಿವಾಸಿ ಸಮುದಾಯಗಳ ಮೇಲಾಗುತ್ತಿವೆ. ಸಾಮಾನ್ಯವಾಗಿ ಆದಿವಾಸಿ ಸಮುದಾಯಗಳಲ್ಲಿ ಕಂಡುಬರುವ ನ್ಯಾಯ ಪದ್ಧತಿಯ ಮೂಲ ಉದ್ದೇಶ ಒಂದೇ ಆಗಿದ್ದರೂ ಆ ಪದ್ಧತಿಯನ್ನು ಅನುಸರಿಸುವ ಕ್ರಮಗಳು ಬೇರೆ ಬೇರೆಯಾಗಿರುವುದನ್ನು ಗಮನಿಸಬಹುದು."ಒಂದು ಜನಸಮುದಾಯದ ನಂಬಿಕೆ, ಆಚರಣೆ, ಆದರ್ಶ,ಮೌಲ್ಯಗಳು ನ್ಯಾಯ ಪದ್ಧತಿಯನ್ನು ರೂಪಿಸುತ್ತವೆ." ಆದಿವಾಸಿಗಳಲ್ಲಿಯ ಈ ನ್ಯಾಯ ಪದ್ಧತಿಗೆ ಆ ಸಮುದಾಯದ

ಜನರು ಅತ್ಯಂತ ಗೌರವ ನೀಡುತ್ತಾರೆ. ಮತ್ತು ಅವು ನಮ್ಮ ಸಮುದಾಯದ ಅಲಿಖಿತ ಕಾನೂನುಗಳು ಎಂದು ತಿಳಿದು ಭಯ ಭಕ್ತಿಯಿಂದ ಗೌರವಿಸುತ್ತಾರೆ. ಇಂದು ಈ ಪರಂಪರೆಯನ್ನು ಸಾಮಾನ್ಯವಾಗಿ ಕಾಣುವುದಿಲ್ಲ.

ಸಾಮಾನ್ಯವಾಗಿ ಒಂದು ಊರಿಗೆ ಒಂದು ಅಥವಾ ಎರಡು ಕಮ್ಮಾರ ಕುಟುಂಬಗಳು ವಾಸಿಸುತ್ತಿರುತ್ತವೆ. ಇವರ ಜೊತೆಗೆ ಇವರ ಸಮುದಾಯದವರೇ ಆದ ಪತ್ತಾರರು, ಬಡಿಗೇರರು, ಶಿಲ್ಪಿ ಮತ್ತು ಲೋಹ ಶಿಲ್ಪಿಗಳು ಸಾಮಾನ್ಯವಾಗಿ ವಾಸಿಸುತ್ತಿರುತ್ತಾರೆ. ವಿಶ್ವಕರ್ಮರಲ್ಲಿಯ ಐದು ವೃತ್ತಿಯವರು ಸೇರಿಕೊಂಡು ತಮ್ಮದೇ ಆದ ನ್ಯಾಯ ಪಂಚಾಯತಿಯನ್ನು ರಚಿಸಿಕೊಂಡಿರುತ್ತಾರೆ. ಕೆಲವು ಸ್ಥಳಗಳಲ್ಲಿ ಎರಡು ಅಥವಾ ಮೂರು ಗ್ರಾಮಗಳಲ್ಲಿಯ ಪಂಚಾಳರು ಸೇರಿಕೊಂಡು ನ್ಯಾಯ ಪಂಚಾಯತಿಯನ್ನು ರಚಿಸಿಕೊಂಡಿರುವುದುಂಟು. ಈ ನ್ಯಾಯ ಪಂಚಾಯತಿಯಲ್ಲಿ ಸಾಮಾನ್ಯವಾಗಿ ಐದು ಜನ ಸದಸ್ಯರಿರುತ್ತಾರೆ. ಒಬ್ಬರನ್ನು ಅದರಲ್ಲೂ ಹಿರಿಯರನ್ನು ಅಧ್ಯಕ್ಷರನಾಗಿ ಮಾಡಿರುತ್ತಾರೆ. ಸಮುದಾಯದ ಒಳಗಿನ ಅಥವಾ ಹೊರಗಿನ ನ್ಯಾಯ, ಅನ್ಯಾಯಗಳ ಬಗ್ಗೆ ಸಭೆ ಸೇರಿ ಎಲ್ಲವನ್ನು ಸೂಕ್ಷವಾಗಿ ಕೇಳಿ ನಿರ್ಣಯ ತೆಗೆದುಕೊಳ್ಳುತ್ತಾರೆ. ಗಂಡ ಹೆಂಡತಿ ನಡುವಿನ ಕಲಹ, ತಂದೆ ಮಕ್ಕಳ ಕಲಹ, ಆಸ್ತಿ ಹಂಚಿಕೆ ವಿವಾದ, ವೃತ್ತಿಗೆ ಸಂಬಂಧಿಸಿದ ತಂಟೆ–ತಕರಾರು, ಅಂತರ್ಜಾತಿ ವಿವಾಹ, ಧಾರ್ಮಿಕ ಆಚರಣೆ ಮುಂತಾದ ಎಲ್ಲ ವಿಷಯಗಳನ್ನು ಕುರಿತು ಚರ್ಚಿಸುತ್ತಾರೆ. ಈ ನ್ಯಾಯ ಪಂಚಾಯತಿ ಕಾಳಮ್ಮನ ದೇವಸ್ಥಾನ ಅಥವಾ ತಮ್ಮ ಆರಾಧ್ಯ ದೈವಗಳ ದೇವಸ್ಥಾನಗಳಲ್ಲಿ ನಡೆಯುತ್ತದೆ. ಸಾಮಾನ್ಯವಾಗಿ ಎಲ್ಲಾ ರೀತಿಯ ವ್ಯಾಜ್ಯಗಳನ್ನು ಬಗೆಹರಿಸಲು ಮತ್ತು ಕೋರ್ಟು ಕಚೇರಿಗೆ ಹೊಗದಂತೆ ತಡೆಯಲು ಪ್ರಯತ್ನಿಸುತ್ತಾರೆ. ಇತ್ತಿತ್ತಲಾಗಿ ಎಲ್ಲಾ ವಿಷಯಗಳಿಗೂ ಕೋರ್ಟಿಗೆ ಹೋಗುತ್ತಿರುವುದನ್ನು ಕಾಣುತ್ತಿದ್ದೇವೆ.

ನ್ಯಾಯ ಪಂಚಾಯತಿಯಲ್ಲಿ ತೆಗೆದುಕೊಂಡ ನಿರ್ಣಯವನ್ನು ಅಧ್ಯಕ್ಷರು ಪ್ರಕಟಿಸುತ್ತಾರೆ. ಅನ್ಯಾಯ ಮಾಡಿದವರು ನ್ಯಾಯ ಪಂಚಾಯತಿ ಹೇಳಿದಷ್ಟು ಹಣವನ್ನು ದಂಡದ ರೂಪದಲ್ಲಿ ಕೊಡಬೇಕಾಗುತ್ತದೆ. ಈ ಹಣವನ್ನು ಧಾರ್ಮಿಕ ಕೆಲಸಗಳಿಗೆ ಮಾತ್ರ ಬಳಸುತ್ತಾರೆ. ನ್ಯಾಯ ನಿರ್ಣಯ ಮಾಡುವ ವ್ಯಕ್ತಿಯನ್ನು ಮಂಗಳೂರು ಮತ್ತು ಉಡುಪಿ ಪರಿಸರದಲ್ಲಿ ಮುಕ್ತೇಶ್ವರರು ಎಂದೂ ಕರೆಯುವುದುಂಟು. ಸಮುದಾಯದ ಎಲ್ಲಾ ಜವಾಬ್ದಾರಿಗಳನ್ನು ಸಾಮಾನ್ಯವಾಗಿ ಮುಕ್ತೇಶ್ವರರು ಸೂಕ್ಷ್ಮವಾಗಿ ಗಮನಿಸುತ್ತಾರೆ.

ಬಳ್ಳಾರಿ ಜಿಲ್ಲೆಯ ಕುಡುತಿನಿಯ ಶಾಸನವೊಂದರಲ್ಲಿ ಕಮ್ಮಾರರ ವಂಶಸ್ಥರು ರಾಷ್ಟ್ರಕೂಟರ ಕಾಲಕ್ಕೆ ತಪೋವನಾಧಿಕಾರಿಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದುದರ ಬಗ್ಗೆ ಅಲ್ಲಿಯ ಶಾಸನವೊಂದು ಮಾಹಿತಿ ನೀಡುತ್ತದೆ. "ಈ ಶಾಸನದ ಪಠ್ಯದ ಪ್ರಕಾರ ಸ್ಥಾನದಯ್ದು ವರ್ಗದವರು (ಅಂದರೆ ಕಮ್ಮಾರ, ಬಡಿಗ, ಶಿಲಾಶಿಲ್ಪಿ, ಕಂಚುಗಾರ, ಸುವರ್ಣಶಿಲ್ಪಿ) ಅಲ್ಲಿಯ ಧರ್ಮಕ್ಕೂ, ಗ್ರಾಮಕ್ಕೂ ಮುಖಂಡರಾಗಿದ್ದರು. ಇವರು ತಮ್ಮನ್ನು ಕಾರ್ತಿಕೇಯ ಪಾದ ಪದ್ಮೋಪ ಜೀವಿಗಳೆಂದು

ಕರೆದುಕೊಂಡಿದ್ದಾರೆ. ಧಾರ್ಮಿಕ ಕಾರ್ಯ, ಧಾನ ದತ್ತಿ ಬಿಡುವುದು ಮತ್ತು ನ್ಯಾಯ ಬಗೆಹರಿಸುವುದು ಮುಂತಾದ ಪ್ರಮುಖ ಕಾರ್ಯಗಳು ಕಾರ್ತಿಕೇಯ ತಪೋವನದ ಆಧಿಪತಿಗಳ ಮತ್ತು ಸ್ಥಾನದಯ್ಯ ವರ್ಗದವರ ಸಮ್ಮುಖದಲ್ಲಿ ನಡೆಯುತ್ತಿದ್ದವು. ಈ ಸ್ಥಾನದಯ್ಯ ವರ್ಗದವರು ವಿಶ್ವಕರ್ಮ ಪರಂಪರೆಯ ಪಾಂಚಾಳರು ಎಂದು ಡಾ. ಅ. ಸುಂದರ್ ಅವರು ಅಭಿಪ್ರಾಯ ಪಡುತ್ತಾರೆ.

ವಿಶ್ವಕರ್ಮರು ಕೇವಲ ತಮ್ಮ ಕುಲಪಂಚಾಯತಿಗಳಲ್ಲಿ ಮಾತ್ರವಲ್ಲದೇ ಇತರೇ ಸಮುದಾಯಗಳ ಕುಲ ಪಂಚಾಯತಿಗಳಲ್ಲಿ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಎಂದು ಕೊಳ್ಳೆಗಾಲದ ಬಾಪೂಜಿನಗರದ ಕೆ.ರುದ್ರಪ್ಪಾಚಾರ್ಯರು ಅಭಿಪ್ರಾಯ ಪಡುತ್ತಾರೆ.

ಕಮ್ಮಾರರಲ್ಲಿ ಅಂತರ್ಜಾತಿ ವಿವಾಹಕ್ಕೆ ಮನ್ನಣೆ ಇಲ್ಲ. ಒಂದು ವೇಳೆ ಸಮುದಾಯದ ಗಂಡು ಅಥವಾ ಹೆಣ್ಣು ಅಂತರ್ಜಾತಿಯ ವಿವಾಹ ಮಾಡಿಕೊಂಡರೆ ಅವರನ್ನು ಜಾತಿಯಿಂದ ಬಹಿಷ್ಕರಿಸುತ್ತಿದ್ದರು. ಇಂದು ಈ ನ್ಯಾಯ ನಿರ್ಣಯದಲ್ಲಿ ಯಾವ ತೀರ್ಮಾನವನ್ನು ತೆಗೆದುಕೊಳ್ಳದೇ ಅಂತರ್ಜಾತಿಯ ವಿವಾಹ ಮಾಡಿಕೊಂಡವರನ್ನು ಯಾವ ಧಾರ್ಮಿಕ ಕಾರ್ಯಾಚರಣೆಗಳಿಗೆ ಆಹ್ವಾನಿಸದೇ ನಿರ್ಲಿಪ್ತವಾಗಿರುತ್ತಾರೆ. ಸಮುದಾಯದ ಗಂಡು ಹೆಣ್ಣುಗಳು ಅನೈತಿಕ ಸಂಬಂಧ ಹೊಂದಿದ್ದರೆ ಅಂಥವರನ್ನು ನಿರ್ದಾಕ್ಷಣ್ಯವಾಗಿ ಸಾಮಾಜದಿಂದ ಹೊರಗೆ ಹಾಕುತ್ತಾರೆ.

**೩.೨೫. ವೈದ್ಯ ಪದ್ಧತಿ:**

"ವೈದ್ಯ ವಿದ್ಯೆ ಆದಿವಾಸಿ ಸಮುದಾಯಗಳು ಧ್ಯಾನಸ್ಥ ಸ್ಥಿತಿಯಲ್ಲಿದ್ದಾಗ ರೂಪಗೊಂಡು ಅದರ ಪಾರಂಪರಿಕ ಜ್ಞಾನ, ವೈವಿಧ್ಯಮಯ ಜೀವಂತಿಕೆ, ಹಂತ ಹಂತವಾಗಿ ಬೆಳೆಯುತ್ತಾ ಬಂದಿದೆ. ಈ ವೈದ್ಯ ವಿದ್ಯೆ ಮಾನವನಷ್ಟೇ ಪ್ರಾಚೀನವಾದದ್ದು ಮತ್ತು ಮಾನವನೊಂದಿಗೆ ಹುಟ್ಟಿ ಬೆಳೆದಿರುವಂತಹದ್ದು. ಈ ಪಾರಂಪರಿಕ ವೈದ್ಯಕೀಯ ಜ್ಞಾನ ಮಾನವನ ಪ್ರಯತ್ನಗಳು ಬೆಳೆದು ಬಂದಂತೆಲ್ಲಾ ಅದು ಬೆಳೆಯಿತು. ಈ ಪಾರಂಪರಿಕ ವೈದ್ಯಕೀಯ ಜ್ಞಾನ ಒಬ್ಬ ವ್ಯಕ್ತಿಯಿಂದಾಗಲಿ ಅಥವಾ ಒಂದು ಸಮುದಾಯದಿಂದಾಗಲಿ ಬೆಳೆದು ಬಂದಿರುವಂತಹದ್ದಲ್ಲ. ಈ ಜ್ಞಾನ ಶಾಖೆಯ ಹಿಂದೆ ಹಲವಾರು ಆದಿವಾಸಿ ಸಮುದಾಯಗಳ ವಿಶಿಷ್ಟವಾದ ಅನುಭವಗಳು ಇವೆ. ಜಗತ್ತಿನ ವೈದ್ಯಕೀಯ ಪರಂಪರೆಗೆ ಆದಿವಾಸಿಗಳ ವೈದ್ಯ ಪದ್ಧತಿ ವಿಶೇಷವಾದ ಕೊಡುಗೆ ನೀಡದೆ. ವೈದ್ಯ ವಿದ್ಯೆ ಸಿಂಧೂ ಸಂಸ್ಕೃತಿ ವೇದ ಸಂಸ್ಕೃತಿಗಳಲ್ಲಿ ರೂಪ ಪಡೆಯುವುದಕ್ಕಿಂತ ಮೊದಲೇ ಆದಿವಾಸಿ ಸಮುದಾಯಗಳಲ್ಲಿ ವೈದ್ಯ ಪದ್ಧತಿ ಇತ್ತು. ವೇದ ಕಾಲಗಳಲ್ಲಿ ಆದಿವಾಸಿಗಳಲ್ಲಿ ಪ್ರಚಲಿತದಲ್ಲಿದ್ದ ವೈದ್ಯ ಪದ್ಧತಿಯನ್ನೇ ಅಧ್ಯಯನಕ್ಕೊಳಡಿಸಿ ಪರಿಷ್ಕರಿಸಿ ಅದಕ್ಕೆ ಆಯುರ್ವೇದ ಎಂದು ಹೆಸರಿಸಿದರು"[೮]

ಕಮ್ಮಾರರಲ್ಲಿ ಅನೇಕ ಹಿರಿಯರು ತಮ್ಮ ಹಿರಿಯರಿಂದ ಬಳುವಳಿಯಾಗಿ ಬಂದ ಗಿಡಮೂಲಿಕೆಗಳ ಬಗೆಗೆ ಜ್ಞಾನ ಹೊಂದಿದವರಾಗಿದ್ದಾರೆ. ಕೆಲವು ರೋಗಗಳಿಗೆ ಚಿಕಿತ್ಸೆಯನ್ನು ಮಾಡುವುದನ್ನು ಕೊಳ್ಳೆಗಾಲದ ಪರಿಸರದಲ್ಲಿರುವ ಕಮ್ಮಾರರು ಕಂಡುಕೊಂಡಿದ್ದಾರೆ **ಸರ್ಪಸುತ್ತು:** ಸರ್ಪಸುತ್ತು ಅಥವಾ ಸರ್ಪ ಹುಣ್ಣು ಎಂಬ ಚರ್ಮ ರೋಗಕ್ಕೆ ಇವರು ಬುಧವಾರ ಹಾಗು

ರವಿವಾರ ಔಷಧಿ ಕೊಡುತ್ತಾರೆ. ಸಣ್ಣಿ ಕ್ಯಾಮಿ ಮತ್ತು ಲಿಂಬೆ ಹಣ್ಣಿನ ರಸ ಕಲಸಿ ಸರ್ಪಹುಣ್ಣಿನ ಸುತ್ತ ಹಚ್ಚುತ್ತಾರೆ. ಮತ್ತು ಅನೇಕ ತರದ ಪತ್ತೆ ಮಾಡಲು ಹೇಳುತ್ತಾರೆ.

**ಮೂಲವ್ಯಾದಿ:** ಮೂಲವ್ಯಾದಿಗೆ ತಾಮ್ರದಿಂದ ಸಿದ್ಧಪಡಿಸಿದ ಉಂಗುರವನ್ನು ಬಲಗಾಲಿನ ನಡುವಿನ ಬೆರಳಿಗೆ ಹಾಕುತ್ತಾರೆ. ಇದನ್ನು ರವಿವಾರ ಮಾತ್ರ ಹಾಕುತ್ತಾರೆ ಮತ್ತು ಕೆಲ ಆಹಾರ ಪದಾರ್ಥಗಳನ್ನು ತ್ಯಜಿಸಲು ಸೂಚಿಸುತ್ತಾರೆ.

**ಬಿಳಿ ಸೆರಗು ಹೋಗುತ್ತಿದ್ದರೆ:** ಹೆಣ್ಣು ಮಕ್ಕಳಿಗೆ ಬಿಳಿ ಸೆರಗು ಹೋಗುತ್ತಿದ್ದರೆ ಬಿಳಿದಾಸವಾಳದಿಂದ ಔಷದಿ ಸಿದ್ಧಪಡಿಸಿ ಕೊಡುತ್ತಾರೆ.

**ಹೊಟ್ಟೆಯೊಳಗಿನ ಹುಣ್ಣು:** ಹೊಟ್ಟೆಯೊಳಗೆ ಹುಣ್ಣುಗಳಾಗಿ ಅಜೀರ್ಣ ಮತ್ತು ಮಲಬದ್ಧತೆ ಉಂಟಾಗುತ್ತಿದ್ದರೆ ಅಡಸೋಗೆ ಎಲೆಯ ರಸವನ್ನು ತೆಗೆದು ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿ ಕೊಡುತ್ತಾರೆ. ಮೂರು ದಿನ ಈ ರಸವನ್ನು ಕುಡಿಯುವುದರಿಂದ ಹೊಟ್ಟೆಯೊಳಗಿನ ಹುಣ್ಣುಗಳು ಕಡಿಮೆಯಾಗುತ್ತದೆ ಎಂದು ಹೇಳುತ್ತಾರೆ.

ಇಂತಹ ಹಲವಾರು ರೋಗಗಳಿಗೆ ಕಮ್ಮಾರರು ಔಷಧ ಕೊಡುತ್ತಾರೆ. ಆದರೆ ಆಧುನಿಕ ವೈದ್ಯೆ ಪರಂಪರೆ ಒಳಗಾಗಿದ್ದರಿಂದ ಇವರ ಹತ್ತಿರ ರೋಗಿಗಳು ಬರುವುದು ಇಂದು ಕಡಿಮೆಯಾಗಿದೆ.

**೩.೨೬. ಮಾಟ, ಮಂತ್ರ, ಮೋಡಿ:**

"ಅನಾದಿಕಾಲದಿಂದಲೂ ಮಾಟ, ಮಂತ್ರ, ಮೋಡಿ ಈ ಪ್ರಕ್ರಿಯೆಗಳು ಎಲ್ಲ ಜನಪದ ಹಾಗೂ ಅದಿವಾಸಿ ಸಮೂದಾಯಗಳ ಬದುಕಿನಲ್ಲಿ ಜೀವಂತವಾಗಿ ಉಳಿದಿಕೊಂಡು ಬಂದಿವೆ. ಇಂದಿನ ಕಂಪ್ಯೂಟರ್ ಯುಗದಲ್ಲಿಯು ಕೂಡ ಇವು ಪ್ರಾಶಸ್ತ್ಯವನ್ನು ಪಡೆಯುತ್ತಿವೆ. ಇದಕ್ಕೆ ಕಾರಣಗಳೇನು ಎನ್ನುವುದು ತುಂಬ ಕುತೂಹಲಕರವಾದ ವಿಷಯ". [೯]

ಮಾಟ, ಮಂತ್ರ, ಮೋಡಿಯು ಇವು ಮಾನವ, ಪ್ರಾಣಿ ಹಾಗೂ ಇತರೆ ಭೌತಿಕ ವಸ್ತುಗಳ ಮೇಲೆ ಪರಿಣಾಮಗಳನ್ನು ಬೀರುತ್ತದೆಯೇ ಎಂಬುದನ್ನು ಯೋಚಿಸಬೇಕಾದ ಸಂಗತಿಯಾಗಿದೆ. ಮಾಟ, ಮಂತ್ರದ ಬಗ್ಗೆ ಆದಿವಾಸಿ ಸಮುದಾಯಗಳಲ್ಲಿ ಬಹಳ ನಂಬಿಕೆ ಇದೆ. ಮಾಟ ಮಂತ್ರಗಳಲ್ಲಿ ರಕ್ಷಣಾತ್ಮಕ ಮಾಟ ಮಂತ್ರ ಮತ್ತು ಇನ್ನೊಬ್ಬರಿಗೆ ಕೆಡಕು ಮಾಡಲು ಮಾಟ ಮಂತ್ರ, ಸ್ತ್ರೀ ಹಾಗೂ ಇತರೆ ವಸ್ತುಗಳನ್ನು ವಶೀಕರಿಸಿಕೊಳ್ಳಲು, ರೋಗ ರುಜಿನಗಳು ಬರದಂತೆ ಅಥವಾ ಬಂದಿದ್ದರೆ ತಡೆಯಲು ಮಾಟ. ಮನುಷ್ಯ, ಪ್ರಾಣಿ, ಪಕ್ಷಿಗಳ ಜೀವ ತೆಗೆಯಲು ಮಾಟ, ವ್ಯಾಪಾರ ವ್ಯವಹಾರಗಳು ಉತ್ತಮಗೊಳ್ಳಲು, ಇನ್ನೊಬ್ಬರ ಸ್ವಂತ ಉದ್ಯೋಗಗಳನ್ನು ಹಾಳು ಮಾಡಲು ಹೀಗೆ ಹತ್ತು ಹಲವಾರು ಬಗೆಯ ಮಾಟ ಮಂತ್ರಗಳನ್ನು ಮಾಡಿಸುವ ಪರಂಪರೆ ಕಂಡುಬರುತ್ತದೆ.

ಕರ್ನಾಟಕದ ಕೊಳ್ಳೆಗಾಲ ಪ್ರದೇಶವು ಮಾಟ ಮಾಡಿಸಲಿಕ್ಕೆ, ಮಾಡಿದ ಮಾಟವನ್ನು ತೆಗೆಸಲಿಕ್ಕೆ ಪ್ರಸಿದ್ಧಿ ಪಡೆದಿದೆ ಎಂದು ತಿಳಿದು ಬರುತ್ತದೆ. ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿ ಕರ್ನಾಟಕ ಈ ಪ್ರದೇಶಗಳಲ್ಲಿ ಮಾಟ ಮಂತ್ರ ಮಾಡುವ ಸಂಪ್ರದಾಯಗಳು ಭಿನ್ನ ಭಿನ್ನವಾಗಿರುವುದು

ಕಂಡು ಬರುತ್ತದೆ. ಮಾಟ ಮಂತ್ರ ಮಾಡುವವರಿಗೆ ಗಿಡಮೂಲಿಕೆಗಳ ಪರಿಚಯವೂ ಇರುತ್ತದೆ. ಇವರು ಆಯುರ್ವೇದದ ಜ್ಞಾನವನ್ನು ಪಡೆದುಕೊಂಡಿರುತ್ತಾರೆ. ಮಾಟಗಾರರು ಅಮಾವಾಸ್ಯೆ, ಗ್ರಹಣದ ಸಂದರ್ಭದಲ್ಲಿ ಸಿದ್ಧಿಯನ್ನು ಪಡೆದುಕೊಂಡಿರುತ್ತಾರೆಂದು ಹೇಳಲಾಗುತ್ತದೆ. ಸಾಮಾನ್ಯವಾಗಿ ಮಾಟ, ಮಂತ್ರ ಮಾಡಿಸುವ ಬಗೆಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಬೇಟೆಯನ್ನು ವಶಪಡಿಸಿಕೊಳ್ಳಲು
೨. ವೈರಿ, ಕ್ರೂರ ವ್ಯಕ್ತಿಗಳನ್ನು ವಶಪಡಿಸಿಕೊಳ್ಳಲು
೩. ಬಂಜೆ ಗರ್ಭವತಿಯಾಗಲು
೪. ಹಾವು, ಹುಲಿ, ಕಳ್ಳರ ಭಯವನ್ನು ನಿವಾರಿಸಲು
೫. ಭಯಪಟ್ಟು ಗ್ರಹ ಪೀಡಿತರಾಗಿದ್ದರೆ ಅವುಗಳ ನಿವಾರಣೆಗಾಗಿ
೬. ಜೂಜಿನಲ್ಲಿ ಗೆಲ್ಲುವುದಕ್ಕಾಗಿ
೭. ಮಕ್ಕಳು ಜ್ವರದಿಂದ ನರಳುತ್ತಿದ್ದರೆ ನಿವಾರಣೆಗಾಗಿ
೮. ಬಾಲಗ್ರಹ ಪೀಡೆ ನಿವಾರಣೆಗಾಗಿ
೯. ಕ್ರೂರಿಗಳನ್ನು ಒಳ್ಳೆಯವರನ್ನಾಗಿಸಲು
೧೦. ತಪ್ಪಿಸಿಕೊಂಡ ಮನುಷ್ಯರು, ಪ್ರಾಣಿಗಳು, ಇತರೆ ವಸ್ತುಗಳನ್ನು ಪತ್ತೆಮಾಡಲು
೧೧. ಶತೃವಿನ ಶಕ್ತಿಯನ್ನು ಕುಗ್ಗಿಸಲು
೧೨. ಸುಖ ಶಾಂತಿಯನ್ನು ನೆಲೆಸಲು
೧೩. ಭೂತ, ಪ್ರೇತ ಪಿಶಾಚಿ, ಬ್ರಹ್ಮರಾಕ್ಷಸಿ, ಗಾಳಿ ಹಿಡಿದಾಗ ಅದರ ನಿವಾರಣೆಗೆ
೧೪. ಸ್ತ್ರೀಯರ ಸರ್ವರೋಗ ನಿವಾರಣೆಗಾಗಿ
೧೫. ಸುಖಕರ ಪ್ರಸೂತಿಯಾಗಲು
೧೬. ಗರ್ಭವನ್ನು ರಕ್ಷಿಸಲು
೧೭. ಕಂಟಕಗಳಿಂದ ಮುಕ್ತಿ ಪಡೆಯಲು
೧೮. ಕೋರ್ಟು, ಕಛೇರಿ ವ್ಯವಹಾರದಲ್ಲಿ ಜಯಗಳಿಸಲು
೧೯. ಆಸ್ತಿಗಳನ್ನು ವಶಪಡಿಸಿಕೊಳ್ಳಲು
೨೦. ಶ್ರೀಮಂತರಾಗಲು
೨೧. ಪುರುಷ ಮತ್ತು ಸ್ತ್ರೀ ವಶೀಕರಣಕ್ಕಾಗಿ
೨೨. ಕೆಟ್ಟ ಕನಸುಗಳನ್ನು ನಿವಾರಿಸಿಕೊಳ್ಳಲು
೨೩. ದೃಷ್ಟಿ ತಾಗದಿರಲು
೨೪. ಬೆಳೆ ಚೆನ್ನಾಗಿ ಬೆಳೆಯಲು
೨೫. ನಿಧಿಯನ್ನು ವಶಪಡಿಸಿಕೊಳ್ಳಲು
೨೬. ದೆವ್ವ ಪಿಶಾಚಿಗಳನ್ನು ವಶಪಡಿಸಿಕೊಳ್ಳಲು" [೧೦]

ಹೀಗೆ ಇನ್ನು ಹಲವಾರು ರೀತಿಯಲ್ಲಿ ಮಾಟ,ಮಂತ್ರ ಮಾಡಿಸುವ ಪರಂಪರೆಯನ್ನು ಕಾಣುತ್ತೇವೆ. ಮಾಟ, ಮಂತ್ರ, ಮೋಡಿ ಮಾಡುವ ಜನರು ಅಮಾವಾಸ್ಯೆಯ ದಿನ ನಾಲ್ಕು ಗಂಟೆಗೆ ಎದ್ದು ನಿತ್ಯಕರ್ಮಗಳನ್ನು ಮುಗಿಸಿಕೊಂಡು ಸ್ನಾನ ಮಾಡಿ ಮಡಿ ಬಟ್ಟೆಗಳನ್ನುಟ್ಟುಕೊಂಡು ಶಕ್ತಿ ದೇವತೆಗಳ ಮಂದಿರಗಳಿಗೆ ಹೋಗಿ ಪೂಜೆ ಮಾಡಿ "ನಮ್ಮ ನಿತ್ಯ ಕರ್ಮ ಕೆಲಸಕ್ಕೆ ಅಣಿ ಮಾಡಿಕೊಡು ತಾಯಿ, ನಮಗೆ ಬೇಡಿದ ಸಿದ್ಧಿಯನ್ನು ಕಲ್ಪಿಸಿ ಕೊಡು ತಾಯಿ ಎಂದು ಅನ್ಯೋನ್ಯವಾಗಿ ಭಯ ಭಕ್ತಿಯಿಂದ ಬೇಡಿಕೊಳ್ಳುತ್ತಾರೆ". ಶಕ್ತಿ ಮತ್ತು ದೇವಿ ಆರಾಧಕರು ನಮಗೆ "ಈ ಶಕ್ತಿ ದೇವಿಯನ್ನು ಬಿಟ್ಟರೆ ನಮ್ಮದು ಮತ್ತೊಂದು ಕೆಲಸವಿಲ್ಲಿ ಎಂದು ಹೇಳುತ್ತಾರೆ." ಇವರು ಮಂತ್ರಗಳನ್ನು ಒಪಿಸುವುದಕ್ಕಿಂತ ದೇವಿ ಪಾರಾಯಣದಲ್ಲಿಯೇ ಹೆಚ್ಚು ಕಾಲ ಕಳೆಯುತ್ತಾರೆ ಹಾಗೂ ಗ್ರಹಣದ ಸಂದರ್ಭದಲ್ಲಿ ಈ ಮಾಂತ್ರಿಕ ವರ್ಗ ಸರ್ವ ಸಿದ್ಧಿಯನ್ನು ಗಳಿಸುತ್ತಾರೆಂಬ ಪ್ರತೀತಿ ಇದೆ. "ಮಾಂತ್ರಿಕರು ಮೊದಲು ಅತ್ಮ ಶುದ್ಧಿ ಮಾಡಿಕೊಂಡ ನಂತರವೇ ಉಳಿದ ಮಂತ್ರಗಳನ್ನು ಸಿದ್ಧಿಸಿಕೊಳ್ಳುತ್ತಾರೆ. ಅತ್ಮ ಶುದ್ಧಿ ಇಲ್ಲದಿದ್ದರೆ ಯಾವ ಮಂತ್ರವು ಸಿದ್ಧಿಸುವುದಿಲ್ಲಿ ಎಂದು ಹೇಳುತ್ತಾರೆ. ಅತ್ಮ ಶುದ್ಧಿ ಮಾಡಿಕೊಂಡ ನಂತರ ವಶೀಕರಣ, ಉಚ್ಚಾಟನೆ, ವೈರಿನಾಶ, ಜನನಾಶ ಮುಂತಾದ ಅನೇಕ ಸಿದ್ಧಿಗಳನ್ನು ವನಸ್ಪತಿಗಳನ್ನು ಮಂತ್ರಾದಿಗಳಿಂದ ಪಡೆದುಕೊಳ್ಳುತ್ತಾರೆ. ಗ್ರಹಣದ ಸಂದರ್ಭದಲ್ಲಿ ಮಾಂತ್ರಿಕ ಸಿದ್ಧಿ ಪಡೆದುಕೊಳ್ಳಲು ಮೂಗು, ಕಣ್ಣು, ಕಿವಿ, ಮತ್ತು ಮಂತ್ರದ ಪುಸ್ತಕ ಇವೆಲ್ಲವೂ ಏಕಾಕಾರವಾಗಿ ಕಾಣುತ್ತಿದೆಯಂದು ಹೇಳುತ್ತಾರೆ. ಮಂತ್ರ ಸಿದ್ಧಿ ಮಾಡಿಕೊಳ್ಳುವ ಸ್ಥಳ ನಿಶ್ಯಬ್ಧವಾಗಿರಬೇಕು. ನಿರ್ಜನವಾಗಿರಬೇಕು ಮಾಂತ್ರಿಕರು ಗ್ರಹಣದ ಸಂದರ್ಭದಲ್ಲಿ ಅತ್ಮ ಶುದ್ಧಿಗೆ ಮತ್ತು ಅತ್ಮ ರಕ್ಷಣೆಗೆ ಸಂಬಂಧಿಸಿದ ಮಂತ್ರಗಳನ್ನು ನೀರಿನಲ್ಲಿ ಕುಳಿತು ಹೇಳುತ್ತಾರೆ."[೧೧]

ಪಂಚಾಳರಲ್ಲಿ ಅನೇಕರು ಶಕ್ತಿ ಆರಾಧಕರು ಮತ್ತು ಮಾಂತ್ರಿಕ ಸಾಧನೆಯನ್ನು ಪಡೆದಕೊಂಡವರು ಕಂಡು ಬರುತ್ತಾರೆ. ಕಾಳಿ ಮಾಂತ್ರಿಕ ಆಚರಣೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆಂಬ ನಂಬಿಕೆ ಇವರಲ್ಲಿದೆ. ಅನೇಕ ಕಮ್ಮಾರರು ಸಹ ಮಾಂತ್ರಿಕ ಕಾರ್ಯಾಚರಣೆಗಳನ್ನು ಮಾಡುತ್ತಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ. ಇವರು ಪಂಚಾಂಗ ಮತ್ತು ದೈವಿ ಶಕ್ತಿಯ ಪ್ರೇರಣೆ ಹಾಗೂ ಮಂತ್ರ ಸಿದ್ಧಿಗಳನ್ನು ಪ್ರಯೋಗಿಸುವುದು ಕಂಡುಬರುತ್ತದೆ. ಕೊಳ್ಳೆಗಾಲ ಪರಿಸರದಲ್ಲಿ ಹೆಚ್ಚು ಪ್ರಭಾವಿತರಾಗಿರುವ ಕಮ್ಮಾರರು ಮಾಡಿಸಿರುವ ಮಾಟ ಮಂತ್ರಗಳನ್ನು ತೆಗೆಯಲು ಪ್ರಯತ್ನಿಸುತ್ತಾರೆ. ಆದರೆ ಇನ್ನೊಬ್ಬರಿಗೆ ಮಾಟ ಮಾಡುವುದಿಲ್ಲ. ಎಂದು ಹಗ್ಗದ ನಾಗಲಿಂಗಪ್ಪಚಾರ್ಯ ಹೇಳುತ್ತಾರೆ. ಭೂತ ದೆವ್ವ ಅವರಿಸಿಕೊಂಡರೆ ಅವುಗಳನ್ನು ಓಡಿಸಲು ಇವರು ಪ್ರಯತ್ನಿಸುತ್ತಾರೆ.

ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯಲ್ಲಿಯೂ ಮಾಟ, ಮಂತ್ರ ಮಾಡಿಸುವ ಪರಂಪರೆ ಇರುವುದು ಕಂಡು ಬರುತ್ತದೆ. ಆಟಿಕಳಂಜನಿಂದ ಮನೆಗೆ ತಗುಲಿದ ಅನಿಷ್ಟ ದೂರವಾಗುತ್ತದೆಂದು ನಂಬಲಾಗುತ್ತದೆ. ಹೊಟ್ಟೆಯಲ್ಲಿ ಮದ್ದು ಹಾಕಿಸುವವರು ಈ ಪ್ರದೇಶಗಳಲ್ಲಿ ಕಂಡು ಬರುತ್ತಾರೆ. ಭೂತರಾಧನೆಯ ಮೂಲಕ ಮಾಟ ಮಂತ್ರಾದಿಗಳಿಂದಾದ ತೊಂದರೆಗಳನ್ನು ನಿವಾರಿಸಿಕೊಳ್ಳಲು

ಪ್ರಯತ್ನಿಸುತ್ತಾರೆ ಎಂಬ ಹೇಳಿಕೆಗಳಿವೆ. ದೆವ್ವ ಭೂತ ಹಿಡಿದುಕೊಂಡವರನ್ನು ಧರ್ಮಸ್ಥಳಕ್ಕೆ ಕರೆದುಕೊಂಡು ಹೋದರೆ ಅವು ಅಲ್ಲಿಂದ ದೂರ ಓಡಿ ಹೋಗುತ್ತವೆ. ಎಂಬ ಪರಿಕಲ್ಪನೆ ಇವರಲ್ಲಿದೆ. ಅಂದರೆ ಈ ಪ್ರದೇಶದ ಕಮ್ಮಾರರಲ್ಲಿ ತಾಂತ್ರಿಕ ವಿದ್ಯೆ ಪಡೆದುಕೊಂಡು ಮಾಟ ಮಂತ್ರ ಮಾಡುವವರು ಕಂಡು ಬಂದಿಲ್ಲ.

**ಅಡಿಟಿಪ್ಪಣಿಗಳು:**

೧ ಭಾನುಮತಿ ವೈಸಿ ೨೦೦ ಪು ೨೬ ಮತ್ತು ೩೦

೨ ಹರಿಲಾಲ ಪವಾರ, ಜನಪದ ಗಂಗೋತ್ರಿ ಸ.೯ ನಂ.೩ ಪುಟ೨೯

೩ ವಾಸುದೇವ ಬಡಿಗೇರ.೧೯೯೭, ಪು. ೭೮.

೪ ಆರ್ ಬಿ ಕುಮಾರ್, ೨೦೦೪, ಪು.೪೦ ಮತ್ತು ೪೧

೫ ಅದೇ ಪು.೪೪

೬. ಆರ್.ಬಿ.ಕುಮಾರ್-೨೦೦೦-ಪುಟ ೮೧

೭ ರುದ್ರಪ್ಪ ಕರಿಶೆಟ್ಟಿ ೧೯೯೫, ಪುಟ ೫೬

೮ ಗಂಗಾಧರ ದೈವಜ್ಞ ೨೦೦೮, ಪುಟ, ೨೧೨

೯ ಗಂಗಾಧರ ದೈವಜ್ಞ ೨೦೦೩ ಪು.೧೫೪

೧೦ ಸ.ಚಿ ರಮೇಶ, ೨೦೦೩, ಪು.೧೧೧ ಮತ್ತು ೧೧೨

೧೧ ಗಂಗಾಧರ ದೈವಜ್ಞ ೨೦೦೩, ಪುಟ ೧೫೬ ಮತ್ತು ೧೫೭

## ಕಮ್ಮಾರರ ಆಚರಣೆಗಳು

**೪.೧ ವಾರ್ಷಿಕಾವರ್ತನ ಆಚರಣೆಗಳು:**

ಮಾನವನು ಹುಟ್ಟಿನಿಂದ ಸಾಯುವವರಿಗೆ ಆಚರಿಸಿಕೊಳ್ಳುವ ವಿಧಿ-ವಿಧಾನಗಳನ್ನು ಜೀವನಾವರ್ತನ ಆಚರಣೆಗಳೆಂದು ಗುರುತಿಸಿದ್ದಾರೆ. ಇಲ್ಲಿ ಮಾನವ ತಾನು ನಂಬಿ ಬದುಕುವ ಸಂಸಾರಿಕ ವ್ಯವಸ್ಥೆಯ ಸುರಕ್ಷತೆಗಾಗಿ ಆಚರಿಸಿಕೊಳ್ಳುತ್ತಿದ್ದರೆ ಇಡೀ ಸಮುದಾಯವನ್ನು ಕಾಯುವ ದೈವಗಳ ಸಂತೃಪ್ತಿಗಾಗಿ ವಾರ್ಷಿಕಾವರ್ತನೆ ಆಚರಣೆಗಳನ್ನು ಆಚರಿಸುತ್ತಾನೆ. ಕಮ್ಮಾರರ ಜೀವನಾವರ್ತನ ಆಚರಣೆಗಳನ್ನು ಮೂರನೆಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಪ್ರತಿಯೊಂದು ಸಮುದಾಯ ತನ್ನದೇ ಆದ ಕುಲದೈವಗಳನ್ನು ಆರಾಧ್ಯ ದೈವಗಳನ್ನು ಹೊಂದಿರುತ್ತದೆ. ಈ ದೈವಗಳನ್ನು ಒಲಿಸಿಕೊಳ್ಳಲು ನಿರ್ದಿಷ್ಟವಾದ ಆಚರಣೆ ಸಂಪ್ರದಾಯಗಳನ್ನು ಪರಂಪರಾನುಗತವಾಗಿ ತಮ್ಮದೇ ಆದ ಕ್ರಮದಲ್ಲಿ ಆರಾಧಿಸುತ್ತಾ ಬಂದಿರುತ್ತಾರೆ. ಇವರು ಆರಾಧಿಸುತ್ತಿರುವ ದೈವಗಳನ್ನು ಕುರಿತು ಅನೇಕ ನಂಬಿಕೆ, ಸಂಪ್ರದಾಯ, ಆಚರಣೆ, ಹಬ್ಬಗಳು, ವಿಧಿ-ನಿಷೇಧಗಳು ಇರುತ್ತವೆ. ದೈವಗಳನ್ನು ಸ್ಥಾಪಿಸುವುದು, ಪೂಜಿಸುವುದು ಅವುಗಳನ್ನು ಕುರಿತು ನಂಬಿಕೆಗಳನ್ನು ಇಟ್ಟು ಕೊಳ್ಳುವುದು ಮತ್ತು ಅನೇಕ ವಿಧಿ-ನಿಷೇಧಗಳು ಇದ್ದೇ ಇರುತ್ತವೆ. ಜಗತ್ತಿನ ಎಲ್ಲಾ ಸಮುದಾಯಗಳು ದೇವರನ್ನು ಒಲಿಸಿಕೊಳ್ಳುವುದಕ್ಕಾಗಿ ದೈವಕ್ಕೆ ಸಂಬಂಧಿಸಿದ ಹಬ್ಬಗಳನ್ನು ಆಚರಿಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ.

"ಹಬ್ಬ" ಎನ್ನುವ ಶಬ್ದ ಸಂಸ್ಕೃತದ ಪರ್ವನ್ ಪದದ ತದ್ಭವ ಪರ್ವವಾಗಿದೆ. ಪರ್ವ ಎಂದರೆ ಇನ್ನೊಂದರ ಜೊತೆಯಲ್ಲಿ ಸಂಧಿಸುವುದು ಎಂದು ಅರ್ಥ. ಸಂಪ್ರದಾಯಗಳು ಮತ್ತು ಆಚರಣೆಗಳು ಹಬ್ಬಗಳಿಗೆ ಪ್ರೇರಕಗಳಾಗಿವೆ. ಸಾಂಪ್ರದಾಯಗಳ ನೆಲೆಯಲ್ಲಿ ಪೂಜೆಯು ಜನರ ಸಾಮಾಜಿಕ ಚಲನ ಶೀಲತೆಯ ಒಂದು ಹಬ್ಬವಾಗಿದೆ ಮತ್ತು ಜೀವಂತಿಕೆಯನ್ನು ವಿಶೇಷವಾದ ಕೊಡುಗೆಯನ್ನು ನೀಡಿವೆ ಎಂದು ಹೇಳಬೇಕಾಗುತ್ತದೆ.

ಕಮ್ಮಾರರು ಮೂಲತಃ ಮಾತೃ ಪ್ರಧಾನ ಸಂಸ್ಕೃತಿಯಲ್ಲಿ ಬೆಳೆದ ದ್ರಾವಿಡ ಮೂಲದ ಸಮುದಾಯವಾಗಿದೆ. ಇವರ ಕುಲದೈವ ಕಾಳಮ್ಮ. ಮಾತೃದೇವತೆಯ ಕಟ್ಟಾ ಆರಾಧಕರು. ಪುರುಷ

ದೈವಗಳಲ್ಲಿ ಶಿವ, ವಿಶ್ವಕರ್ಮ, ವೀರಭದ್ರ, ತಿಂಥಣಿ ಮೌನೇಶ, ಮಂಜುನಾಥನನ್ನು ಇವರು ಆರಾಧಿಸುವುದು ಕಂಡು ಬರುತ್ತದೆ. ಶಿವೆ ಶಿವ ಇವರ ಪರಿವಾರ ದೇವತೆಗಳನ್ನು ಹೆಚ್ಚಿನ ರೀತಿಯಲ್ಲಿ ಆರಾಧನೆ ಮಾಡುವುದನ್ನು ಕಮ್ಮಾರರಲ್ಲಿ ಕಾಣುತ್ತೇವೆ. ಪ್ರತಿಯೊಂದು ಗ್ರಾಮದಲ್ಲಿ ದ್ಯಾಮವ್ವ, ದುರುಗವ್ವ, ಗ್ರಾಮದೇವತೆ ಮುಂತಾದ ಹೆಸರುಗಳಿಂದ ಕರೆಯಿಸಿಕೊಳ್ಳುವ ಜನಪದ ಮಾತೃದೇವತೆಗಳನ್ನು ಇವರು ಆರ್ಚಕರಾಗಿ ಪೂಜಿಸುವುದು ಹಾಗೂ ಆರಾಧಿಸುವುದುಂಟು. ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಈ ಎಲ್ಲ ದೈವಗಳ ಆಚರಣೆಯ ಜೊತೆಗೆ ಭೂತಗಳ ಆಚರಣೆ, ಆರಾಧನೆ ಮಾಡುವುದು ಕಂಡು ಬರುತ್ತದೆ. ಕೊಳ್ಳೆಗಾಲ ಪರಿಸರದ ಕಮ್ಮಾರರು ಕಾಳಮ್ಮ ವಿಶ್ವಕರ್ಮನ ಜೊತೆಗೆ ಸಿದ್ದಪ್ಪಾಜಿ, ರಾಚಪ್ಪಾಜಿ, ಮಂಟೇಸ್ವಾಮಿಯನ್ನು ಆರಾಧಿಸುವುದು ಕಂಡು ಬರುತ್ತದೆ. ಕಮ್ಮಾರರು ಪ್ರಕೃತಿ ಆರಾಧನೆಯನ್ನು ಮಾಡುವುದನ್ನು ಕಾಣುತ್ತೇವೆ. ಬನ್ನಿಮರ, ತುಳಸಿಗಿಡ, ಸೂರ್ಯ, ಚಂದ್ರ, ಅರಳೀಮರ, ಬೇವಿನಮರ, ಬಿಲ್ವಪತ್ರಿಮರ, ನಾಗಪೂಜೆ ಮುಂತಾದವುಗಳಿಗೆ ಪೂಜೆ ಸಲ್ಲಿಸುತ್ತಾರೆ. ಕಮ್ಮಾರರು ತಮ್ಮ ವೃತ್ತಿಯ ಮೂಲಕ ಸರ್ವಧರ್ಮ ಸಮನ್ವಯತೆಯನ್ನು ಕಂಡು ಕೊಂಡವರು. ತಾವು ಆರಾಧಿಸುವ ದೈವಗಳ ಜೊತೆಗೆ ಇತರೆ ಸಮುದಾಯದ ಜನರು ಆರಾಧಿಸುವ ಎಲ್ಲಾ ದೈವಗಳನ್ನು ಪ್ರೀತಿಯಿಂದ ಪೂಜಿಸುವುದನ್ನು ಕಾಣುತ್ತೇವೆ. ಕಮ್ಮಾರರು ಸಮುದಾಯದ ಒಳಗೆ ಮತ್ತು ಹೊರಗೆ ಮೇಲು ಕೀಳು ಎಂಬ ಭಾವನೆಯನ್ನು ಹೊಂದಿಲ್ಲ ಎಂಬುದನ್ನು ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದ್ದೇನೆ.

ಕಮ್ಮಾರರು ಮುಖ್ಯವಾಗಿ ಕಾಳಿಯನ್ನೇ ನಂಬಿದವರು. ಕಾಳಿಯನ್ನೇ ಬೆಂಕಿ ಹಾಗೂ ಕಬ್ಬಿಣ ಎಂದೂ ಪೂಜಿಸುತ್ತಾ ಬಂದಿರುವವರು. ಬೆಂಕಿ ಹಾಗೂ ಕಬ್ಬಿಣದ ಮೂಲಕವೇ ತಮ್ಮ ಅಸ್ಥಿತ್ವವನ್ನು ಕಂಡು ಕೊಂಡವರು. ಹೀಗಾಗಿ ಕಮ್ಮಾರರು ವರ್ಷದುದ್ದಕ್ಕೂ ಆಚರಿಸುವ ಆಚರಣೆ ಸಂಪ್ರದಾಯಗಳೆಲ್ಲ ಕಾಳಿಯನ್ನು ಕೇಂದ್ರೀಕರಿಸಿಕೊಂಡು ಆಚರಿಸುವ ಹಬ್ಬಗಳಾಗಿರುವುದು ವಿಶೇಷವಾಗಿ ಕಂಡು ಬರುತ್ತದೆ. ಇವರು ಕಾಳಿಗೆ ಮೊದಲನೆಯ ಸ್ಥಾನವನ್ನು ನೀಡಿದ್ದಾರೆ. ವೃತ್ತಿ ದೈವವಾಗಿರುವ ವಿಶ್ವಕರ್ಮನಿಗೆ ಎರಡನೆಯ ಸ್ಥಾನವನ್ನು ನೀಡಿದ್ದಾರೆ ಎಂದು ಗ್ರಹಿಸಬಹುದು. ಕೆಲ ಮಾಹಿತಿದಾರರ ಪ್ರಕಾರ ಕಾಳಮ್ಮ ಮತ್ತು ವಿಶ್ವಕರ್ಮ ಇಬ್ಬರು ಮೊದಲನೆಯ ಆದ್ಯತೆಯ ದೈವಗಳು ಎಂದು ಹೇಳುತ್ತಾರೆ. ಕಮ್ಮಾರರು ತಮ್ಮ ಕುಲದೇವತೆ ಹಾಗೂ ವೃತ್ತಿ ದೈವಗಳನ್ನು ಪ್ರಮುಖವಾಗಿ ಆರಾಧಿಸುವುದು ಕಂಡು ಬರುತ್ತದೆ.

"ಜನಪದ ಸಂಸ್ಕೃತಿಗೆ ಆಚರಣೆಯೇ ಬೆನ್ನುಲಬು. ಆಚರಣೆ ಇಲ್ಲದೇ ಯಾವ ದೈವವೂ ಅಸ್ಥಿತ್ವವೂ ಇಲ್ಲ. ಈ ಆಚರಣೆ ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ವ್ಯಕ್ತಿಯಿಂದಲೇ ಆಗಬೇಕಾದದ್ದು, ದೇವತೆಗಳಿಗೂ ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಣೆಗಳೇ ಆಚರಣೆಗಳು. ಈ ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ ನಂಬಿಕೆ. ಆಚರಣೆಯ ಬೆನ್ನೆಲುಬು. ನಂಬಿಕೆಯು ಸಿದ್ಧಾಂತ ಆಚರಣೆಯನ್ನು

ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆ ಹುಟ್ಟುವ ಮುನ್ನ ಅಥವಾ ನಂತರ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಪುರಾಣ ಕಥೆ ಮರೆತು ಹೋದ ಸಂದರ್ಭದಲ್ಲೂ ಯಾವುದೇ ಆತಂಕವಿಲ್ಲದೇ ಆಚರಣೆಗಳು ಮುಂದುವರೆಯುತ್ತಾ ಹೋಗುವುದನ್ನು ಕಾಣುತ್ತೇವೆ."[೧]

**೪.೧.೧ ಹಬ್ಬಗಳು:**

ಕಮ್ಮಾರರು ಹಿಂದೂ ಸಂಸ್ಕೃತಿಯ ಎಲ್ಲಾ ಹಬ್ಬಗಳನ್ನು ಆಚರಿಸುತ್ತಿರುವುದು ಕಂಡುಬರುತ್ತದೆ. ಪ್ರತಿ ಅಮವಾಸ್ಯೆ, ಹುಣ್ಣಿಮೆಗಳನ್ನು ಆಚರಿಸುವುದುಂಟು. ಕಮ್ಮಾರರು ಆಧುನಿಕತೆಗೆ ಮುಖಾ ಮುಖಿಯಾಗುತ್ತಿದ್ದರೂ ಹಬ್ಬಗಳ ಆಚರಣೆಗಳು ಮಾತ್ರ ಕಡಿಮೆಯಾಗಿಲ್ಲ. ಅನೇಕ ಹಬ್ಬಗಳಿಗೆ ಆಧುನಿಕತೆಯ ಸ್ಪರ್ಷ ನೀಡಿರುವುದನ್ನು ಕಾಣುತ್ತೇವೆ. ಎಂತಹ ಕಷ್ಟದ ಸ್ಥಿತಿ ಗತಿಗಳು ಬಂದರೂ ಹಬ್ಬಗಳನ್ನು ಆಚರಿಸದೇ ಇವರು ಇರುವುದಿಲ್ಲ. ಇತರೆ ಯಾವುದೇ ಕಾರ್ಯಗಳನ್ನು ನಿರ್ವಹಿಸಲು ಇವರಿಗೆ ಹಣದ ಕೊರತೆ ಉಂಟಾಗುತ್ತದೆ. ಆದರೆ ಹಬ್ಬ ಜಾತ್ರೆಗಳನ್ನು ಆಚರಿಸುವಾಗ ಆರ್ಥಿಕ ಸಹಾಯ ಹೇಗೊ ನಮಗೆ ಬಂದೊದಗುತ್ತದೆ ಎಂದು ಹೇಳುತ್ತಾರೆ. ಇವರು ತಮ್ಮ ಆರಾಧ್ಯ ದೈವಗಳನ್ನು ಒಲಿಸಿಕೊಳ್ಳಲು ಮಾಡುವ ಪ್ರಯತ್ನಗಳನ್ನೇ ಅವರ ಹಬ್ಬದ ಆಚರಣೆಗಳಲ್ಲಿ ಕಾಣುತ್ತೇವೆ. ಕಮ್ಮಾರರು ತಮ್ಮ ಬದುಕಿನ ಎಲ್ಲಾ ಕಷ್ಟ ಸುಖಗಳಿಗೆ ದೇವರೆ ಕಾರಣ ಎಂಬ ಪರಿಕಲ್ಪನೆ ಅವರಲ್ಲಿದೆ. ಜೀವನ ನಿರ್ವಹಣೆಗಾಗಿ ವರ್ಷದುದ್ದಕ್ಕೂ ದುಡಿಯುವ ಕೈಗಳಿಗೆ ಬಿಡುವೇ ಇರುವುದಿಲ್ಲ. ಹಬ್ಬ ಹರಿದಿನಗಳ ನೆಪದಲ್ಲಿ ದೇವರನ್ನು ಆರಾಧಿಸುವ ಮೂಲಕ ವರ್ಷದ ಕೆಲ ದಿನಗಳನ್ನು ಸುಖ ಸಂತೋಷಗಳಿಂದ ಕಳೆಯುವುದನ್ನು ಕಮ್ಮಾರರಲ್ಲಿ ಕಾಣುತ್ತೇವೆ.

**೪.೧.೧.೧ ಯುಗಾದಿ:**

ಕಮ್ಮಾರರಿಗೆ ಯುಗಾದಿ ಅತ್ಯುತ್ತಮವಾದ ಮತ್ತು ವಿಶೇಷ ಆಚರಣೆಯುಳ್ಳ ಹಬ್ಬವಾಗಿರುವುದು ಕಂಡು ಬರುತ್ತದೆ. ಯುಗಾದಿ ಭಾರತೀಯ ಸಂಸ್ಕೃತಿಯಲ್ಲಿ ವರ್ಷದ ಮೊದಲ ದಿನ. ಯುಗಾದಿ ಹಿಂದೂಗಳಿಗೆ ದೊಡ್ಡ ಹಬ್ಬ. ಯುಗ ಅಂದರೆ ವರ್ಷ. ಆದಿ ಅಂದರೆ ಆರಂಭ. ವರ್ಷದ ಆರಂಭದ ದಿನ. ಯುಗಾದಿಯ ಆಚರಣೆ ಸುಮಾರು ೨೦೦೦ ವರ್ಷಗಳ ಹಿಂದಿನಿಂದಲೂ ಆಚರಿಸುತ್ತಿದ್ದರೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಯುಗಾದಿ ಆಚರಣೆಯನ್ನು ಎಲ್ಲಾ ಜನಾಂಗಗಳು ಆಚರಿಸುವುದನ್ನು ಕಾಣುತ್ತೇವೆ. ಯುಗಾದಿಯಿಂದಲೇ ವರ್ಷ, ಋತು, ಮಾಸ, ಪಕ್ಷ, ತಿಥಿ, ನಕ್ಷತ್ರ, ಯೋಗ, ಕರುಣಾದಿಗಳಾದಿಯಾಗಿ ಬರುವ ಹೊಸ ದಿನ. ನಿಸರ್ಗದಲ್ಲಿಯ ಗಿಡ ಮರಗಳೆಲ್ಲ ಚಿಗಿತು ಯುಗಾದಿ ವಸಂತಮಾಸವನ್ನು ಸಂಭ್ರಮ ಸಂತಸದಿಂದ ಸ್ವಾಗತಿಸಲು ಸಿದ್ಧವಾಗಿರುತ್ತವೆ. ರೈತ ಹೊಲದಲ್ಲಿ ಬೆಳೆದ ಬೆಳೆಯನ್ನೆಲ್ಲ ಮನೆಯಲ್ಲಿ ತುಂಬಿಸಿ ಸಂತೋಷದಿಂದ ಯುಗಾದಿಯ ಬರುವಿಕೆಯನ್ನು ನಿರೀಕ್ಷಿಸುತ್ತಿರುತ್ತಾನೆ. ಈ ಯುಗಾದಿಯನ್ನು ವಿಶ್ವಕರ್ಮರು ವಿಶಿಷ್ಟವಾಗಿ ಆಚರಿಸುವುದನ್ನು ಕಾಣುತ್ತೇವೆ.

ಭಾರತದಲ್ಲಿ ವಿಶೇಷವಾಗಿ ಶಕ್ತಿ ಆರಾಧನೆಯನ್ನು ನವರಾತ್ರಿಯಲ್ಲಿ ಅತ್ಯಂತ ವಿಶಿಷ್ಟವಾಗಿ ಆಚರಿಸಿದರೆ ವಿಶ್ವಕರ್ಮರು ಕಮ್ಮಾರರು ಈ ಶಕ್ತಿದೇವಿಯನ್ನು ಯುಗಾದಿಯಂದು ಉತ್ತರ ಕರ್ನಾಟಕದವರು ಶಿರಸಂಗಿಯಲ್ಲಿ, ಕೊಳ್ಳೆಗಾಲ, ದಕ್ಷಿಣ ಕನ್ನಡ, ಹಾಗೂ ಉಡುಪಿ ಜಿಲ್ಲೆಯಲ್ಲಿರುವ ವಿಶ್ವಕರ್ಮರು ತಮ್ಮ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಕಾಳಿಕಾಂಬಾ ದೇವಸ್ಥಾನಗಳಲ್ಲಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಕಮ್ಮಾರರು ಅಥವಾ ವಿಶ್ವಕರ್ಮರು ವಿಜಯಿಗಳಾದಂತೆ ಕಂಡು ಬರುತ್ತಾರೆ. ಶಕ್ತಿ ದೇವತೆಯನ್ನು ವಿಶ್ವಕರ್ಮರನ್ನು ಹೊರತುಪಡಿಸಿ ಇತರೆ ಸಮುದಾಯದವರು ನವರಾತ್ರಿಯಲ್ಲಿ ವಿಶೇಷ ಪೂಜೆ ಸಲ್ಲಿಸಿದರೆ, ವಿಶ್ವಕರ್ಮರು ಯುಗಾದಿಯಲ್ಲಿ ಈ ಶಕ್ತಿ ದೇವತೆಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಇದರ ವೈಶಿಷ್ಟ್ಯತೆಯನ್ನು ಮತ್ತು ಹಿನ್ನೆಲೆಯನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಿದಾಗ "ಈ ಕಾಳಿಯಿಂದಲೇ ವಿಶ್ವ ಸೃಷ್ಟಿಯಾಯಿತು.ಈ ಜಗತ್ತು ಕಾಳಿಯ ಗರ್ಭದಲ್ಲಿ ಅಡಗಿಕೊಂಡಿದೆ. ಈ ಜಗತ್ತನ್ನು ಸೃಷ್ಟಿಸಿದ ಅವಳೇ ಇದನ್ನು ಆಳುತ್ತಾಳೆ. ಈ ವಿಶ್ವ ಅವಳ ನಿಯಂತ್ರಣದಲ್ಲಿದೆ. ವಿಶ್ವದ ಕಾಲಚಕ್ರ ಅವಳ ಆಧೀನದಲ್ಲಿರುತ್ತದೆ. ಅದು ತನ್ನ ಚಲನೆಯನ್ನು ಯುಗಾದಿಯಂದು ಆರಂಭಿಸುತ್ತದೆ. ಈ ಕಾಲ ಪ್ರತೀ ವರ್ಷವೂ ಚಲಿಸಬೇಕಾದರೆ ಅದು ಕಾಳಿಯ ಅನುಮತಿ ಪಡೆಯಲೇಬೇಕು. ಕಾಳಿ ಕಾಲಕ್ಕೆ ಚಲಿಸಲು ಅನುಮತಿ ನೀಡುವ ದಿನವನ್ನೇ ವಿಶ್ವಕರ್ಮರು ಯುಗಾದಿ, ಹೊಸ ವರ್ಷದ ಆರಂಭದ ದಿನ ಎಂದು ಆಚರಿಸುತ್ತಾರೆ. ಹೊಸ ಋತು, ಮಾಸ, ಪಕ್ಷ, ತಿಥಿ, ನಕ್ಷತ್ರಗಳು ಅಂದೇ ಆರಂಭವಾಗುತ್ತದೆ. ಈ ಕಾಲಚಕ್ರಕ್ಕೆ ಒಂದು ವರ್ಷದ ಅವಧಿಯವರೆಗೆ ಚಲಿಸಲು ಕಾರಣೀಭೂತಗಳಾದ ಕಾಳಿಯ ಆರಾಧನೆಯನ್ನು ಅನೇಕ ಆಚರಣೆಗಳ ಮೂಲಕ ವಿಶ್ವಕರ್ಮರು ಆಚರಿಸುವುದನ್ನು ಕಾಣುತ್ತೇವೆ. ಕಾಳಿಯಿಂದಲೇ ಅಥವಾ ಬೆಂಕಿಯಿಂದಲೇ ತಮ್ಮ ಅಸ್ತಿತ್ವ ಕಂಡು ಕೊಂಡಿರುವ ವಿಶ್ವಕರ್ಮರಿಗೆ ಈ ದಿನ ಅತ್ಯಂತ ಸಂಭ್ರಮದ ದಿನವಾಗಿದೆ."

"ಕಾಳಿ" ಮೊದಲು ಆ ನಂತರ "ಕಾಲ" ಎಂಬ ಪರಿಕಲ್ಪನೆಯಲ್ಲಿ ಕಾಳಿ ದೇವತೆ ಯುಗಾದಿಯಂದು ವಿಶಿಷ್ಟವಾಗಿ ಪೂಜೆಗೊಳ್ಳುತ್ತಾಳೆ. ಕಾಳಿ ಕೇವಲ ಕಾಲಕ್ಕೆ ಮಾತ್ರ ಆಧಿದೇವತೆ ಅಲ್ಲ. ಅವಳು ಎಲ್ಲಾ ದೇವಾನುದೇವತೆಗಳಿಗೆ ನಿಸರ್ಗದಲ್ಲಿಯ ಪ್ರತಿಯೊಂದು ವಸ್ತುಗಳಿಗೆ ಅವಳು ಅಧಿದೇವತೆ ಎಂದು ಪೂಜಿಸಲ್ಪಡುತ್ತಾಳೆ. ಹೀಗಾಗಿ ವಿಶ್ವಕರ್ಮರು ಯುಗಾದಿಯಂದು ಎಲ್ಲಾ ಹೊಸ ವಸ್ತಗಳನ್ನು ಅವಳಿಗೆ ಅರ್ಪಿಸುತ್ತಾರೆ. ಕಾಲಮಾನಕ್ಕೆ ತಕ್ಕಂತೆ ಮಳೆಯಾಗದೆ ಬೆಳೆ ಬಾರದೆ ಹೋದರೆ ಜನ ತತ್ತರಿಸುತ್ತಾರೆ ಮತ್ತು ಎಲ್ಲಿ ನೋಡಿದಲ್ಲೆಲ್ಲ ಆಹಾಕಾರ. ಇದರಿಂದ ನಾಡಿನ ತುಂಬೆಲ್ಲಾ ಕೊಲೆ, ಸುಲುಗೆ, ದರೋಡೆಗಳು ಅತಿಯಾಗಿರುತ್ತವೆ. ಅದಕ್ಕಾಗಿ ಜನರು "ಈ ವರ್ಷದ ಕಾಲಮಾನ ಬಹಳ ಕೆಟ್ಟಿದೆ" ಎಂದು ಹೇಳುತ್ತಾರೆ. ಕಾಳಿ ಕಾಲಚಕ್ರಕ್ಕೆ ಒಂದು ವರ್ಷದ ಅವಧಿಯೊಳಗೆ ವಿಶ್ವ ಮತ್ತು ಜನರ ಮೇಲೆ ಎಂತೆಂಥಹ ಪರಿಣಾಮಗಳನ್ನು ನೀನು ಬೀರಬೇಕು ಎಂಬುದನ್ನು ಅವಳು ಅದಕ್ಕೆ ಸೂಚಿಸಿ ಕಳುಹಿಸಿದ ದಿನವೇ ಚೈತ್ರಶುದ್ಧ ಪ್ರತಿಪದ. ಅಂದು ಕಾಳಿಯನ್ನು ಶ್ರದ್ಧೆ ಭಕ್ತಿಯಿಂದ ಆರಾಧಿಸಿದರೆ ಅವಳು ಜಗತ್ತಿಗೆ, ಜನತೆಗೆ ಮಂಗಳಕರವಾಗುವ ರೀತಿಯಲ್ಲಿ ನೀನು ನಡೆದುಕೊಳ್ಳಬೇಕು

ಎಂದು ಕಾಲಚಕ್ರಕ್ಕೆ ಆದೇಶ ಮಾಡುತ್ತಾಳೆ. ಉತ್ಪಾದನೆ ವ್ಯವಸ್ಥೆಯಲ್ಲಿ ಫಲವಂತಿಕೆ ನೀಡುವಲ್ಲಿ ಪ್ರಮುಖಳಾದ ಇವಳ ಆರಾಧನೆಯನ್ನು ವರ್ಷದ ಆರಂಭದಲ್ಲಿಯೇ ಮಾಡಿದರೆ ಮಳೆ, ಬೆಳೆ ಸಮೃದ್ಧವಾಗಿರುತ್ತದೆ ಎಂಬ ಪರಿಕಲ್ಪನೆಯಲ್ಲಿ ಈ ಶಕ್ತಿ ದೇವತೆಯ ಆರಾಧನೆ ಅಂದು ನಡೆಯುತ್ತದೆ. ಯುಗಾದಿಯ ದಿನ ಚೈತ್ರಶುದ್ಧ ಪ್ರತಿಪದೆಯಂದು ಕಾಳಿಯು ಕಾಲ ಚಕ್ರಕ್ಕೆ ಒಂದು ಸಂವತ್ಸರದವರೆಗೆ ನಿಭಾಯಿಸುವ ಎಲ್ಲ ಕಾರ್ಯಗಳ ಬಗೆಗೆ ತಿಳುವಳಿಕೆ ನೀಡಿ ಅಂದೇ ರಾಕ್ಷಸರ ಸಂಹಾರಕ್ಕೆ ಹೋಗುತ್ತಾಳೆ ಎಂಬ ಪರಿಕಲ್ಪನೆ ವಿಶ್ವಕರ್ಮರಲ್ಲಿದೆ.

ಯುಗಾದಿ ಅಮಾವಾಸ್ಯೆಯ ದಿನ ಸಾಮಾನ್ಯವಾಗಿ ವಿಶ್ವಕರ್ಮರೆಲ್ಲರೂ ಕಾಳಿಗೆ ಹೊಸ ಗೋಧಿಯನ್ನು ಅರ್ಪಿಸುವ ಸಂಪ್ರದಾಯವಿರುವುದನ್ನು ಕಾಣುತ್ತೇವೆ. ಕರ್ನಾಟಕದ ಎಲ್ಲ ವಿಶ್ವಕರ್ಮರಿಗೆ ಮೂಲ ಶಕ್ತಿ ಪೀಠ ಶಿರಸಂಗಿ. ಅನೇಕರು ಯುಗಾದಿಗೆ ಶಿರಸಂಗಿಗೆ ಬರುವ ಸಂಪ್ರದಾಯವನ್ನು ಬೆಳೆಸಿಕೊಂಡಿದ್ದಾರೆ. ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯಲ್ಲಿರುವ ವಿಶ್ವಕರ್ಮರು ಮಂಗಳೂರು ಹಾಗು ತಮ್ಮ ಸುತ್ತಮುತ್ತಲಿರುವ ಕಾಳಿಕಾಂಬೆಗೆ ಹೊಸ ಗೋಧಿಯನ್ನು ಅರ್ಪಿಸುತ್ತಾರೆ.

ಯುಗಾದಿಯ ಅಮವಾಸ್ಯೆಯ ದಿನ ಮನೆಯನ್ನೆಲ್ಲ ಸಾರಿಸಿ ರಂಗೋಲಿ ಹಾಕಿ ಹಸಿರು ತಳಿರು ತೋರಣಗಳಿಂದ ಅಲಂಕರಿಸುತ್ತಾರೆ. ಕುಲುಮೆಗಳನ್ನು ಸ್ವಚ್ಛಗೊಳಿಸಿ ಅದಕ್ಕೆ ಸುಣ್ಣ ಬಣ್ಣ ಹಚ್ಚಿ ಅದರ ಮುಂದಿನ ಭಾಗವನ್ನು ಸಗಣಿಯಿಂದ ಸಾರಿಸಿ ರಂಗೋಲಿ ಹಾಕಿ ಕುಲುಮೆಗೆ ಮಾವಿನ ಎಲೆಯ ತೋರಣ ಕಟ್ಟುತ್ತಾರೆ. ಮಾರನೆಯ ದಿನ ಮನೆಯ ಮುಂದಿನ ಬಾಗಿಲಿಗೆ ಬೇವಿನ ಟೊಂಗೆಗಳನ್ನು ಹೊಸ ಗೋಧಿಯ ಹೊಡೆಯನ್ನು ಕಟ್ಟುತ್ತಾರೆ. ಈ ದಿನ ಬೆಳಿಗ್ಗೆ "ರತ್ನ ಪಕ್ಷಿಯ" ದರ್ಶನವಾದರೆ ಶುಭದಿನ ಎಂದು ಇವರ ಅನಿಸಿಕೆ. ಅಂದು ಎಲ್ಲರೂ ಸೂರ್ಯೋದಯ ವೀಕ್ಷಿಸಿ ಸೂರ್ಯದೇವನಿಗೆ ನಮಸ್ಕರಿಸುತ್ತಾರೆ. ಅಮವಾಸ್ಯೆಯ ದಿನ ಬೀಸುಕಲ್ಲು ಒಳಕಲ್ಲು, ತೊಳೆದು ಅವುಗಳಿಗೆ ಸುಣ್ಣ ಹಾಗು ಕೆಂಪು ಮಣ್ಣಿನಿಂದ ಪಟ್ಟಿ ಬರೆಯುತ್ತಾರೆ. ಅವುಗಳ ಮುಂದೆ ತಳಿರು ಇಟ್ಟು ಎಲೆ, ಅಡಿಕೆ, ಗೋಧಿ ಹಾಕಿ ಉಡಿ ತುಂಬುತ್ತಾರೆ. ಮನೆಯವರೆಲ್ಲ ಬೇವು ಸೇರಿಸಿದ ನೀರಿನಿಂದ ಎಣ್ಣೆ ಸ್ನಾನ ಮಾಡುತ್ತಾರೆ. ಅಮವಾಸ್ಯೆಯಿಂದ ಪಂಚಮಿಯವರೆಗೆ ಕುಲುಮೆಯಲ್ಲಿ ಯಾವ ಕೆಲಸಗಳನ್ನು ಮಾಡುವುದಿಲ್ಲ. ಕಮ್ಮಾರಿಕೆಗೆ ಉಪಯೋಗಿಸುವ ಎಲ್ಲಾ ವಸ್ತುಗಳನ್ನು ತೊಳೆದು ಅವುಗಳನ್ನು ಕುಲುಮೆಯ ಮುಂದೆ ಇಟ್ಟು ಪೂಜೆ ಸಲ್ಲಿಸುತ್ತಾರೆ. "ಕಳಸಪಂಚಮಿ" ವಿಸರ್ಜನೆಯಾಗುವವರೆಗೆ ಬೀಸುವ, ಕುಟ್ಟುವ ಹಾಗು ವೃತ್ತಿಗೆ ಸಂಬಂಧಿಸಿದ ಯಾವುದೇ ಕೆಲಸವನ್ನು ನಿರ್ವಹಿಸಬಾರದೆಂಬ ನಿಯಮ ಇವರಲ್ಲಿದೆ. ಅಮವಾಸ್ಯೆಯ ಮಾರನೆಯ ದಿನ ಹೊಸ ಗೋಧಿಯ ಪಾಯಸ, ಹೋಳಿಗೆ, ಕರಿಗಡಬು, ಬೇವು ಬೆಲ್ಲ ತಯಾರಿಸಿ ಕಾಳಮ್ಮನಿಗೆ, ಕುಲುಮೆಗೆ ನೈವೇದ್ಯ ಮಾಡುತ್ತಾರೆ. ಚಿನ್ನದ ಕೆಲಸ ಮಾಡುವವರು ಅಂದು ಹೊಸ ಅಗ್ಗಿಷ್ಟಗೆ ತಂದು ಪೂಜೆ ಮಾಡುತ್ತಾರೆ. ಕೆಲ ಕಮ್ಮಾರರು ಹಾಗೂ ಕಂಚುಗಾರರು ಹೊಸ ಕುಲುಮೆಯನ್ನೇ ಸಿದ್ಧಪಡಿಸಿ ಪೂಜೆ ಮಾಡುತ್ತಾರೆ. ಪಂಚಕಳಸ ವಿಸರ್ಜನೆಯಾಗುವವರೆಗೆ ಮನೆಯಲ್ಲಿ ಜೋಳವನ್ನು ಬಳಸುವುದಿಲ್ಲ. ಕಳಸ ಪಂಚಮಿಯ

ದಿನ ಹೋಳಿಗೆ, ಕರಿಗಡಬು, ಪಾಯಸ ಮಾಡಿಕೊಂಡು ಕಾಳಮ್ಮನ ಗುಡಿಗೆ ಹೋಗಿ ನೈವೇದ್ಯ ಅರ್ಪಿಸುತ್ತಾರೆ. ಅನೇಕರು ಹೊಸ ಬಟ್ಟೆಗಳನ್ನು ಧರಿಸಿಕೊಂಡು ತಮ್ಮ ತಮ್ಮ ಸಮುದಾಯದವರ ಮನೆಗಳಿಗೆ ಹೋಗಿ ಬೇವು ಬೆಲ್ಲ ಹಂಚುತ್ತಾರೆ. ಕಾಳಮ್ಮನಿಗೆ ಉಡಿ ತುಂಬುವ ಅವಳನ್ನು ಕುರಿತು ಭಜನೆ ಮಾಡುವ ಅನೇಕ ಕಾರ್ಯಕ್ರಮಗಳು ದೇವಸ್ಥಾನಗಳಲ್ಲಿ ನಡೆಯುತ್ತವೆ. ಯುಗಾದಿಯಿಂದ ಕಡೇ ಪಂಚಮಿಯವರೆಗಿನ ಕಾಲ ವಿಶ್ವಕರ್ಮರಿಗೆ ಕಾಳಿಯನ್ನು ಆರಾಧಿಸಲು ಪ್ರಶಸ್ತ ಕಾಲ ಎಂದು ಹೇಳಲಾಗುತ್ತದೆ. ಈ ಕಾಲದಲ್ಲಿ ಪ್ರತೀ ಮಂಗಳವಾರ, ಶುಕ್ರವಾರ, ಅಮವಾಸ್ಯೆ, ಹುಣ್ಣಿಮೆ, ಪಂಚಮಿಯ ದಿನಗಳಂದು ಕಾಳಮ್ಮನಿಗೆ ಅಭಿಷೇಕ ಮಾಡಿಸುವ, ಉಡಿ ತುಂಬುವ ಕಾರ್ಯಗಳು ನೆರವೇರುತ್ತವೆ. ಕಾಳಮ್ಮನಿಗೆ ಸಲ್ಲಿಸುವ ನೈವೇದ್ಯವನ್ನು ಮುತ್ತೈದೆಯರೇ ಸಿದ್ಧಪಡಿಸಬೇಕಾದುದು ಇವರಲ್ಲಿ ಕಡ್ಡಾಯ.

**೪.೧.೧.೨. ಶಿವರಾತ್ರಿ:**

ಮಾಘ ಮಾಸದ ಕೃಷ್ಣ ಪಕ್ಷದಲ್ಲಿ ಬರುವ ಚತುರ್ದಶಿಗೆ ಶಿವರಾತ್ರಿ ಎಂದು ಹೆಸರು. ಕಮ್ಮಾರರು ಈ ಮಹಾಶಿವರಾತ್ರಿಯನ್ನು ಆಚರಿಸುತ್ತಾರೆ. ಮೂಲತಃ ದ್ರಾವಿಡ ಸಮುದಾಯದವರಾದ ಕಮ್ಮಾರರು ಶಿವ, ಶಕ್ತಿ ಇಬ್ಬರನ್ನು ಆರಾಧಿಸುತ್ತಾರೆ. ಶಿವರಾತ್ರಿಯ ದಿನ ಉಪವಾಸವಿದ್ದು ತಮ್ಮ ವೃತ್ತಿಗೆ ಬಿಡುವು ನೀಡಿ, ಶಿವನ ಆರಾಧನೆ ಮಾಡುವುದು ಕಂಡು ಬರುತ್ತದೆ. ಶಿವರಾತ್ರಿಯಲ್ಲಿ ಉಪವಾಸ ಹಾಗೂ ಜಾಗರಣೆ ಮಾಡಿದರೆ ಪುಣ್ಯ ಲಭಿಸುತ್ತದೆ ಮತ್ತು ಮೋಕ್ಷ ದೊರೆಯುತ್ತದೆ ಎಂಬ ನಂಬಿಕೆ ಇದೆ. ಅಂದು ಶಿವದೇವಾಲಯ ಅಥವಾ ವಿಶ್ವಕರ್ಮನ ದೇವಾಲಯದಲ್ಲಿರುವ ಲಿಂಗಕ್ಕೆ ಪೂಜೆ ಸಲ್ಲಿಸಿ ಭಕ್ತಿಯಿಂದ ಭಜನೆ ಮಾಡುವುದನ್ನು ಕಾಣುತ್ತೇವೆ. ಮಾರನೆಯ ದಿನ ಬೆಳಿಗ್ಗೆ ಎದ್ದು ಸ್ನಾನ ಮಾಡಿ ಮಡಿಯಿಂದ ಸಿಹಿ ಅಡುಗೆ ತಯಾರಿಸಿ ಶಿವನಿಗೆ ನೈವೇದ್ಯ ಮಾಡಿ ಊಟ ಮಾಡುವರು. ಶಿವರಾತ್ರಿಯ ನಿಮಿತ್ತ ಕೊಳ್ಳೆಗಾಲ ಪರಿಸರದ ಕಮ್ಮಾರರು ಮಂಟೇಸ್ವಾಮಿ, ಸಿದ್ಧಪ್ಪಾಜಿಯ ಗದ್ದುಗೆಗಳಿಗೆ ಪೂಜೆ ಸಲ್ಲಿಸಲು ಹೋಗುವುದುಂಟು.

**೪.೧.೧.೩ ನಾಗರ ಪಂಚಮಿ:**

ಶ್ರಾವಣ ಮಾಸದಲ್ಲಿ ಬರುವ ನಾಗರ ಪಂಚಮಿಯನ್ನು ಆಚರಿಸುತ್ತಾರೆ. ಸಮೀಪದಲ್ಲಿರುವ ನಾಗ ಬನಗಳಿಗೆ ಹೆಣ್ಣು ಮಕ್ಕಳು ಹೋಗಿ ಹುತ್ತಕ್ಕೆ ಪೂಜೆ ಸಲ್ಲಿಸಿ ಹಾಲು ಎರೆಯುತ್ತಾರೆ. ನಾಗಪ್ಪನಿಗೆ ಅಳ್ಳಿಟ್ಟು, ತಂಬಿಟ್ಟು ಹಾಗೂ ಇತರೆ ಸಿಹಿ ಉಂಡೆಗಳನ್ನು ಸಿದ್ಧಪಡಿಸುತ್ತಾರೆ. ನಾಗಾರಾಧನೆಯನ್ನು ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ವಿಶೇಷವಾಗಿ ಆಚರಿಸುವುದನ್ನು ಕಾಣುತ್ತೇವೆ.

**೪.೧.೧.೪ ಹಿರಿಯರ ಹಬ್ಬ:**

ಅಶ್ವೀಜ ಮಾಸದ ಮಾಳ ಪಕ್ಷದ ಮಹಾನವಮಿಯ ಅಮವಾಸ್ಯೆಯ ದಿನದ ಹಿಂದಿನ ದಿನ(ಸರ್ವಪಿತೃ ಅಮವಾಸ್ಯೆ ಎಂದೇ ಇದಕ್ಕೆ ಕರೆಯುತ್ತಾರೆ.) ಕಮ್ಮಾರರ ಸಮುದಾಯದಲ್ಲಿ ತೀರಿಕೊಂಡ ಎಲ್ಲ ಗಂಡಸರ ಮತ್ತು ಹೆಂಗಸರ ಹೆಸರಿನಲ್ಲಿ ಎರಡು ತಾಮ್ರದ ತಂಬಿಗೆಗಳಲ್ಲಿ ನೀರು ತುಂಬಿ

ಅದನ್ನು ದೇವರ ಮನೆಯಲ್ಲಿಟ್ಟು ಗಂಡಸರ ಮತ್ತು ಹೆಂಗಸರ ಬಟ್ಟೆಗಳನ್ನಿಟ್ಟು ಪೂಜೆ ಮಾಡುತ್ತಾರೆ. ಅಂದು ಮಡಿಯಿಂದ ಅಡುಗೆಯನ್ನು ತಯಾರಿಸಿ ನೈವೇದ್ಯವನ್ನು ಸಿದ್ಧಪಡಿಸಿ ಮೊದಲು ಹಿರಿಯರರಿಗೆ ನೈವೇದ್ಯ ಸಲ್ಲಿಸಿ ಅದನ್ನೇ ಆಕಳಿಗೆ ತಿನ್ನಲು ಕೊಡುತ್ತಾರೆ.

ಸರ್ವಪಿತೃ ಅಮವಾಸ್ಯೆಯಲ್ಲಿ ಸತ್ತ ಹಿರಿಯರನ್ನು ಪೂಜಿಸದೇ ಇದ್ದರೆ ಅವರ ಆತ್ಮಗಳು ಬದುಕಿದ್ದವರಿಗೆ ತೊಂದರೆ ಕೊಡುತ್ತವೆ ಎಂಬ ನಂಬಿಕೆ ಇದೆ.

**೪.೧.೧.೫ ಮಹಾನವಮಿ (ನವರಾತ್ರಿ):**

ಕಾಳಿ ಯುಗಾದಿಯಿಂದ ಕಡೆ ಪಂಚಮಿಯವರೆಗೆ ದೈತ್ಯರನ್ನೆಲ್ಲ ಸಂಹಾರ ಮಾಡಿ ವಿಶ್ರಾಂತಿ ಪಡೆದು ಕೊಳ್ಳುತ್ತಿರುತ್ತಾಳೆ. ಮಹಾನವಮಿಯ ಅಮವಾಸ್ಯೆಯಿಂದ ಒಂಭತ್ತು ದಿನಗಳವರಗೆ ಅಂದರೆ ವಿಜಯದಶಮಿಯವರೆಗೆ ಅಕೆ ದೈತ್ಯರನ್ನು ಹೇಗೆ ಸಂಹರಿಸಿದಳು ಎಂಬುದನ್ನು ಅಕೆಯ ಎದುರಿಗೆ ಕುಳಿತು ಪಠಣ ಮಾಡುವುದೇ ಈ ಸಂದರ್ಭದಲ್ಲಿ ಕಂಡು ಬರುವ ಆಚರಣೆ. ಈ ಕಾಲದಲ್ಲಿ ಕಾಳಿ ಅತ್ಯಂತ ಶಾಂತಳಾಗಿದ್ದುಕೊಂಡು ಭಕ್ತರು ಮಾಡುವ ಪಠಣ ಕೇಳುತ್ತಾಳೆ. ಈ ಸಂದರ್ಭದಲ್ಲಿ ಯಾರು ದೇವಿ ಪಾರಾಯಣ ಮಾಡುತ್ತಾರೊ ಅವರಿಗೆ ಸಕಲ ಭಾಗ್ಯಗಳನ್ನು ಕಾಳಿ ಕೊಡುತ್ತಾಳೆ ಎಂಬ ಪರಿಕಲ್ಪನೆ ಕಮ್ಮಾರರಲ್ಲಿದೆ.

ಮಹಾಲಯ ಅಮವಾಸ್ಯೆಗಿಂತ ಮೊದಲೇ ಮನೆಯನ್ನು ಸ್ವಚ್ಛಗೊಳಿಸುತ್ತಾರೆ. ಮನೆಯ ಬಾಗಿಲನ್ನು ತಳಿರು ತೋರಣಗಳಿಂದ ಅಲಂಕರಿಸಿತ್ತಾರೆ. ಕುಲುಮೆಯನ್ನು ಸ್ವಚ್ಛಗೊಳಿಸಿ ಸಾರಿಸಿ ಅದರ ಮುಂದೆ ರಂಗೋಲಿ ಹಾಕಿ ಅದನ್ನು ಶ್ರದ್ಧೆಭಕ್ತಿಯಿಂದ ಪೂಜಿಸುತ್ತಾರೆ. ಮಹಾಲಯ ಅಮಾವಾಸ್ಯೆಯ ಮಾರನೆಯ ದಿನ ಮನೆಯಲ್ಲಿ ಮೊದಲು ಗಣಪತಿ ಪೂಜೆ ಮಾಡಿ ದೇವಿಯನ್ನು ಅಹ್ವಾನಿಸಿ ಕಲಶ ಸ್ಥಾಪಿಸುತ್ತಾರೆ. ಒಂದು ತಾಮ್ರದ ತಟ್ಟೆಯಲ್ಲಿ ಮಣ್ಣು ಹಾಕಿ ಆ ಮಣ್ಣಿನಲ್ಲಿ ಒಂಭತ್ತು ತರಹದ ಧಾನ್ಯಗಳನ್ನು ಬಿತ್ತಿ ಅದರ ಮಧ್ಯದಲ್ಲಿ ಕಲಶ ಸ್ಥಾಪಿಸಿ ಪೂಜೆ ಮಾಡುತ್ತಾರೆ. ಕೆಲವರು ಅವರ ಮನೆಯ ಸಂಪ್ರದಾಯದಂತೆ ಒಂಭತ್ತು ದಿನಗಳವರೆಗೆ ದೇವಿಯ ಮುಂದೆ ನಿರಂತರವಾಗಿ ದೀಪ ಉರಿಯುವಂತೆ ನೋಡಿಕೊಳ್ಳುತ್ತಾರೆ. ಪ್ರತಿದಿನ ಬೆಳಗ್ಗೆ ಮತ್ತು ಸಾಯಂಕಾಲ ದೇವಿಯ ಪಾರಾಯಣ ಪೂಜೆ ಮಾಡುತ್ತಾರೆ. ಕಾಳಿಕಾಂಬ ದೇವಸ್ಥಾನಗಳಲ್ಲಿ ಪ್ರತಿದಿನವೂ ವಿಶೇಷ ಪೂಜೆ ಪಾರಾಯಣ, ಭಜನೆ ನಡೆಯುತ್ತದೆ. ಕಮ್ಮಾರರು ಪ್ರತಿದಿನವೂ ಅಲ್ಲಿಗೆ ಹೋಗಿ ಭಕ್ತಿಯಿಂದ ಪೂಜೆ ಸಲ್ಲಿಸುವುದುಂಟು.

ಆಯುಧ ಪೂಜೆಯ ದಿನ ತಮ್ಮ ವೃತ್ತಿಯಲ್ಲಿ ಬಳಸಲ್ಪಡುವ ಎಲ್ಲ ವಸ್ತುಗಳನ್ನು ತೊಳೆದು ಅವುಗಳನ್ನು ಪೂಜಿಸುತ್ತಾರೆ. ಜೊತೆಗೆ ಮನೆಯಲ್ಲಿರುವ ಎಲ್ಲಾ ವಸ್ತುಗಳನ್ನು ಪೂಜಿಸುವ ಸಂಪ್ರದಾಯವಿದೆ. ವಿಜಯದಶಮಿಯ ದಿನ ಬನ್ನಿಯನ್ನು ತೆಗೆದುಕೊಂಡು ಬಂದು ಮೊದಲು ಕಾಳಿಗೆ ಅರ್ಪಿಸಿ ನಂತರ ಮನೆಗೆ ಬಂದು ಪೂಜಿಸಿ ಎಲ್ಲರಿಗೂ ಬನ್ನಿಯನ್ನು ಕೊಟ್ಟು ಶುಭ ಕೋರುತ್ತಾರೆ. ಅಂದು ದೇವಿ ಪಾರಾಯಣ ಪೂರ್ತಿಗೊಳಿಸಿ ಮಂಗಳಾರುತಿ ಮಾಡುತ್ತಾರೆ. ಕಾಳಿಗೆ

ವಿಶೇಷವಾದ ಅಡುಗೆಯನ್ನು ಮಾಡಿ ನೈವೇದ್ಯ ಮಾಡುತ್ತಾರೆ. ಅಂದು ಸಾಯಂಕಾಲ ಕಾಳಿಕಾಂಬ ಹಾಗೂ ಬನ್ನಿಗಿಡಕ್ಕೆ ಪೂಜೆ ಸಲ್ಲಿಸುವುದು, ಹೊಸ ಬಟ್ಟೆ ಧರಿಸುವುದು ಕಂಡು ಬರುತ್ತದೆ.

**೪.೧.೧.೬ ದೀಪಾವಳಿ:**

ಅಶ್ವಿಜ ಹಾಗೂ ಕಾರ್ತಿಕ ಮಾಸಗಳ ಸಂಧಿ ಸ್ಥಾನದಲ್ಲಿ ದೀಪಾವಳಿ ಹಬ್ಬ ಬರುತ್ತದೆ. ಕಮ್ಮಾರರು ನವರಾತ್ರಿಯಲ್ಲಿ ಒಂಭತ್ತು ದಿನಗಳವರೆಗೆ ಕಾಳಿಯ ಪಾರಾಯಣ ಮಾಡಿ ಸಂತೃಪ್ತಿಗೊಳಿಸಿದರೆ, ದೀಪಾವಳಿಯಲ್ಲಿ ಅವಳಿಗೆ ದೀಪದ ಅಲಂಕಾರ ಮಾಡುವುದರ ಮೂಲಕ ಅವಳ ಮನಸ್ಸನ್ನು ಸಂತೋಷಗೊಳಿಸುತ್ತಾರೆ ಮತ್ತು ಲೋಕ ಕಂಟಕನಾಗಿದ್ದ ನರಕಾಸುರನನ್ನು ಶ್ರೀಕೃಷ್ಣ ಪರಮಾತ್ಮ ಸಂಹರಿಸಿದ ನೆನಪಿಗಾಗಿಯೂ ಈ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿ ಹೆಸರಿಗೆ ತಕ್ಕಂತೆ ಬೆಳಕಿನ ಹಬ್ಬ, ಕಮ್ಮಾರರು ದೀಪಾವಳಿ ಹಬ್ಬವನ್ನು ಬಹಳ ವಿಜ್ರಂಭಣೆಯಿಂದ ಆಚರಿಸುವರು. ದೀಪಾವಳಿಗಿಂತ ಮುಂಚೆ ಮನೆಗೆ ಸುಣ್ಣ ಬಣ್ಣವನ್ನು ಹಚ್ಚುತ್ತಾರೆ. ಕುಲುಮೆಯ ಮನೆಯನ್ನು ಸ್ವಚ್ಛಗೊಳಿಸಿ ಅದಕ್ಕೂ ಸುಣ್ಣ ಬಣ್ಣ ಹಚ್ಚಿ ಅಲಂಕರಿಸುವರು.

ದೀಪಾವಳಿ ಹಿಂದಿನ ದಿನ ಮನೆಯಲ್ಲಿ ನೀರು ಸಂಗ್ರಹಿಸಿ ಅದಕ್ಕೆ ಮಾನಿಂಗನಬಳ್ಳಿ ಕಟ್ಟುತ್ತಾರೆ. ಇದಕ್ಕೆ ನೀರು ತುಂಬುವ ಹಬ್ಬ ಎಂದು ಕರೆಯುತ್ತಾರೆ. ಮಾರನೆಯ ದಿನ ಬಳಿಗ್ಗೆ ಎದ್ದು ಮೈಗೆ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡುತ್ತಾರೆ. ಇದನ್ನು ಬೂರೆಸ್ನಾನ ಎಂದೂ ಕರೆಯುವರು. ಕಮ್ಮಾರರು ವೃತ್ತಿಯಲ್ಲಿ ಬಳಸುವ ಎಲ್ಲಾ ವಸ್ತುಗಳನ್ನು ಕುಲುಮೆಯ ಮುಂದಿಟ್ಟು ಪೂಜಿಸುತ್ತಾರೆ. ಮನೆಯ ಮುಂದೆ ಬಣ್ಣ ಬಣ್ಣದ ಚಿತ್ತಾರದ ಆಕಾಶ ಬುಟ್ಟಿಗಳನ್ನು ಮನೆ ಹಾಗೂ ಕಮ್ಮಾರಸಾಲೆಯ ಮುಂದೆ ಕಟ್ಟುತ್ತಾರೆ.

ದೀಪಾವಳಿ ಅಮವಾಸ್ಯೆ ಅಥವಾ ಪಾಡ್ಯದ ದಿನ ಮನೆಯಲ್ಲಿ ಲಕ್ಷ್ಮೀ ದೇವಿಯನ್ನು ಆಹ್ವಾನಿಸಿ ಕಲಶ ಸ್ಥಾಪಿಸಿ ಭಯ ಭಕ್ತಿಯಿಂದ ಪೂಜಿಸುತ್ತಾರೆ. ಈ ಲಕ್ಷ್ಮಿ ಪೂಜೆಯನ್ನು ಕೆಲವರು ಮನೆಯಲ್ಲಿ ಮಾಡಿದರೆ ಮತ್ತೆ ಕೆಲವರು ಕಮ್ಮಾರಿಕೆ ಮಾಡುವ ಮನೆಯಲ್ಲಿ ಮಾಡುತ್ತಾರೆ. ಬಂಧು ಬಳಗದವರನ್ನು ಈ ಪೂಜೆಗೆ ಅಹ್ವಾನಿಸುತ್ತಾರೆ. ಸಾಮಾನ್ಯವಾಗಿ ಈ ಸಂದರ್ಭದಲ್ಲಿಯೂ ಹೊಸ ಬಟ್ಟೆಗಳನ್ನು ಧರಿಸುವುದುಂಟು. ವರ್ಷದುದ್ದಕ್ಕೂ ಲಕ್ಷ್ಮೀ ಕೃಪಾಕಟಾಕ್ಷ ನಮ್ಮ ಮೇಲಿರಲಿ ಎಂದು ಭಕ್ತಿಯಿಂದ ಬೇಡಿಕೊಳ್ಳುತ್ತಾರೆ. ಲಕ್ಷ್ಮಿಯ ಜೊತೆಗೆ ಸರಸ್ವತಿ, ಗಣಪತಿಯ ಪೂಜೆಯನ್ನು ಮಾಡುತ್ತಾರೆ. ಮನೆಯ ಮುಂದೆ ಹಣತೆಯ ದೀಪವನ್ನಿಡುತ್ತಾರೆ. ವಿವಿಧ ಬಗೆಯ ಸಿಹಿ ಹಾಗೂ ಖಾರದ ತಿಂಡಿಗಳನ್ನು ತಯಾರಿಸುತ್ತಾರೆ.

**೪.೧.೧.೭ ಗಣೇಶ ಚತುರ್ಥಿ:**

ಸಾಮಾನ್ಯವಾಗಿ ಅನೇಕ ಕಮ್ಮಾರರು ಕಬ್ಬಿಣದ ಕೆಲಸದ ಜೊತೆಗೆ ಮಣ್ಣಿನಿಂದ ಗಣಪತಿಯ ಮೂರ್ತಿಯನ್ನು ಸಿದ್ಧಪಡಿಸುವುದರಲ್ಲಿ ಸಿದ್ಧಹಸ್ತರು. ಗಣಪತಿ ತಯಾರಿಸುವುದು ಪರಂಪರಾನುಗತವಾಗಿ ಅವರಲ್ಲಿ ಸಾಗಿ ಬಂದಿದೆ. ದೊಡ್ಡ ದೊಡ್ಡ ಬಜಾರುಗಳಲ್ಲಿರುವ ಗಣಪತಿಗಳನ್ನು ಇವರು

ಸಿದ್ಧಪಡಿಸುತ್ತಾರೆ. ಗಣೇಶ ಚತುರ್ಥಿಗೆ ಮೊದಲೇ ಮೂರು ತಿಂಗಳಿನಿಂದ ಗಣಪತಿಗಳನ್ನು ತಯಾರಿಸಲು ಪ್ರಾರಂಭಿಸುತ್ತಾರೆ. ಕಮ್ಮಾರಿಕೆಯ ಕೆಲಸದ ಬಿಡುವಿನ ವೇಳೆಯಲ್ಲಿ ಈ ಕೆಲಸ ಮಾಡುತ್ತಾರೆ. ಮನೆಯಲ್ಲಿರುವ ಹೆಣ್ಣು ಮಕ್ಕಳು ಸಹ ಗಣಪತಿ ಮೂರ್ತಿಗಳನ್ನು ಸಿದ್ಧಪಡಿಸುವುದನ್ನು ಕಾಣುತ್ತೇವೆ. ಗಣೇಶ ಚತುರ್ಥಿಯ ದಿನ ಗಣಪತಿಗಳನ್ನು ಕೊಟ್ಟು ತಾವೂ ಮನೆಯಲ್ಲಿ ಗಣಪತಿಯ ಪೂಜೆ ಮಾಡುತ್ತಾರೆ.

ಸರ್ವವಿಘ್ನಗಳನ್ನು ನಿವಾರಣೆ ಮಾಡುವ ವಿಘ್ನೇಶ್ವರನನ್ನು ಅತ್ಯಂತ ಭಯ-ಭಕ್ತಿಯಿಂದ ಪೂಜಿಸುವ ಸಂಪ್ರದಾಯ ಇವರಲ್ಲಿದೆ. ೩, ೫, ೭, ೯ ಅಥವಾ ೧೧ನೇ ದಿನ ಗಣಪತಿಯನ್ನು ನದಿ ಅಥವಾ ಬಾವಿಯಲ್ಲಿ ವಿಸರ್ಜಿಸುತ್ತಾರೆ. ಗಣೇಶ ಚತುರ್ಥಿಯ ದಿನ ಚಂದ್ರನನ್ನು ನೋಡಿದರೆ ಅಪವಾದ ಬರುತ್ತದೆ ಎಂಬ ಸಾರ್ವಜನಿಕವಾದ ನಂಬಿಕೆ ಇವರಲ್ಲಿಯೂ ಇದೆ.

**೪.೧.೧.೮ ತುಳಸಿ ಮದುವೆ:**

ಭಾರತೀಯ ಸಂಸ್ಕೃತಿಯಲ್ಲಿ ತುಳಸಿ ಅತ್ಯಂತ ಪವಿತ್ರವಾದ ಸಸ್ಯವಾಗಿದೆ. ಧಾರ್ಮಿಕ ಆಚರಣೆಗಳಲ್ಲಿ ಈ ಸಸ್ಯ ಪ್ರಮುಖ ಸ್ಥಾನವನ್ನು ಪಡೆದು ಕೊಂಡಿದೆ. ವಿಶ್ವಕರ್ಮರು ಅಥವಾ ಕಮ್ಮಾರರು ತಮ್ಮ ಮನೆಯ ಮುಂದೆ ಅಥವಾ ಹಿತ್ತಲಿನಲ್ಲಿ ತುಳಸಿ ಕಟ್ಟೆಯನ್ನು ಕಟ್ಟಿ ಅದರಲ್ಲಿ ತುಳಸಿಗಿಡವನ್ನು ಹಚ್ಚಿರುವುದು ಕಂಡುಬರುತ್ತದೆ. ಕಮ್ಮಾರರ ಹೆಣ್ಣು ಮಕ್ಕಳು ಪ್ರತಿದಿನವೂ ತುಳಸಿ ಕಟ್ಟೆಗೆ ಪೂಜೆ ಸಲ್ಲಿಸುತ್ತಾರೆ.

ತುಳಸಿಯು ವಿಷ್ಣು ಹಾಗು ಲಕ್ಷ್ಮಿಯರಿಗೆ ಅತ್ಯಂತ ಪ್ರಿಯವಾದ ವಸ್ತು. ತುಳಸಿ ಎಲ್ಲಿ ಇರುತ್ತದೆಯೋ ಅಲ್ಲಿ ಲಕ್ಷ್ಮಿ ಹಾಗೂ ವಿಷ್ಣು ನೆಲೆಸಿರುತ್ತಾರೆಂಬ ಪರಿಕಲ್ಪನೆ ಇದೆ. ಪ್ರತಿದಿನ ತುಳಸಿ ಪೂಜೆ ಮಾಡುವುದರಿಂದ ಮಕ್ಕಳಿಲ್ಲದವರಿಗೆ ಮಕ್ಕಳ ಭಾಗ್ಯ ಲಭಿಸುತ್ತದೆ, ಹೆಣ್ಣು ಮಕ್ಕಳಿಗೆ ಒಳ್ಳೆಯ ಗಂಡ ಸಿಗುತ್ತಾನೆ, ಮನೆಯಲ್ಲಿ ಲಕ್ಷ್ಮಿ ನೆಲೆಸಿರುತ್ತಾಳೆ ಎಂಬ ಅನೇಕ ಪರಿಕಲ್ಪನೆಗಳು ಕಮ್ಮಾರರಲ್ಲಿದೆ. ತುಳಸಿಯನ್ನು ಔಷಧಿಯ ರೂಪದಲ್ಲಿ ಬಳಸುತ್ತಾರೆ.

ಕಾರ್ತಿಕ ಪ್ರತಿದಿನವೂ ತುಳಸಿಗೆ ವಿಶೇಷ ಪೂಜೆಯನ್ನು ಸಲ್ಲಿಸಲು ಪ್ರಾರಂಭಿಸುತ್ತಾರೆ. ಈ ಪೂಜೆ ಒಂದು ತಿಂಗಳವರೆಗೆ ನಡೆಯುತ್ತದೆ. ನಿರ್ದಿಷ್ಟಪಡಿಸಿದ ದಿನ ದಾಮೋದರನ ಜೊತೆಗೆ ಮದುವೆ ಮಾಡುವ (ಸಾಯಂಕಾಲ) ಆಚರಣೆಯನ್ನು ಕಮ್ಮಾರರು ಅನುಸರಿಸುತ್ತಾರೆ. ತುಳಸಿ ಕಟ್ಟೆಗೆ ಸುಣ್ಣ ಬಣ್ಣ ಕಬ್ಬಿನಿಂದ ಶೃಂಗರಿಸಿ ಸಾಂಪ್ರದಾಯಿಕವಾಗಿ ಮದುವೆ ಮಾಡುವ ಎಲ್ಲಾ ಆಚರಣೆಗಳ ಮೂಲಕ ಮದುವೆ ಮಾಡುತ್ತಾರೆ.

**೪.೧.೧.೯. ಭೂತಾರಾಧನೆ:**

ಭೂತಾರಾಧನೆಯು ತುಳುನಾಡಿನ ಪ್ರಾಚೀನ ಹಾಗು ಧಾರ್ಮಿಕ ಸಂಸ್ಕೃತಿಯನ್ನು ಬಿಂಬಿಸುವ ಆರಾಧನೆಯಾಗಿದೆ. ದಕ್ಷಿಣ ಕನ್ನಡ ಹಾಗೂ ಉಡುಪಿಯಲ್ಲಿ ವಾಸಿಸುವ ಪ್ರತಿಯೊಂದು ಸಮುದಾಯವೂ ಭೂತಾರಾಧನೆ ಮಾಡುವುದು ಕಂಡುಬರುತ್ತದೆ. ಕಮ್ಮಾರರು ಇದರೊಂದ ಹೊರತಾಗಿಲ್ಲ.

ಭೂತಾರಾಧನೆಗೂ ಕೃಷಿಗೂ ನಿಕಟವಾದ ಸಂಬಂಧವಿದೆ. ಭೂತ ಕಟ್ಟುವ ವರ್ಗವು ಇಲ್ಲಿದೆ. ಮಳೆ ಬಾರದಿದ್ದರೆ, ಭತ್ತದ ಪೈರಿಗೆ ತೊಂದರೆಯಾದರೆ, ರೋಗ ರುಜಿನಗಳು ಹಬ್ಬಲು ಪ್ರಾರಂಭಿಸಿದರೆ, ಸರ್ಪದೋಷ, ಭೂತದೋಷ, ಜಾನುವಾರುಗಳಿಗೆ ರೋಗಗಳು ಬರಲು ಪ್ರಾರಂಭಿಸಿದರೆ ಹೀಗೆ ಹತ್ತುಹಲವಾರು ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಭೂತಾರಾಧನೆ ಮಾಡುವುದನ್ನು ಕಾಣುತ್ತೇವೆ. ಇದು ಋತು ಸಂಬಂಧಿ ಆಚರಣೆಗಳಲ್ಲೊಂದಾಗಿದೆ.

ಭೂತಾರಾಧನೆಯನ್ನು ಯಾವಾಗ ಮಾಡಬೇಕು ಎಂಬುದನ್ನು ಪುರೋಹಿತರು ನಿರ್ಧರಿಸುತ್ತಾರೆ. ಈ ಜಿಲ್ಲೆಗಳಲ್ಲಿ ನೂರಕ್ಕಿಂತ ಹೆಚ್ಚು ಭೂತಗಳ ಆರಾಧನೆ ನಡೆಯುತ್ತದೆ. ಅವುಗಳಲ್ಲಿ ರಕ್ತೇಶ್ವರಿ, ಪಿಲಿಚಾವಂಡಿ, ಕಲ್ಲುರ್ಟಿ, ಕಲ್ಗುಡ, ಪಂಜುರ್ಲಿ ಈ ಭೂತಗಳ ಆಚರಣೆ ಹೆಚ್ಚಾಗಿ ಆಚರಣೆಯಲ್ಲಿರುವುದು ಕಂಡುಬರುತ್ತದೆ.

ಕಮ್ಮಾರರು ಕಲ್ಲುರ್ಟಿ, ಕಲ್ಗುಡ ಮತ್ತು ಪಂಜುರ್ಲಿ ಈ ಭೂತಗಳ ಆರಾಧನೆ ಮಾಡುವುದನ್ನು ಕಾಣುತ್ತೇವೆ. ಕಲ್ಗುಡ ಮತ್ತು ಕಲ್ಲುರ್ಟಿ ಇವು ಅತ್ಯಂತ ಪ್ರಖರವಾದ ಭೂತಗಳಾಗಿದ್ದು ಮತ್ತು ಈ ಎರಡು ಭೂತಗಳು ವಿಶ್ವಕರ್ಮರ ಸಮುದಾಯಗಳಿಗೆ ಸಂಬಂದಿಸಿದ ಭೂತಗಳಾಗಿರುವುದರಿಂದ ಇವುಗಳ ವಿಶೇಷ ಆರಾಧನೆಯನ್ನು ಕಮ್ಮಾರರು ಮಾಡುತ್ತಿರುವುದು ಕಂಡು ಬರುತ್ತವೆ. ಈ ಭೂತಗಳ ಆಚರಣೆ ಮನೆಯಲ್ಲಿ ನಡೆಯುತ್ತದೆ. ಕಲ್ಗುಡ ಮತ್ತು ಕಲ್ಲುರ್ಟಿ ಭೂತಗಳಿಗೆ ಸಂಬಂಧಿಸಿದ ಕಥೆಯನ್ನು ಕಮ್ಮಾರರ ಮೌಖಿಕ ಸಾಹಿತ್ಯದಲ್ಲಿ ನೀಡಲಾಗಿದೆ.

**೪.೧.೧.೧೦ ಸಿದ್ದಪ್ಪಾಜಿ ಹಾಗೂ ಮಂಟೇಸ್ವಾಮಿ ಆರಾಧನೆ:**

ಕೊಳ್ಳೆಗಾಲ ಪರಿಸರದ ಕಮ್ಮಾರರು ಮಂಟೇಸ್ವಾಮಿ ಹಾಗೂ ಸಿದ್ದಪ್ಪಾಜಿಯ ಆರಾಧನೆ ಮಾಡುತ್ತಿರುವುದು ಕಂಡುಬರುತ್ತದೆ. ಮಂಟೇಸ್ವಾಮಿಗೆ ಒಬ್ಬ ದಳವಾಯಿ ಅಥವಾ ಶಿಶುಮಗನ ಅವಶ್ಯಕತೆ ಉಂಟಾಗಿ ಕಮ್ಮಾರನಾದ ನಿಡಘಟ್ಟದ ಮುದ್ದೋಜಿಯ ಮನೆಗೆ ಬಂದು ಅವನ ಮಗನಾದ ಕೆಂಪೋಜಿ (ಕೆಂಪಾಚಾರಿ)ಯನ್ನು ದಾನವನ್ನಾಗಿ ಕೇಳುತ್ತಾನೆ. ಮುದ್ದೋಜಿ ಕೆಂಪಾಚಾರಿಯನ್ನು ದಾನವಾಗಿ ಕೊಡಲು ನಿರಾಕರಿಸಿದ್ದಕ್ಕಾಗಿ ಅನೇಕ ಪವಾಡಗಳ್ನು ಮಾಡಿ ಅವನ ಐಶ್ವರ್ಯ ಮನೆ ಮಠ ಹಾಳು ಮಾಡಿ ಕೆಂಪಾಚಾರಿಗೆ ಹುಚ್ಚು ಬೆಪ್ಪು ಹಿಡಿಸಿ, ಕಂದೂರು ಬೆಟ್ಟದತ್ತ ಕರೆದುಕೊಂಡು ಹೋಗಿ ಹನ್ನೆರಡು ವರ್ಷಗಳ ಕಾಲ ಅವನಿಗೆ ಅನೇಕ ಶಿಕ್ಷೆಗಳನ್ನು ನೀಡಿ, ಅವನನ್ನು ಪರಿವರ್ತಿಸಿ ಕೊನೆಗೆ ಸಿದ್ದಪ್ಪಾಜಿ ಎಂದು ನಾಮಕರಣ ಮಾಡುತ್ತಾನೆ. ಮಂಟೇಶ್ವಾಮಿ ನಿರ್ವಾಣ ಹೊಂದುವ ಸಲುವಾಗಿ ಕಬ್ಬಿಣ ಭಿಕ್ಷೆ ಪಡೆಯುವ ಸಲುವಾಗಿ ಹಲಗೂರಿನ ಕಮ್ಮಾರರ ಹತ್ತಿರ ಸಿದ್ದಪ್ಪಾಜಿಯನ್ನು ಕಳಿಸುತ್ತಾನೆ. ಹಲಗೂರಿನ ಕಮ್ಮಾರರು "ಬಂಗಾರವನ್ನು ಬೇಕಾದರೂ ಕೊಡುತ್ತೇವೆ ಆದರೆ ಕಬ್ಬಿಣ ಕೊಡುವುದಿಲ್ಲ" ಎಂದು ಹೇಳಿ ಸಿದ್ದಪ್ಪಾಜಿಗೆ ಅನೇಕ ರೀತಿಯಲ್ಲಿ ಅವಮಾನ ಮಾಡುತ್ತಾರೆ. ಸಿದ್ದಪ್ಪಾಜಿ ಹಲಗೂರಿನ ಕಮ್ಮಾರರನ್ನು ಪರಿಪರಿಯಾಗಿ ಬೇಡಿಕೊಳ್ಳುತ್ತಾನೆ. ಆದರೆ ಕಮ್ಮಾರರು ಸಿದ್ದಪ್ಪಾಜಿಯ ಮಾತಿಗೆ ಬೆಲೆ ಕೊಡುವುದಿಲ್ಲ. ಕೊನೆಗೆ ಸಿದ್ದಪ್ಪಾಜಿ ಅವರಿಗೆ

ಶಾಪಕೊಟ್ಟು ಅವರ ಅಂತಸ್ತು ಐಶ್ವರ್ಯ ಎಲ್ಲವನ್ನು ಮಾಯಮಾಡಿ ಅವರನ್ನು ನಿರ್ಗತಿಕರನ್ನಾಗಿಸಿ ಕಬ್ಬಿಣವನ್ನು ತೆಗೆದುಕೊಂಡು ಹೋಗುತ್ತಾನೆ. ಹೀಗಾಗಿ ಕಮ್ಮಾರರಿಗೆ ಸಿದ್ದಪ್ಪಾಜಿ ಹಾಗೂ ಮಂಟೇಸ್ವಾಮಿ ಆರಾಧನೆ ಮಾಡುತ್ತಿರುವುದನ್ನು ಕೊಳ್ಳೆಗಾಲ ಪರಿಸರದ ಕಮ್ಮಾರರಲ್ಲಿ ಕಾಣುತ್ತೇವೆ.

ಜುಲೈ ತಿಂಗಳಲ್ಲಿ ನಡೆಯುವ ಮಳವಳ್ಳಿ ಹಾಗೂ ಬೊಪ್ಪಗೌಡನಪುರದಲ್ಲಿ ನಡೆಯುವ ಮಂಟೇಸ್ವಾಮಿ ಹಾಗು ಸಿದ್ದಪ್ಪಾಜಿ ಉತ್ಸವಗಳಿಗೆ ಹೋಗಿ ಆರಾಧಿಸುವ ಸಂಪ್ರದಾಯ, ಪ್ರತಿ ದಿನ ಮನೆಯಲ್ಲಿ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವುದನ್ನು ಕಾಣುತ್ತೇವೆ.

**೪.೧.೧.೧೧. ಮೌನೇಶ್ವರನ ಆರಾಧನೆ:**

ಕಮ್ಮಾರರ ಸಮುದಾಯದ ಸಾಂಸ್ಕೃತಿಕ ನಾಯಕ ಹಾಗೂ ದೈವವಾಗಿರುವ ಮೌನೇಶ್ವರನ ಆರಾಧನೆಯನ್ನು ಶ್ರಾವಣ ಮಾಸದಲ್ಲಿ ಮಾಡುವುದು ಕಂಡು ಬರುತ್ತದೆ. ಮೌನೇಶ್ವರ ಮುಲತಃ ಕಮ್ಮಾರ ಕುಟುಂಬದವ. ಬಾಲ್ಯದಿಂದಲೇ ಅನೇಕ ಪವಾಡಗಳನ್ನು ಮಾಡುತ್ತಾ ಜನರಲ್ಲಿ ಜಾಗೃತಿಯನ್ನು ಮಾಡಿಸುವಲ್ಲಿ ಪ್ರಯತ್ನಿಸಿದ ಮೌನೇಶ್ವರನ್ನು ಲಿಂಗದ ರೂಪದಲ್ಲಿ ಆರಾಧಿಸುವ ಪರಂಪರೆ ಕಮ್ಮಾರರಲ್ಲಿ ಕಂಡುಬರುತ್ತದೆ. ಮೌನೇಶ್ವರನಿಗೆ ಇಷ್ಟವಾದ ಗೋಧಿಯಿಂದ ತಯಾರಿದ ಮಾದೇಲಿ ಸಿದ್ಧಪಡಿಸಿ ಅದನ್ನು ಲಿಂಗದರೂಪದಲ್ಲಿಟ್ಟು ಪೂಜಿಸುತ್ತಾರೆ. ಶ್ರಾವಣ ಮಾಸದ ಕೊನೆಯ ಸೋಮವಾರ ಗದಗ ಜಿಲ್ಲೆಯ ವರವಿಯಲ್ಲಿ ಮೌನೇಶ್ವರನ ಜಾತ್ರೆ ನಡೆಯುತ್ತದೆ. ಅನೇಕ ಕಮ್ಮಾರರು ಮೌನೇಶ್ವರ ಐಕ್ಯ ಹೊಂದಿದ ರಾಯಚೂರು ಜಿಲ್ಲೆಯ ತಿಂಥಣಿ ಕ್ಷೇತ್ರಕ್ಕೆ ಭೆಟ್ಟಿ ನೀಡಿ ಆರಾಧಿಸುವುದು ಕಂಡುಬರುತ್ತದೆ. ಉಡುಪಿ ಜಿಲ್ಲೆಯಲ್ಲಿರುವ ಉಪ್ಪಳ್ಳಿಯಲ್ಲಿಯ ನಾಗಲಿಂಗ ಸ್ವಾಮಿಯ ಮಠದಲ್ಲಿ ನಾಗಲಿಂಗಸ್ವಾಮಿ ಬಿಟ್ಟು ಹೋದನೆಂದು ಹೇಳಲಾದ ವಿಭೂತಿಯನ್ನು ಅರಾಧಿಸುತ್ತಾರೆ.

**೪.೨ ದೈವ ಮತ್ತು ಧರ್ಮ:**

ಕಮ್ಮಾರರು ಮೂಲ ಆರಾಧ್ಯ ದೈವ ಕಾಳಿ ಹಾಗೂ ವಿಶ್ವಕರ್ಮ. ಕಮ್ಮಾರರು ವೇದಕಾಲಕ್ಕಿಂತ ಹಿಂದೆಯೇ ತಮ್ಮ ಅಸ್ಥಿತ್ವಗಳನ್ನು ಉತ್ಪಾದನೆಯ ವ್ಯವಸ್ಥೆಯ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಿದರು. ಕ್ರಿಪೂ. ಯುಗದಿಂದ ಈ ವಿಶ್ವಕ್ಕೆ ಉತ್ಪಾದನ ವ್ಯವಸ್ಥೆಗೆ ತಮ್ಮದೆ ಆದ ಕೊಡುಗೆಗಳನ್ನು ನೀಡುತ್ತ ಬಂದಿದ್ದಾರೆ. ಪ್ರಕೃತಿಯ ಕೊಡುಗೆಯಾದ ಬೆಂಕಿಯನ್ನು ಬಳಸಿಕೊಂಡು ಸಾವಿರಾರು ವರ್ಷಗಳವರೆಗೆ ಅನೇಕ ನಿಕ್ಷೇಪಗಳನ್ನು ಪತ್ತೆ ಹಚ್ಚಿ ಅದನ್ನು ಸಂಸ್ಕರಿಸುವಲ್ಲಿ ಯಶಸ್ವಿಯಾದರು. ಅವರು ಕಂಡು ಹಿಡಿದ ನಿಕ್ಷೇಪಗಳನ್ನು ಶುದ್ಧೀಕರಿಸಲು ಬೆಂಕಿ ಮಹತ್ವದ ಪಾತ್ರ ವಹಿಸಿತು. ಈ ಬೆಂಕಿಯನ್ನೇ ಅವರು ಕಾಳಿ, ಕಾಳಮ್ಮ ಎಂದು ಕರೆದು ಆರಾಧಿಸುತ್ತಾ ಬಂದಿದ್ದಾರೆ. ಕಮ್ಮಾರರು ತಮ್ಮ ವೃತ್ತಿಯಲ್ಲಿ ಕುಲುಮೆಗೆ ಅತ್ಯಂತ ಪವಿತ್ರವಾದ ಸ್ಥಾನವನ್ನು ನೀಡಿದ್ದಾರೆ. ಈ ಕುಲುಮೆಯಲ್ಲಿಯೇ ಅವರು ಕಾಳಮ್ಮನ ರೂಪವನ್ನು ಕಂಡು ಕೊಂಡಿದ್ದಾರೆ. ಬೆಂಕಿ ಎಂದರೆ ಕಾಳಿ ಎಂದು ತಿಳಿದು ಪೂಜಿಸುತ್ತಾರೆ. ಮಂಗಳೂರು ಉಡುಪಿಯ ಕಮ್ಮಾರರು ಮಂಗಳೂರಿನಲ್ಲಿರುವ ಕಾಳಿಯ ದೇವಸ್ಥಾನಕ್ಕೂ ಮತ್ತು ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಶಿರಸಂಗಿ ಗ್ರಾಮದಲ್ಲಿರುವ ಕಾಳಿ ದೇವಸ್ಥಾನಕ್ಕೆ ಆರಾಧನೆಗಾಗಿ

ತೆರಳುವುದುಂಟು. ಕಮ್ಮಾರರಿಗೆ ಯುಗಾದಿ ಅತ್ಯಂತ ಪವಿತ್ರವಾದ ಹಬ್ಬ. ಐದು ದಿನಗಳವರೆಗೆ ಇವರು ಅತ್ಯಂತ ಭಯ ಭಕ್ತಿಯಿಂದ ಕಾಳಿಯನ್ನು ಆರಾಧಿಸುವುದುಂಟು. ಕಮ್ಮಾರರು ಮಾತ್ರ ದೇವತೆಗಳ ಆರಾಧಕರು ಎಂಬುದು ಸ್ಪಷ್ಟ. ಕಾಳಿ ಕಮ್ಮಾರರ ಕುಲದೇವತೆ.

ಕಮ್ಮಾರರು ಮಾತೃದೇವತೆಯಾಗಿ ಕಾಳಿಯನ್ನು ಆರಾಧಿಸಿದರೆ ವೃತ್ತಿ ದೈವವಾಗಿ ವಿಶ್ವಕರ್ಮನನ್ನು ಆರಾಧಿಸುತ್ತಾರೆ. ಪಂಚಮುಖಗಳನ್ನು ಹೊಂದಿರುವ ವಿಶ್ವಕರ್ಮನ ಒಂದೊಂದು ಮುಖದಿಂದ ಒಂದೊಂದು ವೃತ್ತಿ ಹುಟ್ಟಿಕೊಂಡಿತು ಎಂಬ ಪರಿಕಲ್ಪನೆ ಇವರಲ್ಲಿದೆ. ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ವಿಶ್ವಕರ್ಮನಿಂದಲೇ ನಡೆಯುತ್ತದೆ ಎಂಬ ಕಲ್ಪನೆ ಈ ಸಮುದಾಯದಲ್ಲಿದೆ. ವಿಶ್ವಕರ್ಮ ಪರಬ್ರಹ್ಮನ ಮುಖದಿಂದ ಪಂಚಬ್ರಹ್ಮರು ಅಂದರೆ ಮನುಬ್ರಹ್ಮ, ಮಯಬ್ರಹ್ಮ, ತ್ವಷ್ಟ್ರಬ್ರಹ್ಮ, ಶಿಲ್ಪಿಬ್ರಹ್ಮ, ಹಾಗೂ ವಿಶ್ವಜ್ಞಬ್ರಹ್ಮರು ಉದಯಿಸುತ್ತಾರೆ. ಪಂಚಬ್ರಹ್ಮರು ಶಿವ, ವಿಷ್ಣು, ಬ್ರಹ್ಮ, ಇಂದ್ರ ಮತ್ತು ವರುಣ ಶಕ್ತಿಯ ಪ್ರತೀಕ. ಈ ಪಂಚಬ್ರಹ್ಮರಿಂದಲೇ ವಿಶ್ವದಲ್ಲಿ ಪಂಚಕರ್ಮಗಳು ಪ್ರಾರಂಭವಾದವು ಎಂಬುದನ್ನು ವೇದಗಳಿಂದ ಸ್ಪಷ್ಟಪಡಿಸುತ್ತಾರೆ. ಈ ಐದು ಮೂಲ ವೃತ್ತಿಗಳ ಹಿಂದೆ ಒಂದೊಂದು ದೈವ ಶಕ್ತಿ ಇದೆ. ಶಿವನ ಶಕ್ತಿಯಿಂದಾಗಿ ಮನುಬ್ರಹ್ಮನು ಸಾನಗ ಗೋತ್ರದವನಾಗಿ ಕಬ್ಬಿಣ ವೃತ್ತಿ, ವಿಷ್ಣುವಿನ ರೂಪದಿಂದ ಮಯಬ್ರಹ್ಮ ಸನಾತನ ಗೋತ್ರದವನಾಗಿ ಕಟ್ಟಿಗೆ ವೃತ್ತಿ, ಬ್ರಹ್ಮನ ಶಕ್ತಿಯಿಂದ ರೂಪಗೊಂಡ ತ್ವಷ್ಟ್ರಬ್ರಹ್ಮ ಅಹಭೂವನ ಗೋತ್ರದವನಾಗಿ ಲೋಹವೃತ್ತಿ, ಇಂದ್ರನ ಶಕ್ತಿಯಿಂದ ಶಿಲ್ಪಿಬ್ರಹ್ಮನಾಗಿ ಪ್ರತ್ನಾಸ ಗೋತ್ರದವನಾಗಿ ಶಿಲ್ಪಿವೃತ್ತಿ ಹಾಗೂ ವರುಣನ ಶಕ್ತಿಯಿಂದ ವಿಶ್ವಬ್ರಹ್ಮನಾಗಿ ಸುವರ್ಣಗೋತ್ರದವನಾಗಿ ಸುವರ್ಣ ವೃತ್ತಿಯನ್ನು ಪ್ರಾರಂಭಿಸುತ್ತಾರೆ. ವಿಶ್ವಕರ್ಮರಲ್ಲಿ ಕಮ್ಮಾರಿಕೆ ವೃತ್ತಿ ಅತ್ಯಂತ ಪ್ರಾಚೀನವಾದದ್ದು ಎಂದು ಹೇಳಲಾಗುತ್ತದೆ.

ಬೆಂಕಿ ಅಥವಾ ಕಾಳಿಯ ಗರ್ಭದಲ್ಲಿ ವಿಶ್ವವೇ ಅಡಗಿದೆ. ಅವಳ ಆದೇಶದಿಂದಲೇ ವಿಶ್ವ ಚಲಿಸುತ್ತದೆ. ಅಂದರೆ ಕಾಲಿ ಮಾತೆಯಿಂದಲೇ ಕಾಲ ಚಲಿಸುತ್ತದೆ. ಈ ಕಾಲವೇ ಜಗತ್ತನ್ನು ಆಳುತ್ತದೆ. ಕಾಳಿಯ ಕಾಲಕ್ಕೆ ಚಲಿಸಲು ಆದೇಶ ನೀಡುವ ದಿನವನ್ನೇ ಯುಗಾದಿ ಎಂದು ಆಚರಿಸುತ್ತಾರೆ. ಯುಗಾದಿಯ ಮೊದಲ ದಿನ ವಿಶ್ವಕರ್ಮರಿಗೆ ಅತ್ಯಂತ ಪವಿತ್ರವಾದ ದಿನ. ಈ ಜಗತ್ತು ಕಾಲದ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ ಎಂಬ ಪರಿಕಲ್ಪನೆಗಳಿವೆ. ಈ ಕಾಳಿಯಂತೆ ತನ್ನಲ್ಲಿರುವ ಆದಿಶಕ್ತಿ, ಪರಾಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ ಹಾಗೂ ಜ್ಞಾನಶಕ್ತಿಗಳನ್ನು ವಿಶ್ವಕರ್ಮನ ಮೂಲಕ ಸಾನಗ, ಸನಾತನ, ಅಹಭೂವನ ಪ್ರತ್ನಸ್ಯ ಮತ್ತು ಸುವರ್ಣ ಗೋತ್ರದ ಪಂಚಕರ್ಮಿಗಳಾದ ಕಬ್ಬಿಣ, ಕಟ್ಟಿಗೆ, ಲೋಹ, ಶಿಲ್ಪ, ಸುವರ್ಣ ಶಿಲ್ಪಿಗಳಿಗೆ ಕ್ರಮವಾಗಿ ನೀಡಿದಳೆಂದು ತಿಳಿಯುತ್ತದೆ.

ಕಮ್ಮಾರರು ಕುಲದ ದೈವ, ವೃತ್ತಿದೈವಗಳ ಜೊತೆಗೆ ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕರಾದ ತಿಂಥಣಿ ಮೌನೇಶ್ವರನನ್ನು, ನವಲಗುಂದದ ನಾಗಲಿಂಗ ಸ್ವಾಮಿಯನ್ನು, ಮಂಟೇಸ್ವಾಮಿಯನ್ನು, ವೀರಭದ್ರನನ್ನು ಆರಾಧಿಸುವುದುಂಟು.

ಕಮ್ಮಾರರ ಸಮುದಾಯ ಅತ್ಯಂತ ವಿಶಿಷ್ಟವಾಗಿ ಆಚರಿಸುವ ಹಬ್ಬವೆಂದರೆ ಯುಗಾದಿ. ಯುಗಾದಿ ಅಮವಾಸ್ಯೆಯ ದಿನ ಹೊಸ ಗೋಧಿಯನ್ನು ಕಾಳಿಗೆ ಅರ್ಪಿಸುತ್ತಾರೆ. ಐದು ದಿನಗಳವರೆಗೆ ಕಮ್ಮಾರಿಕೆ ವೃತ್ತಿಗೆ ಬಿಡುವು ಇರುತ್ತದೆ. ಕಮ್ಮಾರಿಕೆಯಲ್ಲಿ ಬಳಸುವ ಎಲ್ಲ ವಸ್ತುಗಳನ್ನು ಕುಲುಮೆಯ ಮುಂದೆ ಇಟ್ಟು ಪೂಜಿಸುತ್ತಾರೆ. ಪ್ರತಿ ದಿನವೂ ಸಿಹಿ ಅಡುಗೆಗಳನ್ನು ಮಾಡಿಕೊಂಡು ಹೊಸ ಬಟ್ಟೆಗಳನ್ನು ಧರಿಸಿಕೊಂಡು ಉತ್ಸಾಹದಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಪ್ರತಿ ದಿನ ಕಮ್ಮಾರರು ತಮ್ಮ ವೃತ್ತಿಯನ್ನು ಆರಾಧಿಸುವುದಕ್ಕಿಂತ ಮೊದಲು ಕುಲುಮೆಯನ್ನು ಪೂಜಿಸಿದ ನಂತರವೇ ಕೆಲಸವನ್ನು ಆರಂಭಿಸುತ್ತಾರೆ.

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿಯ ಅನೇಕ ಪ್ರದೇಶಗಳಲ್ಲಿ ಕಾಳಿಕಾಂಬೆಯ ದೇವಸ್ಥಾನಗಳಿರುವುದು ಕಂಡು ಬರುತ್ತದೆ. ಮಂಗಳೂರು ಮತ್ತು ಕಟ್ಟಪಾಡಿಯಲ್ಲಿರುವ ಕಾಳಿಕಾಂಬಾ ದೇವಸ್ಥಾನಗಳು ಅತ್ಯಂತ ಪ್ರಾಚೀನ ದೇವಸ್ಥಾನಗಳು. ಮೂಡಬಿದ್ರೆ, ಕಲ್ಲುಕುಟಿಕ, ಬಾರಕೂರು, ಕೋಟೆಕಾರು, ಉಪ್ಪಳ್ಳಿ ಹಾಗೂ ಕಾರ್ಕಳದಲ್ಲಿ ಕಾಳಿಕಾಂಬಾ ದೇವಸ್ಥಾನಗಳಿವೆ. ಉಪ್ಪಳ್ಳಿಯಲ್ಲಿ ನಾಗಲಿಂಗಸ್ವಾಮಿ ಮಠವಿದೆ.

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿರುವ ಕಮ್ಮಾರರು ತಮ್ಮ ಆರಾಧ್ಯ ದೈವಗಳ ಜೊತೆಗೆ ವೀರಭದ್ರ, ಪಂಜುರ್ಲಿ, ಕಲ್ಲುರ್ಟಿ ಕಲ್ಕುಡ ಮುಂತಾದ ಭೂತಗಳನ್ನು ಆರಾಧಿಸುತ್ತಾರೆ. ಕೊಳ್ಳೆಗಾಲ ತಾಲೂಕಿನ ಕಮ್ಮಾರರು ಮಂಟೇಸ್ವಾಮಿ, ಸಿದ್ದಪ್ಪಾಜಿ ಅವರನ್ನು ಆರಾಧಿಸುವುದು ಕಂಡುಬರುತ್ತದೆ. ಪ್ರತಿವರ್ಷ ನಡೆಯುವ ಮಂಟೇಸ್ವಾಮಿ, ಸಿದ್ದಪ್ಪಾಜಿಯ ಸ್ಥಳಗಳಿಗೆ ಹೋಗಿ ಭಕ್ತಿಯಿಂದ ಸೇವೆ ಸಲ್ಲಿಸುವುದು ಕಂಡು ಬರುತ್ತದೆ.

**ಅಡಿಟಿಪ್ಪಣಿಗಳು:**

೧. ಗಂಗಾಧರ ದೈವಜ್ಞ, ೨೦೦೦, ಪುಟ ೧೩.

## ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ವ್ಯವಸ್ಥೆ

### ೫.೧ ಆರ್ಥಿಕ ಜೀವನ:

ಆದಿ ಮಾನವನ ಬದುಕಿನ ಇತಿಹಾಸವನ್ನು ಗಮನಿಸಿದಾಗ ಅವನು ಅನಾದಿಕಾಲದಿಂದ ಆಧುನಿಕ ಕಾಲದವರೆಗೆ ನಡೆದುಕೊಂಡು ಬಂದ ದಾರಿಯನ್ನು ಗಮನಿಸಿದಾಗ ಕಾಲ ಕಾಲಕ್ಕೆ ಆದ ಬದಲಾವಣೆಗಳು ವೈಜ್ಞಾನಿಕ ಅನ್ವೇಷಣೆಗಳ ಮೂಲಕ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ಶೈಕ್ಷಣಿಕವಾಗಿ ಮಾನವ ಮುಂದುವರೆದ ಮತ್ತು ಹಿಂದೆ ಉಳಿದ ಹತ್ತು ಹಲವಾರು ಮುಖಗಳು ಕಂಡು ಬರುತ್ತವೆ. ಆದಿಮಾನವ ಬೇಟೆ, ಕೃಷಿ, ಪಶುಪಾಲನೆ ಹೀಗೆ ಒಂದು ಹಂತದಿಂದ ಇನ್ನೊಂದು ಹಂತವನ್ನು ತಲುಪುವಾಗ ಅನೇಕ ಬದಲಾವಣೆಗಳಿಗೆ ಒಳಗಾಗಿದ್ದಾನೆ . ಮಾನವನ ಬದುಕಿನಲ್ಲಿ ಬದಲಾವಣೆ ಎಂಬುವುದು ಇದೊಂದು ಸಹಜ ಕ್ರಿಯೆ. ಬದಲಾವಣೆಗೆ ಸತತ ಪರಿಶ್ರಮ ಶೋಧನೆ ಅವಶ್ಯವಿರುತ್ತದೆ.

ಒಂದು ಸಮುದಾಯವು ಅನುಸರಿಸುತ್ತಿರುವ ಆಧುನಿಕ ಚಟುವಟಿಕೆಗಳು, ಮಾನವನ ಶ್ರಮ, ಸಂಪತ್ತಿನ ಬಳಕೆ, ಸಂಪನ್ಮೂಲಗಳ ಪಾತ್ರ, ಜನಸಂಖ್ಯೆ, ಶಿಕ್ಷಣದ ಪಾತ್ರ, ಪ್ರಭಾವ, ಕೌಟುಂಬಿಕ ಜೀವನದಲ್ಲಿನ ಆವರ್ತನಗಳು ಉದ್ಯೋಗಗಳ ಹಂಚಿಕೆಯಿಂದ ಬದಲಾಗುತ್ತಿರುವ ಸಮಾಜದಲ್ಲಿ ನಿರ್ಮಿಸಿಕೊಂಡಿರುವ ರೀತಿ ನೀತಿಗಳನ್ನು ತಿಳಿಯಬಹುದಾಗಿದೆ. ಪ್ರತಿಯೊಂದು ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕತೆ ಎಂಬುದು ತುಂಬಾ ಮಹತ್ವದ ಪಾತ್ರ ನಿರ್ವಹಿಸುತ್ತದೆ. ಸಮುದಾಯದ ಜನರ ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ರಾಜಕೀಯ ರೀತಿ–ನೀತಿಗಳಲ್ಲಿನ ಬದಲಾವಣೆಗಳು ಅವರ ಉತ್ಪಾದನೆ ಮತ್ತು ಆರ್ಥಿಕ ವ್ಯವಸ್ಥೆಯ ಮೇಲೆಯೇ ನಿರ್ಧಾರವಾಗುತ್ತದೆ. ಒಂದು ಸಮುದಾಯದ ಸರ್ವಾಂಗೀಣ ಆಶಯಗಳು ರೂಪಗೊಳ್ಳುವುದು ಅವರ ಆರ್ಥಿಕ ಸ್ಥಿತಿಗತಿಗಳ ಮೇಲೆ. ಈ ಆರ್ಥಿಕ ಸ್ಥಿತಿ ಗತಿಗಳ ಮೇಲೆ ಆ ಸಮುದಾಯ ಅಥವಾ ಕುಟುಂಬ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಕಂಡು ಕೊಳ್ಳಬಹುದು. 'ಸಮುದಾಯಗಳ ವರ್ತಮಾನ ಕಾಲದ ಸ್ಥಿತಿಗತಿಗಳಿಗೆ ನಿನ್ನೆಗಳಲ್ಲಿ ಕಾರಣಗಳಿರುತ್ತವೆ. ಆದ್ದರಿಂದ ಸಮುದಾಯವೊಂದರ ಇವತ್ತಿನ

ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲು ಅದರ ಆರ್ಥಿಕ ಚಟುವಟಿಕೆಗಳ ರೂಪರೇಷೆಗಳನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ[೧]

ಪ್ರತಿಯೊಂದು ಸಮುದಾಯದ ಸಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ರಾಜಕೀಯವಾದ ಜೀವನವನ್ನು ನಿರ್ಧರಿಸುವಲ್ಲಿ ಆ ಸಮುದಾಯ ಅಥವಾ ಆ ಕುಟುಂಬ ಅನುಸರಿಸುತ್ತಿರುವ ವೃತ್ತಿಗಳು ಬಹುಮುಖ್ಯ ಪಾತ್ರವಹಿಸುತ್ತವೆ. ಆದಿಮಾನವ ಆಹಾರದ ಕೊರತೆಯನ್ನು ನೀಗಿಸಿಕೊಳ್ಳಲು ಬೇಟೆಯಿಂದ ಪಶುಪಾಲನೆ, ಪಶುಪಾಲನೆಯಿಂದ ಕೃಷಿ ಹೀಗೆ ಮೂಲ ಉದ್ಯೋಗಗಳನ್ನು ಬದಲಾಯಿಸಿಕೊಂಡು ಬೇರೆ ಬೇರೆ ವೃತ್ತಿಗಳನ್ನು ಅಂದಿನಿಂದ ಇಂದಿನವರೆಗೆ ಅನುಸರಿಸಿಕೊಳ್ಳುತ್ತ ಅವನು ತನ್ನ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಗೊಳಿಸಿಕೊಳ್ಳುತ್ತಾ ಬಂದಿರುವುದನ್ನು ಕಾಣುತ್ತೇವೆ.

ಆದಿ ಮಾನವ ಬೇಟೆಯಿಂದ ಕೃಷಿಯ ಮೂಲಕ ಆಹಾರ ಉತ್ಪಾದನೆಯನ್ನು ಕಂಡುಕೊಂಡು 'ಕುಮರಿ' ಬೇಸಾಯ ಮಾಡುತ್ತಿದ್ದ ಸಂದರ್ಭದಲ್ಲಿ ಕಬ್ಬಿಣದ ಬಳಕೆ ಹಂತ ಹಂತವಾಗಿ ಪ್ರಾರಂಭವಾಯಿತು. ಮೂಲ ಮಾನವ ಕೃಷಿಯ ಮೂಲಕ ಆಹಾರ ಉತ್ಪಾದನೆ ಪ್ರಾರಂಭಿಸಿದ ಮೇಲೆ ಆದಿವಾಸಿಗಳಲ್ಲಿಯ ಒಂದು ವರ್ಗ ನೂರಾರು ವರ್ಷಗಳ ವರೆಗೆ ಸತತ ಶ್ರಮ ವಹಿಸಿ ಕಬ್ಬಿಣವೆಂಬ ನಿಕ್ಷೇಪವನ್ನು ಪತ್ತೆ ಮಾಡಿ ಅದನ್ನು ಬೆಂಕಿಯ ಮೂಲಕ ಸಂಸ್ಕರಿಸುವ ವಿಧಾನವನ್ನು ಕಂಡುಕೊಂಡು ವನ್ಯ ಮೃಗಗಳಿಂದ ರಕ್ಷಿಸಿಕೊಳ್ಳಲು ಆಯುಧಗಳನ್ನು ಹಾಗೂ ಕೃಷಿಗೆ ಬೇಕಾದ ಉಪಕರಣಗಳನ್ನು ಸೃಷ್ಟಿಸುವ ಮೂಲಕ ಆದಿ ಮಾನವರ ಬದುಕಿನಲ್ಲಿ ಹೊಸದೊಂದು ಅಧ್ಯಾಯ ಪ್ರಾರಂಭಿಸಿದರು. ಕಬ್ಬಿಣದ ಶೋಧನೆ ಸಂಸ್ಕರಣೆಯನ್ನು ಕಂಡುಕೊಂಡು ಅದರ ಮೂಲಕ ಅನೇಕ ವಸ್ತುಗಳನ್ನು ಸಿದ್ಧಪಡಿಸಿ ಕೃಷಿ ಹಾಗು ಬೇಟೆಗೆ ಉಪಯೋಗಿಸತೊಡಗಿದ ಮೇಲೆ ಮಾನವನ ಉತ್ಪಾದನಾ ವ್ಯವಸ್ಥೆಯಲ್ಲಿ ಗಣನೀಯವಾದ ಸಾಧನೆಯನ್ನು ಸಾಧಿಸಿದಂತಾಯಿತು. ಆಹಾರಕ್ಕಾಗಿ ನಿತ್ಯ ಅಲೆಯುತ್ತಿದ್ದ ಆದಿಮಾನವ ಒಂದು ಹಂತದಲ್ಲಿ ಅಳುವಿನ ಅಂಚಿನಲ್ಲಿದ್ದ ಎಂದೂ ಹೇಳಬಹುದು. ಕೃಷಿಯ ಮೂಲಕ ಆಹಾರ ಉತ್ಪಾದನೆ ಮತ್ತು ಸಂಗ್ರಹಣೆಯನ್ನು ಕಂಡುಕೊಡ ಮೇಲೆ ಅವನ ಬದುಕು ಹಂತ ಹಂತವಾಗಿ ಬದಲಾವಣೆಯಾಗತೊಡಗಿತು.

ಆ ಕಾಲಘಟ್ಟದಿಂದಲೇ ಕಬ್ಬಿಣದಿಂದ ಕೃಷಿ ಉಪಕರಣಗಳ ಮೂಲಕ ಕೃಷಿಕ ವೃತ್ತಿಯನ್ನು ಕೈಗೊಳ್ಳಲು ಪ್ರಾರಂಭಿಸಿದ ಮೇಲೆ ಆಹಾರ ಉತ್ಪಾದನೆಯ ಪ್ರಮಾಣ ಮತ್ತಷ್ಟು ವೃದ್ಧಿಸತೊಡಗಿತು ಮತ್ತು ಕಬ್ಬಿಣವನ್ನು ಕಂಡುಕೊಂಡ ಮಾನವನನ್ನು ಘನತೆ ಗೌರವಗಳಿಂದ ಕಾಣತೊಡಗಿದರು. ಈ ಕಾಲಘಟ್ಟದಲ್ಲಿ ಕಬ್ಬಿಣವನ್ನು ಕಂಡುಕೊಂಡ ಸಮುದಾಯ ಅದೇ ವೃತ್ತಿಯನ್ನು ಮುಂದುವರಿಸಿಕೊಂಡು ಇತರೆ ಎಲ್ಲಾ ಜನರ ಆಶೋತ್ತರಗಳಿಗೆ ಬೇಕಾಗುವಂತಹ ಆಯುಧಗಳನ್ನು, ಕೃಷಿ ಉಪಕರಣಗಳನ್ನು ಸೃಷ್ಪಸಿ ಸಿದ್ಧಪಡಿಸುವ ಕಾರ್ಯದಲ್ಲಿ ನಿರತವಾಯಿತು. ಸಾವಿರಾರು ವರ್ಷಗಳವರೆಗೆ ಕಬ್ಬಿಣದ ಮೂಲಕ ಹೊಸ ಹೊಸ ಸೃಷ್ಟಿಗಳನ್ನು ಕಂಡುಕೊಳ್ಳುತ್ತಾ ಅದರಲ್ಲಿ

ಯಶಸ್ವಿಯಾಗಿ ಮಾನವನ ಬೆಳವಣಿಗೆಯಲ್ಲಿ ಕ್ರಾಂತಿಯನ್ನು ಉಂಟುಮಾಡಿದರು. ಕಬ್ಬಿಣವನ್ನು ಕಂಡುಕೊಂಡ ಈ ಸಮುದಾಯವನ್ನೇ ಕಮ್ಮಾರರು, ಕಂಬಾರರು ಎಂದು ಹೆಸರಿಸುವಂತಾಯಿತು.

ಕಮ್ಮಾರಿಕೆಯಂತಹ ವೃತ್ತಿಯನ್ನು ಅನುಸರಿಸುತ್ತಿದ್ದ ಸಮುದಾಯ ವೇದಕಾಲಕ್ಕಿಂತಲೂ ಪೂರ್ವದಿಂದಲೇ ಬೆಳೆದುಕೊಂಡು ಬಂದಿರುವಂತಹದ್ದು. ವೇದ ಕಾಲಕ್ಕೆ ಬಂದಾಗ ಇವರ ಘನತೆ ಗೌರವಗಳು ಮತ್ತಷ್ಟು ಹೆಚ್ಚಾಗತೊಡಗಿದವು.

ಕೃಷಿ ಉತ್ಪಾದನೆ ಹೆಚ್ಚಾಗುತ್ತಾ ನಡೆದಂತೆಲ್ಲಾ ಕಮ್ಮಾರರ ವೃತ್ತಿಗಳು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯತೊಡಗಿದವು. ರಾಜಮಹಾರಾಜರಿಗೆ ಯುದ್ಧಕ್ಕೆ ಬೇಕಾಗುವ ಈಟಿ, ಭರ್ಚಿ, ಡಾಲು, ಮುಂತಾದ ಆಯುಧಗಳನ್ನು ಈ ಕಮ್ಮಾರರು ಸಿದ್ಧಪಡಿಸಿ ಕೊಡುತ್ತಿದ್ದರು. 'ಇತಿಹಾಸ ಕಾಲದಲ್ಲಿ ದೊಡ್ಡ ದೊಡ್ಡ ಸಾಮ್ರಾಜ್ಯಗಳು ತಲೆಎತ್ತಿ ಅವುಗಳ ಅಳಿವು ಉಳಿವು ಯುದ್ಧವನ್ನು ಅವಲಂಬಿಸಿದ್ದರೆ, ಯುದ್ಧದ ಸೋಲು ಗೆಲುವು ಶಸ್ತ್ರಾಸ್ತ್ರಗಳನ್ನು ಅವಲಂಬಿಸಿತ್ತು. ಈ ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿದ್ದ ಕಮ್ಮಾರರ ಬೇಡಿಕೆ ಅಧಿಕವಾಯಿತು. ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುತ್ತಿದ್ದ ಕಮ್ಮಾರರ ಕುಟುಂಬಗಳಿಗೆ ರಾಜರು ಸಾಮಾಜಿಕ ಸ್ಥಾನಮಾನ ನೀಡಿ ಅವರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿ ಅವರನ್ನು ಸಂತೃಪ್ತಗೊಳಿಸಿ ಅಥವಾ ಅಧಿಕಾರದ ದರ್ಪದಿಂದ ಕಮ್ಮಾರಿಕೆ ವೃತ್ತಿಯವರನ್ನು ಹಿಡಿದು ತಂದು ಆಯುಧಗಳನ್ನು ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಒಂದೆಡೆ ಕೃಷಿಗೆ ಬೇಕಾದ ಉಪಕರಣಗಳನ್ನು ಇನ್ನೊಂದೆಡೆ ರಾಜರಿಗೆ ಬೇಕಾದ ಶಸ್ತ್ರಾಸ್ತ್ರಗಳನ್ನು ತಯಾರಿಸಿಕೊಡುತ್ತಿದ್ದ ಕಮ್ಮಾರರು ಉತ್ತಮ ಸ್ಥಿತಿಯಲ್ಲಿದ್ದರು ಮತ್ತು ರಾಜ ಮಹಾರಾಜರು ಇವರನ್ನು ಗೌರವದಿಂದ ಕಾಣುತ್ತಿದ್ದರು ಎಂದು ತಿಳಿಯುತ್ತದೆ.'

ಕಬ್ಬಿಣದಿದಲೇ ಸೃಷ್ಟಿ ಎಂಬ ಮಾತು ಒಂದು ಕಾಲಕ್ಕಿತ್ತು ಇಂದಿಗೂ ಇದೆ. ರಾಜ್ಯದ ಕಬ್ಬಿಣದ ಅದಿರನ್ನು ರಫ್ತು ಮಾಡುತ್ತಿರುವ ಮತ್ತು ನಿಸರ್ಗವನ್ನು ಹಾಳು ಮಾಡುತ್ತಿರುವವರ ವಿರುದ್ಧ ಜನರು ಪ್ರತಿಭಟಿಸುವುದನ್ನು ಕಾಣುತ್ತೇವೆ. ಮಾನವನ ಬದುಕಿಗೆ ಅತೀ ಅವಶ್ಯಕವಾಗಿ ಬೇಕಾಗಿದ್ದುದು ಕಬ್ಬಿಣ. ಬಂಗಾರ, ಬೆಳ್ಳಿ, ಹಿತ್ತಾಳೆ, ತಾಮ್ರ ಸೀಸ ಮುಂತಾದ ವಸ್ತುಗಳು ಮಾನವನಿಗೆ ದೊರೆಯದಿದ್ದರೂ ಅವನು ಬದುಕುತ್ತಾನೆ ಆದರೆ ಕಬ್ಬಿಣ ಮಾತ್ರ ಜನಸಾಮಾನ್ಯನಿಂದ ಹಿಡಿದು ಶ್ರೀಸಾಮಾನ್ಯನವರೆಗೆ ಬೇಕಾಗಿದೆ. ಮುಂದಿನ ಪೀಳಿಗೆಗೂ ಕಬ್ಬಿಣದ ಅವಶ್ಯಕತೆ ಇದ್ದೇ ಇರುತ್ತದೆ. ಹೀಗಾಗಿ ನಾಡಿನ ಕಬ್ಬಿಣ ಹಾಗೂ ಇತರೆ ಖನಿಜ ಸಂಪತ್ತನ್ನು ಉಳಿಸಿಕೊಳ್ಳುವ ಜವಾಬ್ದಾರಿ ಎಲ್ಲರ ಮೇಲೂ ಇರುತ್ತದೆ. ಒಂದರ್ಥದಲ್ಲಿ ಕಬ್ಬಿಣವೇ ಮಾನವನ ಬದುಕು ಎಂದು ಹೇಳಬಹುದು. ಅತ್ಯಂತ ಉಪಯುಕ್ತವಾದ, ತೀರ ಅವಶ್ಯಕವಾದ, ಮಾನವನ ಬದುಕಿನಲ್ಲಿ ಹಾಸು ಹೊಕ್ಕಾದ ಕಬ್ಬಿಣವನ್ನು ಉಳಿಸಿಕೊಳ್ಳಬೇಕಾದದ್ದು ಎಲ್ಲರ ಕರ್ತವ್ಯವಾಗಿದೆ.

ಮಾನವ ಕಬ್ಬಿಣವನ್ನು ಕಂಡುಹಿಡಿದ ಮೇಲೆ ಅದನ್ನು ಮೊದಲು ಕೃಷಿ ಉಪಕರಣಗಳಿಗೆ ಹಾಗೂ ಆಯುಧಗಳನ್ನು ತಯಾರಿಸಲು ಬಳಸಿದ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ, ಕಬ್ಬಿಣ

ಹಾಗೂ ಕಮ್ಮಾರಿಕೆಗೆ ಅವಿನಾಭಾವ ಸಂಬಂಧವಿದೆ. ಎಲ್ಲಿ ಕೃಷಿ ಇರುತ್ತದೋ ಅಲ್ಲಿ ಕಮ್ಮಾರರ ಕುಟುಂಬಗಳಿರುತ್ತವೆ ಎಂದೇ ಅರ್ಥ. ಕೃಷಿ ಚಟುವಟಿಕೆಗಳಿಗೆ ಬೇಕಾಗುವ ಎಲ್ಲಾ ಕಬ್ಬಿಣದ ವಸ್ತುಗಳು ಒಂದು ಕಾಲಕ್ಕೆ ಕಮ್ಮಾರರ ಕುಲುಮೆಗಳಲ್ಲಿಯೇ ಸಿದ್ಧವಾಗುತ್ತಿದ್ದವು. ಕಮ್ಮಾರನಿಲ್ಲದೇ ಕೃಷಿ ಇಲ್ಲ ಎಂಬ ಮಾತು ಕೇಳಿಬರುತ್ತಿತ್ತು. ಮುಂಗಾರು ಮಳೆ ಪ್ರಾರಂಭವಾದರೆ ಕಮ್ಮಾರರಿಗೆ ಬಿಡುವಿಲ್ಲದ ಕೆಲಸ. ಒಂದು ಕಾಲಕ್ಕೆ ಕಮ್ಮಾರಗನ್ನು ಕೃಷಿಕರು ಅತ್ಯಂತ ಪೂಜ್ಯ ಭಾವನೆಯಿಂದ ಕಾಣುತ್ತಿದ್ದರು. ಆಧುನಿಕತೆ, ತಂತ್ರಜ್ಞಾನ ಬೆಳೆದಂತೆಲ್ಲಾ ಕಮ್ಮಾರರು ಸಿದ್ಧಪಡಿಸುತ್ತಿದ್ದ ವಸ್ತುಗಳೆಲ್ಲ ಕಾರ್ಖಾನೆಗಳಲ್ಲಿ ಸಿದ್ಧವಾಗುತ್ತಿರುವುದರಿಂದ ಕಮ್ಮಾರರ ಪಾರಂಪರಿಕ ವೃತ್ತಿಗಳು, ಅವರ ಸ್ಥಿತಿಗತಿಗಳು ಹಂತ ಹಂತವಾಗಿ ಮೂಲೆ ಗುಂಪಾಗುತ್ತ ಸಾಗುತ್ತಿವೆ ಎಂಬುದನ್ನು ಕಾಣುತ್ತೇವೆ.

ಕಬ್ಬಿಣದ ಬಳಕೆ, ಕಮ್ಮಾರರ ಬದುಕಿನ ಚಿತ್ರಣವನ್ನು ಶಾಸನ ಹಾಗೂ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾಣುತ್ತೇವೆ. ಕಬ್ಬಿಣ ಮಾನವನಿಗೆ ಅತೀ ಅವಶ್ಯ ಮತ್ತು ಅನಿವಾರ್ಯ. ಈ ಕಬ್ಬಿಣವೇ ಮಾನವನ ಬದುಕನ್ನು ರೂಪಿಸುತ್ತದೆ ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಕಬ್ಬಿಣ ವೃತ್ತಿಯನ್ನು ಅವಲಂಬಿಸಿ ಬದುಕುತ್ತಿರುವ ಸಮುದಾಯವಾದ ಕಮ್ಮಾರರು ಒಂದು ಕಾಲಕ್ಕೆ ಆರ್ಥಿಕವಾಗಿ ಸಬಲರಾಗಿದ್ದರು ಎಂದು ತಿಳಿಯುತ್ತದೆ. ಮಂಟೇಸ್ವಾಮಿ ಕಾವ್ಯದ ಸಿದ್ದಪ್ಪಾಜಿ ಪ್ರಸಂಗವನ್ನು ಗಮನಿಸಿದಾಗ ಸಿದ್ದಪ್ಪಾಜಿ ಹಲಗೂರಿನ ಕಮ್ಮಾರರ ಹತ್ತಿರ ಕಬ್ಬಿಣದ ಭಿಕ್ಷೆ ಬೇಡಲು ಬಂದಾಗ, ಹಲಗೂರಿನ ಕಮ್ಮಾರರು 'ಬಂಗಾರದ ಭಿಕ್ಷೆ ಬೇಕಾದರೂ ಕೊಡುತ್ತೇವೆ ಆದರೆ ಕಬ್ಬಿಣದ ಭಿಕ್ಷೆ ಕೊಡುವುದಿಲ್ಲ' ಎಂದು ಹೇಳುವ ಮಾತನ್ನು ಗಮನಿಸಿದರೆ ಆ ಕಾಲಕ್ಕೆ ಕಬ್ಬಿಣದ ಮಹತ್ವ ಹೇಗಿತ್ತು ಮತ್ತು ಅಂದಿನ ಕಮ್ಮಾರರ ಆರ್ಥಿಕ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಕಬ್ಬಿಣದ ಅದಿರು ಹೇರಳವಾಗಿ ದೊರೆಯುತ್ತಿದ್ದುದರಿಂದ ಅದರ ಉಪಯೋಗವನ್ನು ಕಂಡುಕೊಂಡಿದ್ದ ರಾಜರು ತಮ್ಮ ಆಡಳಿತದ ಅವಧಿಯಲ್ಲಿ ಇಲ್ಲಿಯ ಕಬ್ಬಿಣದ ಮೂಲಕ ಶಸ್ತ್ರಾಸ್ತ್ರಗಳನ್ನು ಕಮ್ಮಾರರ ಮೂಲಕ ಸಿದ್ಧಪಡಿಸಿ ಅರಬ್ ಮುಂತಾದ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಅಲ್ಲಿಂದ ಕುದುರೆಗಳನ್ನು ಮತ್ತಿತರ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು ಎಂದು ತಿಳಿಯುತ್ತದೆ. ಪ್ರಾಚೀನ ಕಾಲದಿಂದಲೂ ಕಬ್ಬಿಣದಿಂದ ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿದ್ದ ಕಾರ್ಯಾಗಾರಗಳು ಇದ್ದವು ಎಂದು ತಿಳಿಯುತ್ತದೆ.

'ಐರೋಪ್ಯರು ಪರಿಚಯಿಸಿದ ಬೃಹತ್ ಕೈಗಾರಿಕೆಗಳ ಪ್ರವೇಶದಿಂದಾಗಿ ಇಲ್ಲಿ ಗುಡಿ ಕೈಗಾರಿಕೆಗಳನ್ನೇ ನಂಬಿ ಬದುಕುತ್ತಿದ್ದ ಎಷ್ಟೋ ಸಮುದಾಯಗಳಿಗೆ ಕೆಲಸವಿಲ್ಲದೆ ಜೀವನ ನಿರ್ವಹಣೆಗಾಗಿ ಮತ್ತೊಂದು ವೃತ್ತಿಗೆ ಅಂಟಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಯಿತು. ಕಬ್ಬಿಣದಿಂದ ಅನೇಕ ವಸ್ತುಗಳನ್ನು ತಯಾರಿಸುವ ಕೈಗಳು ಬೃಹತ್ ಕೈಗಾರಿಕೆಗಳ ಕಾರ್ಯವೈಖರಿ ಕಂಡು ಆತಂಕಕ್ಕೊಳಗಾದವು.'

"ಯುರೋಪಿಯನ್ನರು ಪರಿಚಯಿಸಿದ ಕಬ್ಬಿಣ ಭಾರತೀಯರು ಸಾಂಪ್ರದಾಯಿಕವಾಗಿ ತಯಾರಿಸುತ್ತಿದ್ದ ಕಬ್ಬಿಣಕ್ಕಿಂತ ಅತೀ ಕಡಿಮೆ ವೆಚ್ಚದಲ್ಲಿ ದೊರೆಯುತ್ತಿತ್ತು. ಸಾಂಪ್ರದಾಯಿಕ ಕಬ್ಬಿಣ ತಯಾರಿಕೆಯಿಂದಲೇ ಪಡೆದ 'ಕಬ್ಬಿಣ ತಯಾರಿಕಾ ತಂತ್ರಗಾರಿಕೆ' ಯನ್ನು ಕಾರ್ಖಾನೆಗಳಿಗೆ ಅಳವಡಿಸಿ ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣ ತಯಾರಿಸತೊಡಗಿದಂತೆ ತಮ್ಮ ಶ್ರಮ ಶಕ್ತಿಯನ್ನೇ ನಂಬಿ ಜೀವನ ನಡೆಸುತ್ತಿದ್ದ ಶ್ರಮಿಕ ಸಮುದಾಯಗಳಿಗೆ ದಿಕ್ಕು ತೋಚದಂತಾಗಿ ಪರ್ಯಾಯ ಜೀವನ ಮಾರ್ಗಗಳಿಗೆ ಹೊಲಸೆ ಹೋದವು".[೨]

ಕಮ್ಮಾರರು ಕೃಷಿ ಉಪಕರಣಗಳನ್ನು ಸಿದ್ಧಪಡಿಸುತ್ತಿದ್ದರಲ್ಲದೇ ಕೃಷಿಕ ವೃತ್ತಿಯಲ್ಲಿ ಉಪಯೋಗಿಸುತ್ತಿದ್ದ ಚಕ್ಕಡಿ (ಬಂಡಿ) ಗಾಲಿಗಳಿಗೆ ಹಳಿ ಹಾಕುತ್ತಿದ್ದರು. ಹಳಿ ಹಾಕುವ ವೃತ್ತಿಯನ್ನೂ ಸಹ ಇಂದು ವೆಲ್ಡಿಂಗ ಕಾರ್ಯಾಗಾರಗಳು ನಿರ್ವಹಿಸುತ್ತಿದ್ದುದರಿಂದ ಕಮ್ಮಾರರ ವೃತ್ತಿಗಳ ಮೇಲೆ ಮತ್ತೊಂದು ಬೇರೆ ಕೊಟ್ಟಂತಾಗಿದೆ. ಹೀಗಾಗಿ ಇಂದು ಕಮ್ಮಾರರು ಕೇವಲ ಕೊಡಲಿ, ಕುಂಟಿ, ಕುಡುಗೋಲು, ಕುರುಪಿ ಇವುಗಳನ್ನು ಹಣೆದು ಹರಿತು ಮಾಡಿಕೊಡುವುದಕ್ಕೆ ಮಾತ್ರ ಸೀಮಿತರಾಗಿದ್ದಾರೆ. ಒಟ್ಟಿನಲ್ಲಿ ಗ್ರಾಮೀಣ ಪ್ರದೇಶದ ಕಮ್ಮಾರರ ಕುಲುಮೆಗಳು ಹಂತ ಹಂತವಾಗಿ ಮುಚ್ಚಿಕೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ.

ಒಂದು ಕಾಲದಲ್ಲಿ ಮುಂಗಾರು ಮಳೆ ಪ್ರಾರಂಭವಾಗುತ್ತಿದ್ದಂತೆ ಕೃಷಿಕರು ಕಮ್ಮಾರರ ಮನೆಗಳ ಮುಂದೆ ಸಾಲುಗಟ್ಟಿ ನಿಂತು ಕೃಷಿಗೆ ಬೇಕಾದ ವಸ್ತುಗಳನ್ನು ಸಿದ್ಧಪಡಿಸಿಕೊಂಡು ಹೋಗುತ್ತಿದ್ದರು. ಇಂದು ರೈತರು ಮಾರುಕಟ್ಟೆಗಳಲ್ಲಿ ದೊರೆಯುವ ಕೃಷಿ ಉಪಕರಣಗಳನ್ನು ಖರೀದಿಸುತ್ತಿರುವುದರಿಂದ ಕಮ್ಮಾರರ ಕಾರ್ಯಾಗಾರಗಳು ಬಣ ಬಣ ಎನ್ನುತ್ತಿವೆ.

ಕಮ್ಮಾರರು ಒಂದು ಘಟ್ಟದಲ್ಲಿ ಹಣಕ್ಕಾಗಿ ಕಮ್ಮಾರಿಕೆಯನ್ನು ಮಾಡುತ್ತಿರಲಿಲ್ಲ. ಕೃಷಿಕರು ಬೆಳೆಯುತ್ತಿದ್ದ ಎಲ್ಲಾ ಬೆಳೆಗಳಲ್ಲಿ ಪಾಲನ್ನು ಕಮ್ಮಾರರಿಗೆ ಕೊಡುತ್ತಿದ್ದರು. ಇದಕ್ಕೆ 'ಆಯಾ' ಕೊಡುವ ಪದ್ಧತಿ ಎಂದು ಹೇಳುವರು. ಇಂದು ಆಯ ಕೊಡುವ ಪದ್ಧತಿ ಮಾಯವಾಗಿದೆ. ಕಮ್ಮಾರರು ನಿರ್ವಹಿಸುವ ವೃತ್ತಿಗೆ ಇಂದು ಹಣ ಪಡೆಯುತ್ತಿರುವುದು ಕಂಡು ಬರುತ್ತಿದೆ.

ಗ್ರಾಮೀಣ ಪ್ರದೇಶದಲ್ಲಿಯ ಕಮ್ಮಾರರ ಯುವ ಪೀಳಿಗೆ ಇಂದು ಕಮ್ಮಾರಿಕೆ ವೃತ್ತಿಯ ಮೂಲಕ ಜೀವನ ಸಾಗಿಸಲಿಕ್ಕೆ ಆಗುವುದಿಲ್ಲ ಎಂಬುವುದನ್ನು ಕಂಡುಕೊಂಡಿರುವ ಅವರು, ಪಾರಂಪರಿಕ ವೃತ್ತಿ ಬಿಟ್ಟು ಬಡಗಿತನ, ಬಾರ್ ಬೆಂಡಿಗ್, ಕೂಲಿ ಹಾಗೂ ಇತರೆ ವೃತ್ತಿಗಳನ್ನು ಆರಿಸಿಕೊಂಡು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿರುವುದು ಕಂಡು ಬರುತ್ತದೆ.

ಆಧುನಿಕ ಕೃಷಿ ನೀತಿ, ಕಾರ್ಖಾನೆಗಳಲ್ಲಿ ಕೃಷಿ ಉಪಕರಣಗಳ ತಯಾರಿಕೆ, ನಗರೀಕರಣ, ವೈಜ್ಞಾನೀಕರಣ ಮುಂತಾದವುಗಳು ಕಮ್ಮಾರಿಕೆಯಂತಹ ಗುಡಿ ಕೈಗಾರಿಕೆಗಳ ಮೇಲೆ ಪ್ರಭಾವ ಬೀರಿದ ಪರಿಣಾಮವಾಗಿ ಕಮ್ಮಾರರ ವೃತ್ತಿಗಳು ಮೂಲೆಗುಂಪಾಗುತ್ತಿವೆ ಎಂದು ಹೇಳಬಹುದು.

**೫.೧.೧. ಕಮ್ಮಾರರು ತಯಾರಿಸುತ್ತಿದ್ದ ವಸ್ತುಗಳು:**

**೫.೧.೧.೧. ಆಯುಧಗಳು:**

ಮಾನವ ಮೊದಲಿಗೆ ಕಬ್ಬಿಣ ಬಳಸಿಕೊಂಡದ್ದು ಆಯುಧ ನಿರ್ಮಾಣಕ್ಕಾಗಿ. ಆತ್ಮ ರಕ್ಷಣೆ ಮತ್ತು ಆಹಾರ ಸಂಪಾದನೆಗಾಗಿ. ಮಾನವನಿಗೆ ಆಯುಧಗಳು ಅನಿವಾರ್ಯವಾಗಿದ್ದುವು. ಕನ್ನಡ ಸಾಹಿತ್ಯದಲ್ಲಿ ಹಲವಾರು ವಿದಧ ಆಯುಧಗಳನ್ನು ಹೆಸರಿಸಿದ್ದಾರೆ. ಚಕ್ರ, ಬೈಂಡಿವಾಳ್, ಬ್ರುಶುಂಡಿ, ದೃಘನ, ದಶಕಂಟಕ, ಮುಸಲ, ಮೌಷ್ಟಿಕ, ಮಯೂಖ, ಲಗಂಡ, ಲವಿತ್ರ, ಗರಿಫ, ಪ್ರಾಸಪಾಶ, ಶಕ್ತಿ, ಶತಘ್ನಿ, ಸೀರ, ಸ್ಥೂನ, ತೋಮರ, ಗದೆ, ಗೋಶೀರ್ಷ, ಅಮುಕ್ತ, ವಜ್ರ, ಅಸ್ತರ, ಅತಿಧೇನುಕ, ಪಟ್ಟಸ, ಮುದ್ಗುರ, ಪಿನಾಕ, ಕುಂತ, ಕಾಳರಾತ್ರಿ, ಯಾಪನ, ನಳಿಕಾ, ಇವು ಪ್ರಾಚೀನ ಯುದ್ಧಗಳಲ್ಲಿ ಬಳಸುತ್ತಿದ್ದ ಆಯುಧಗಳು. ಆನೆಗಳನ್ನು ಹೆದರಿಸುವ "ಹಸ್ತಯಂತ್ರ", ಶತ್ರು ಸೈನ್ಯವನ್ನು ಸುಡುವ "ಸಂಘಟ್ಟಿ" ಎಂಬ ಅಗ್ನಿಯಂತ್ರ, ಬೆಂಕಿ ಆರಿಸುವ ಪರ್ಜನ್ಯಕ ಎಂಬ ಉದಕಯಂತ್ರ, ಗೋಡೆ ಉರುಳಿಸುವ "ಉದ್ಘಾತಿಮಾ", ಕಲ್ಲು ಎಸೆಯುವ "ಆಸ್ಫೋಟಿಮ", ನಡೆಯುವವರನ್ನು ಎಡವಿಸುವ 'ವಿಶ್ವಾಸಘಾತಿ' ಹೀಗೆ ಹಲವು ಯಂತ್ರಗಳು ಹಿಂದೆ ಯುದ್ಧದಲ್ಲಿ ಬಳಸಲ್ಪಡುತ್ತಿದ್ದವು. ಆಧುನಿಕ ಯುದ್ಧ ಸಾಮಗ್ರಿಗಳ ತಯಾರಿಕೆಗೆ ಕಬ್ಬಿಣ ಬೇಕೇ ಬೇಕು. ಕೋವಿ, ತುಫಾರಿ, ಫಿರಂಗಿ, ರೈಫಲ್, ಪಿಸ್ತೂಲ್, ಟ್ಯಾಂಕರ್ ಇವು ಆಧುನಿಕ ಉದ್ಧೋಪಕರಣಗಳು. ಕೋವಿಯಲ್ಲಿ ಒಂದು ನಳಿಗೆಯ ಮತ್ತು ಎರಡು ನಳಿಗೆಯ ಕೋವಿಗಳೆಂದೂ, ಕೇಪಿನಕೋವಿ ಮತ್ತು ತೋಟೆ ಕೋವಿ ಎಂಬ ವಿಧಗಳಿವೆ. ಒಂದು ಕಾಲಕ್ಕೆ ಹಳ್ಳಿಯ ಕಮ್ಮಾರರು ಕೋವಿ, ಪಿಸ್ತೂಲ್ ತಯಾರಿಸುವುದರಲ್ಲಿ ಪರಿಣಿತರಾಗಿದ್ದರು. ಘಟೀಯಂತ್ರ, ತೈಲಯಂತ್ರ, ಇಕ್ಷುಯಂತ್ರ, ತುಲಾಯಂತ್ರ ಇವೆಲ್ಲಾ ಕಮ್ಮಾರರ ಸಂಶೋಧನೆಗಳು. ಕತ್ತಿ ಎಲ್ಲಾ ಕೆಲಸಗಳಿಗೂ ಬೇಕು. ಈ ಕತ್ತಿಗಳಲ್ಲಿ ಬಹಳಷ್ಟು ವಿಧಗಳಿವೆ. ತುಳುನಾಡಿನ ಕಮ್ಮಾರರು ಬಹಳಷ್ಟು ಕತ್ತಿಗಳನ್ನು ಮಾಡುವಲ್ಲಿ ನಿಪುಣರು. ಈ ಕತ್ತಿಗಳಲ್ಲಿ ಹಲವಾರು ಬಗೆಯಲ್ಲಿವೆ. ಅಮೇಕತ್ತಿ, ಇಡೆಕತ್ತಿ, ಉಳಿಕತ್ತಿ, ಕಿರ್ಗತ್ತಿ, ಒಡ್ಕತ್ತಿ, ಕಡ್ಪತ್ತಿ, ಕೆಯಿಕತ್ತಿ, ಗೆಜ್ಜೆತ್ತಿ, ಕುಞ್ಞತ್ತಿ, ಕುಮ್ಮಯಕತ್ತಿ, ತರ್ಕತ್ತಿ, ಪರ್ದತ್ತಿ, ನಾರತ್ತಿ, ಪಂತಿದಕತ್ತಿ, ಬಾಯ್‌ಕತ್ತಿ, ಬಾಳ್ಕತ್ತಿ, ಬಿಚ್ಚುಗತ್ತಿ, ಬೀಸತ್ತಿ, ಮುಟ್ಟುತ್ತಿ, ಮುಳ್ಳುಕತ್ತಿ, ಮೇಸೆಕತ್ತಿ, ದಡ್ಡ್‌ಕತ್ತಿ. ಒಂದೊಂದು ಕೆಲಸಕ್ಕೆ ಒಂದೊಂದು ಬಗೆಯ ಕತ್ತಿ. ತಾಳೆಯ ಮರದಿಂದ ಮೂರ್ತೆ (ಸೇಂದಿ) ಕೆಲಸಮಾಡಲು ತರ್ಕತ್ತಿಯಾದರೆ, ಹೊಲದಲ್ಲಿ ಪೈರು ಕೊಯ್ಯಲು ಪರ್ದತ್ತಿ, ಮರ ಕಡಿಯಲು ಕಡ್ಪತ್ತಿಯಾದರೆ, ಹುಲ್ಲು ಕೊಯ್ಯಲು ಪಂತಿ (ಪಜಿರತ್ತಿ) ಕತ್ತಿ, ಬಾಣಂತಿಯ ಕೈಯಲ್ಲಿ ಆಮೆಕತ್ತಿಯಾದರೆ, ತುಳುವರ ಹೆಣ್ಣು ಹೊರಗೆ ಹೋಗುವಾಗ ಹಿಡಿಯುವ ಕತ್ತಿ ಗೆಜ್ಜೆತ್ತಿ, ಬಿಸತ್ತಿ (ಚೂರಿ) ಗಳಲ್ಲಿ ಬಹಳಷ್ಟು ವಿಧಗಳಿವೆ. ಕುಲುಮೆಯ ಬೆಂಕಿ ಸರಿಮಾಡಲು ಉಳಿಕತ್ತಿ, ಕಸಿಕಟ್ಟಲು ಕಸಿಕತ್ತಿ ಹೀಗೆ ತುಳುನಾಡಿನವರು ಬಳಸುವಷ್ಟು ವಿವಿಧ ಕತ್ತಿಗಳನ್ನು ಇತರರು ಬಳಸಲಾರರು. ಈ ರೀತಿಯಾದ ವಿವಿಧ ಕತ್ತಿಗಳನ್ನು ತಯಾರಿಸುವ ಕೌಶಲ್ಯ ಉಡುಪಿ ಹಾಗೂ ಮಂಗಳೂರು ಪರಿಸರದ ಕಮ್ಮಾರರಲ್ಲಿ ಕಂಡುಬರುತ್ತದೆ. ಯುದ್ಧದಲ್ಲಿ ಬಳಸುವ

ತಳವಾರ್ ಕತ್ತಿ, ಬಾಳ್‌ಕತ್ತಿ, ಚಂದ್ರಾಯುಧ, ಮಚ್ಚು ಕೊಡಲಿ, ಬಾಣ, ಶಲ್ಯ, ಶೂಲ, ತ್ರಿಶೂಲ, ಭರ್ಚಿಗಳ ತಯಾರಿಕೆಯಲ್ಲೂ ತುಳುವ ಕಮ್ಮಾರರಿಗೆ ಇರುವಷ್ಟು ಪರಿಣತಿ ಇನ್ನಿತರರಿಗೆ ಇರಲಾರದು.

**೫.೧.೧.೨. ವ್ಯವಸಾಯದ ಉಪಕರಗಳು:**

ವ್ಯವಸಾಯದಲ್ಲಿ ಉಳುಮೆ ಪ್ರಮುಖವಾದುದು. ಆದರೆ ಮಾನವ ಶಾಸ್ತ್ರಜ್ಞರ ಪ್ರಕಾರ ಮಾನವ, ಮೊದಲು ಭೂಮಿಯನ್ನು ಅಗೆದು ವ್ಯವಸಾಯ ಪ್ರಾರಂಭಿಸಿದ. ವ್ಯವಸಾಯದ ಉಪಕರಣಗಳಲ್ಲಿ ಕಬ್ಬಿಣ ಹಾಗೂ ಮರ ಎರಡೂ ಬಳಕೆಯಾಗುತ್ತದೆ. ಆದರೆ ಈ ಉಪಕರಣಗಳನ್ನು ಕಬ್ಬಿಣದ ಕೆಲಸದವರೇ ಮಾಡುವುದು ರೂಢಿ. ವ್ಯವಸಾಯದಲ್ಲಿ ನೇಗಿಲು ಅತ್ಯಂತ ಪ್ರಮುಖವಾದುದು. ರಾಮಾಯಣ ಮಹಾಭಾರತದ ಕಥೆಗಳಲ್ಲಿ ನೇಗಿಲದ ಉಲ್ಲೇಖವಿದೆ. ಬಲರಾಮನಿಗೆ ನೇಗಿಲೇ ಆಯುಧವಾಗಿದೆ. ನೇಗಿಲಿನಲ್ಲಿ ಸಣ್ಣನೇಗಿಲು, ದೊಡ್ಡನೇಗಿಲು, ಎಡೆನೇಗಿಲು, ಬಂಡಿನೇಗಿಲು, ಕಬ್ಬಿಣದನೇಗಿಲು, ಹೀಗೆ ಹಲವು ವಿಧಗಳಿವೆ. ಜೋಡೆತ್ತಿನ ನೇಗಿಲಿನಿಂದ ಹಿಡಿದು ಹದಿನಾರು ಎತ್ತುಗಳನ್ನು ಹೂಡಿ ಎಳೆಯುವ ನೇಗಿಲುಗಳು ಕಂಡುಬರುತ್ತವೆ. ನೇಗಿಲಿನಲ್ಲಿ ಮಣ್ಣನ್ನು ಆಳಕ್ಕೆ ಸೀಳುವ ಕುಳ (ಗುಳ–ಪನೋರು) ಇದನ್ನು ಕಬ್ಬಿಣದಿಂದ ಮಾಡುತ್ತಾರೆ. ಆಧುನಿಕ ಕಬ್ಬಿಣದ ನೇಗಿಲು ಇತ್ತೀಚೆಗೆ ಬಳಕೆಗೆ ಬಂದಿವೆ. ಎತ್ತುಗಳ ಹೆಗಲಿಗೆ ನೇಗಿಲ ಹೇರಿ ಎಳೆಯುವಂತೆ ಮಾಡುವ ಸಾಧನ ನೊಗ. ಈ ನೊಗ ಮಧ್ಯದಲ್ಲಿ ಸ್ವಲ್ಪ ದಪ್ಪವಾಗಿದ್ದು ಎರಡೂ ಕಡೆ ಎತ್ತುಗಳ ಕೊರಳಿಗೆ ಸರಿಯಾಗಿ ನಿಲ್ಲುವಂತೆ ಚಪ್ಪಟೆಯಾದ ಭಾಗಗಳಿರುತ್ತವೆ. ಇದನ್ನು ಮರದ ಕೆಲಸದವರು ಮಾಡುತ್ತಾರೆ. ಹೊಲವನ್ನು ಹರಗಲು ದಕ್ಷಿಣ ಕನ್ನಡದಲ್ಲಿ ಹಲಗೆಯನ್ನು ಬಳಸುತ್ತಾರೆ. ಉತ್ತರ ಕರ್ನಾಟಕದಲ್ಲಿ ಇದನ್ನು ಹೆಗ್ಗುಂಟೆ ಎನ್ನುತ್ತಾರೆ. ಬೀಜ ಬಿತ್ತಲು ಕೂರಿಗೆ ಸೆಡ್ಡೆ ಎಂಬ ಉಪಕರಣವನ್ನು ಬಳಸುತ್ತಾರೆ. ಹಲಬೆಯಲ್ಲಿ ಗಣಿಹಲಬೆ, ನೀರುಹಲಬೆ ಎಂಬ ಎರಡು ವಿಧ. ಬಿತ್ತಿದ ಬೀಜ ಹುಟ್ಟಿದ ನಂತರ ಸಸಿಗಳು ಹದವಾಗಿ ಉಳಿಯುವಂತೆ ಮಾಡಲು ಕುಂಟೆಯನ್ನು ಉಪಯೋಗಿಸುತ್ತಾರೆ. ಕುಂಟೆಗಳಲ್ಲಿ ಹಲ್ಲಿನ ಕುಂಟೆ, ನಾಲ್ಕು ಹಲ್ಲಿನ ಕುಂಟೆ, ತರಗದಾಳುಕುಂಟೆ ಹೀಗೆ ಅನೇಕ ವಿಧಗಳಿವೆ. ಏರು ಪೇರಿನ ಭೂಮಿಯನ್ನು ಸಮಗೊಳಿಸಲು ಮಣೆಯನ್ನು ಬಳಸುತ್ತಾರೆ. ಅಗೆಯುವ ಸಾಧನಗಳಲ್ಲಿ ತುದಿ ಚೂಪಾದ ಐದಾರು ಅಡಿ ಉದ್ದದ ಕಬ್ಬಿಣದ ದುಂಡನೆಯ ಶಲಾಕೆಗೆ ಹಾರಂಗಿ (ಹಾರೆ) ಎನ್ನುತ್ತಾರೆ. ಮಣ್ಣನ್ನು ಅಗೆಯಲು ಮತ್ತು ತುಂಬಲು ಗುದ್ದಲಿ (ದ.ಕ.ದಲ್ಲಿ ಹಾರೆ) ಎನ್ನುತ್ತಾರೆ. ಇದು ಅಗಲ ಕಬ್ಬಿಣದ ತಗಡು, ತಗಡಿಗೆ ಹಿಡಿ ಜೋಡಿಸಿರುತ್ತಾರೆ. ಕೋಲು ಗುದ್ದಲಿ, ಕೊತ್ತು, ಎರಡೂ ಕಡೆ ಚೂಪಾದ ಭಾಗಗಳಿರುವ ಪಿಕಾಸಿ, ಪೋರ್ಕ ರೀತಿಯ ಸಾಧನ ಇದು ಇಸಮುಳ್ಳು ಅಗೆಯಲು ಬಳಸಲ್ಪಡುತ್ತದೆ.

ಕುಡುಗೋಲು, ಮಚ್ಚು, ಕರಿದಲು, ಉಜ್ಜೇರಿ ಇವು ಇನ್ನಿತರ ಸಾಧನಗಳು. ಯಂತ್ರಗಳ ಬಳಕೆ ರೂಢಿಗೆ ಬಂದ ಮೇಲೆ ಹಲ್ಲರು (ಬತ್ತ ಕೊಯ್ಯುವ ಯಂತ್ರ) ನೀರೆತ್ತುವ ಪಂಪ್, ನೀರು ಚಿಮುಕಿಸುವ ಯಂತ್ರ (ಸ್ಪಿಂಕ್ಲರ್) ಉಳುಮೆಯ ಟ್ರ್ಯಾಕ್ಟರ್, ಬಿತ್ತುವ ಯಂತ್ರ, ಕೊಯ್ಯುವ ಯಂತ್ರ

ಇತ್ಯಾದಿಗಳ ಸಂಶೋಧನೆಯಾಯಿತು. ಬತ್ತ ಬೇಯಿಸಿ, ಒಣಗಿಸಿ ಸುಲಿದು ಅಕ್ಕಿ ಮಾಡುವ ಯಂತ್ರಗಳು, ಜಾನುವಾರುಗಳ ಮೇವು ಕತ್ತರಿಸುವ ಯಂತ್ರಗಳು ಬಳಕೆಗೆ ಬಂದು ಕೃಷಿ ಕೆಲಸ ಈಗ ಪೂರ್ತಿ ಯಂತ್ರಧಾರಿತ ವೃತ್ತಿಯಾಗಿದೆ.

**೫.೧.೧.೩ ಚಕ್ಕಡಿಗಳ ತಯಾರಿಕೆ:**

ಚಕ್ರದ ಸಂಶೋಧನೆಯಾದ ನಂತರ ವಾಹನಗಳ ತಯಾರಿ ನಡೆಯಿತು. ಚಕ್ರದ ನಿರ್ಮಾಣ ಮರಕೆಲಸದವರ ಸಾಧನೆಯಾದರೆ, ಆ ಚಕ್ರದ ಸುತ್ತ ಕಬ್ಬಿಣದ ಪಟ್ಟಿ ಬಡಿದು ಚಕ್ರ ಸವೆಯದಂತೆ ಮಾಡಿದ ಕುಶಲತೆ ಕಮ್ಮಾರರದು. ವಾಹನಗಳಲ್ಲಿಯೇ ಮೊದಲು ಕಂಡುಹಿಡಿಯಲ್ಪಟ್ಟಿದ್ದು ಬಂಡಿ. ಬಂಡಿಗೆ ಚಕ್ರ ಜೋಡಿಸಿದಾಗ ಚಕ್ರ ಉರುಳಿ ಹೋಗದಂತೆ ಕಬ್ಬಿಣದ ಕೀಲು (ಕಡಾಣಿ) ಬೇಕು. ಅಯಸ್ಕಾರರು (ಕಮ್ಮಾರರು) ಪುರಾಣ ಕಾಲದಲ್ಲಿ ವಿಮಾನ ತಯಾರಿಕೆಯಲ್ಲಿಯೂ ಪರಿಣಿತರಿದ್ದರೆಂಬ ಉಲ್ಲೇಖ ಶಿಲ್ಪ ಗ್ರಂಥಗಳಲ್ಲಿ ದೊರೆಯುತ್ತದೆ. ರಾಮಾಯಣದಲ್ಲಿ ಬರುವ ಪುಷ್ಪಕ ವಿಮಾನ ಇದಕ್ಕೊಂದು ಉದಾಹರಣೆ.

**೫.೧.೧.೪. ವೃತ್ತಿ ಉಪಕರಣಗಳು:**

ಮರ, ಕಂಚು, ಕಲ್ಲು, ಚಿನ್ನ ಇತರೆ ಯಾವುದೇ ವೃತ್ತಿಯವರಿರಲಿ ಅವರ ವೃತ್ತಿಗೆ ಬೇಕಾದ ಉಪಕರಣಗಳ ತಯಾರಿಕೆಗೆ ಕಬ್ಬಿಣವೇ ಬೇಕು. ಅಡಿಗಲ್ಲು, ಸುತ್ತಿಗೆ, ಚಾಣ, ಕತ್ತರಿ, ಇಕ್ಕಳ, ದಂಡಾಸು, ಕಂಬಜ್ಜಿ, ಕೆತ್ತನೆಯ ಸಾಮಗ್ರಿಗಳು, ಮರದ ಕೆಲಸದವರು ಬಳಸುವ ಕೀಸುಳಿ, ಗಟ್ಟಿ ಉಳಿ ಇತರೆ ಉಳಿ, ಕೋಲುಳಿ, ತಿರುಳಿ, ಮುಂತಾದ ಉಳಿಗಳು, ಜಾಜಿ, ಕೊಡತಿ, ಬೈರಿಗೆ, ಗರಗಸ, ವೈಸ್, ಸ್ಪ್ಯಾನರ್, ಕಟ್ಟಿಂಗ್ ಪ್ಲೇಯರ್, ಮುಂತಾದ ವಸ್ತುಗಳ ತಯಾರಕರು ಕಮ್ಮಾರರೇ ಆಗಿದ್ದರು..

**೫.೧.೧.೫. ಗೃಹೋಪಯೋಗಿ ಉಪಕರಣಗಳು:**

ಗೃಹ ನಿರ್ಮಾಣಕ್ಕೆ ಒಂದು ಕಾಲದಲ್ಲಿ ಕಟ್ಟಿಗೆಯನ್ನೇ ಹೆಚ್ಚಾಗಿ ಬಳಸುತ್ತಿದ್ದರು.  ಆಧುನಿಕ ಕಾಲದಲ್ಲಿ ಕಾಂಕ್ರೀಟು ಕಟ್ಟಡಕ್ಕೆ ಕಬ್ಬಿಣ ಸಾಕಷ್ಟು ಬಳಸಲ್ಪಡುತ್ತದೆ. ಮಂಚ, ಕುರ್ಚಿ ಮುಂತಾದ ಪೀಠೋಪಕರಣಗಳು, ಪೆಟ್ಟಿಗೆ, ಕಪಾಟುಗಳು, ತಿಜೋರಿಗಳು ಇಂದು ತಯಾರಿಸಲ್ಪಡುತ್ತಿವೆ. ಹಿಂದೆ ಅಡುಗೆಯ ಪಾತ್ರೆಗಳಾದ ಚಂಬು, ಬಿಂದಿಗೆ, ತೋಪು, ಹರಿವಾಣ, ಕೊಡಪಾನಗಳನ್ನು ತಾಮ್ರ, ಕಂಚು, ಹಿತ್ತಾಳೆಯಿಂದ ತಯಾರಿಸಲಾಗುತ್ತಿತ್ತು.  ಈಗ ಕಬ್ಬಿಣವನ್ನು ಪರಿಷ್ಕರಿಸಿ ಸ್ಟೀಲ್ ಕಂಡುಹಿಡಿಯಲ್ಪಟ್ಟ ಬಳಕೆ ಎಲ್ಲ ಅಡುಗೆ ಪಾತ್ರೆಗಳು  ಸ್ಟೀಲ್‌ನಿಂದಲೇ ತಯಾರಾಗುತ್ತಿವೆ.

ಕಲಾತ್ಮಕ ಕೆಲಸಗಳಿಗೆ ಅವಕಾಶ ಕಡಿಮೆಯಾದರೂ ಅವಕಾಶ ಸಿಕ್ಕಿದ್ದಾಗಲೆಲ್ಲ ಕಮ್ಮಾರರು ತಮ್ಮ ಕೌಶಲ್ಯವನ್ನು ತೋರಿಸದೇ ಹಿಂದುಳಿಯಲಿಲ್ಲ. ಅವರ ಚಾಕಚಕ್ಯತೆಯ ಪ್ರದರ್ಶನ ಬೀಗಗಳ ತಯಾರಿಕೆಯಲ್ಲಿ ನಡೆಯಿತು. ನೂರಾರು ವಿಧಗಳ ಬೀಗಗಳನ್ನು  ನಿರ್ಮಿಸಿಕೊಟ್ಟು ರಕ್ಷಣೆಯನ್ನು ಸುಲಭಗೊಳಿಸಿದರು. ಕತ್ತರಿ, ಅಡಕತ್ತರಿ, ಇಲಿಕತ್ತರಿ, ಅವರ ಕುಶಲತೆಯನ್ನು ತೋರಿಸುವ

ನಿದರ್ಶನಗಳಾಗಿವೆ. ಅಡಕತ್ತರಿ ಎಂದರೆ ಅಡಕೆ ಕತ್ತರಿಸಲು ಬಳಸುವ ಸಾಧನ. ಈ ಉಪಕರಣಗಳಲ್ಲಿ ಕುದುರೆ ಸವಾರ, ಮಿಥುನ, ಜೋಡಿಹಕ್ಕಿಗಳು ಹೀಗೆ ಹಲವಾರು ಆಕೃತಿಗಳು ತೋರಿಸಲು ಪ್ರಯತ್ನಸಿ ಬುದ್ಧಿವಂತರೆಂಬ ಹೆಗ್ಗಳಿಕೆಗೆ ಕಾರಣರಾಗಿದ್ದಾರೆ. ಸಂಕೋಲೆ, ಸರಪಳಿಗಳ ರಚನೆಯಲ್ಲಿಯೂ ಕಮ್ಮಾರರದ್ದು ಎತ್ತಿದ ಕೈ.

**೫.೧.೨. ಕಮ್ಮಾರಿಕೆಯ ಸ್ಥಿತಿಗತಿಗಳು:**

ಕಮ್ಮಾರಿಕೆ ವೃತ್ತಿ ಆಧುನಿಕತೆಗೆ ಮುಖಾಮುಖಿಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಅನೇಕ ಪಾರಂಪರಿಕ ವೃತ್ತಿ ನಿರತ ಅದರಲ್ಲೂ ಗ್ರಾಮೀಣ ಪರಿಸರದ ಕಮ್ಮಾರರು ತಮ್ಮ ವೃತ್ತಿಯಲ್ಲಿ ಆಧುನಿಕತೆಯನ್ನು ರೂಢಿಸಿಕೊಳ್ಳಲಿಲ್ಲ. ತಾಲೂಕು ಪ್ರದೇಶಗಳಲ್ಲಿ ಸ್ವಲ್ಪ ನಗರ ಛಾಯೆಯಿರುವ ಪ್ರದೇಶಗಳಲ್ಲಿಯ ಕಮ್ಮಾರರು ಅದರಲ್ಲೂ ಅಕ್ಷರಸ್ತರು ಕಮ್ಮಾರಿಕೆಯ ಜೊತೆಗೆ ವೆಲ್ಡಿಂಗ್, ಡ್ರಿಲ್ಲಿಂಗ, ಕಟಿಂಗ್ ಮಶೀನುಗಳನ್ನು ಹಾಕಿಕೊಂಡು ಕಮ್ಮಾರಿಕೆಯ ಜೊತೆಗೆ ಕಬ್ಬಿಣದ ಕಿಟಕಿ, ಬಾಗಿಲು, ಗೇಟ್, ಅಲ್ಮೇರ, ಮಂಚ ಮುಂತಾದ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸುತ್ತಿರುವುದನ್ನು ಅಲ್ಲಲ್ಲಿ ಅಲ್ಪ ಪ್ರಮಾಣದಲ್ಲಿ ಕಾಣುತ್ತೇವೆ.

ಗ್ರಾಮೀಣ ಪರಿಸರದ ಕಮ್ಮಾರರು ಮಾತ್ರ ಯಾವುದೇ ರೀತಿಯ ಆಧುನಿಕತೆಯನ್ನು ಬಳಸಿಕೊಳ್ಳದೇ ಕೇವಲ ಕೊಡ್ಲಿ, ಕುಡುಗೋಲು, ಚೂರಿ, ಕತ್ತಿ ಮುಂತಾದವುಗಳನ್ನು ಹಣಿದು ಹರಿತ ಮಾಡುವ ಕೆಲಸ ಮಾಡುತ್ತಿದ್ದಾರೆ.

ನಾನು ಕ್ಷೇತ್ರಕಾರ್ಯ ಮಾಡಿದ ಕೊಳ್ಳೆಗಾಲ ತಾಲೂಕಿನ ಒಟ್ಟು ೪೭ ಕಮ್ಮಾರರ ಕುಟುಂಬಗಳಲ್ಲಿ ೫೪ ಜನ ಕಮ್ಮಾರಿಕೆಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಇದರಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಬಳಸಿಕೊಂಡು ಕಮ್ಮಾರಿಕೆ ಮಾಡುತ್ತಿರುವವರ ಸಂಖ್ಯೆ ಕೇವಲ ೯. ಕೊಳ್ಳೆಗಾಲ ನಗರ ಪ್ರದೇಶದಲ್ಲಿ ಮಾತ್ರ ಆಧುನಿಕತೆ ಬಳಸಿಕೊಂಡಿರುವ ಕುಟುಂಬಗಳನ್ನು ಕಾಣುತ್ತೇವೆ.

ಮಂಗಳೂರು ತಾಲೂಕಿನ ಒಟ್ಟು ಏಳು ಕುಟುಂಬಗಳಲ್ಲಿ ಐದು ಜನರು ಕಮ್ಮಾರಿಕೆ ಮಾಡುತ್ತಿರುವುದು ಕಂಡು ಬರುತ್ತದೆ. ಇವರಲ್ಲಿ ಇಬ್ಬರು ಲೇತ್, ಡ್ರಿಲ್ಲಿಂಗ್, ಗ್ರೈಂಡಿಗ್ ಮತ್ತು ವೆಲ್ಡಿಂಗ್ ಮಶಿನುಗಳನ್ನಿಟ್ಟುಕೊಂಡು ಕಮ್ಮಾರಿಕೆಯ ಜೊತೆಗೆ ಅಲ್ಮೇರಾ, ಮಂಚ, ಗೇಟ ಮುಂತಾದ ವಸ್ತುಗಳನ್ನು ತಯಾರಿಸುತ್ತಿರುವುದು ಕಂಡುಬರುತ್ತದೆ.

ಪುತ್ತೂರು ತಾಲೂಕಿನಲ್ಲಿಯ ಒಟ್ಟು ೧೩ ಕುಟುಂಬಗಳಲ್ಲಿ ೧೮ ಜನರು ಕಮ್ಮಾರಿಕೆ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಇವರಲ್ಲಿ ೫ ಜನರು ತಮ್ಮ ಪಾರಂಪರಿಕ ವೃತ್ತಿಯಲ್ಲಿ ಆಧುನಿಕ ತಂತ್ರಜ್ಞಾನಗಳನ್ನು ಬಳಸಿಕೊಂಡು ಕೃಷಿಗೆ ಬೇಕಾದ ನೇಗಿಲು, ಕುಂಟೆ ಮುಂತಾದ ವಸ್ತುಗಳನ್ನು ತಯಾರಿಸುತ್ತಿರುವುದನ್ನು ಕಾಣುತ್ತೇವೆ.

ಸುಳ್ಯ ತಾಲೂಕಿನ ೯ ಕುಟುಂಬಗಳಲ್ಲಿ ೧೧ ಜನರು ಕಮ್ಮಾರಿಕೆಯನ್ನು ಮಾಡುತ್ತಿರುವುದು ಕಂಡುಬಂದಿದೆ. ಇವರಲ್ಲಿ ಇಬ್ಬರು ಮಾತ್ರ ಆಧುನಿಕ ಯಂತ್ರೋಪಕರಣಗಳನ್ನು ತಮ್ಮ ವೃತ್ತಿಯಲ್ಲಿ ಬಳಸುತ್ತಿರುವುದು ಕಂಡು ಬರುತ್ತದೆ.

ಬೆಳ್ತಂಗಡಿ ತಾಲೂಕಿನ ೫ ಕುಟುಂಬಗಳಲ್ಲಿ ೭ ಜನ ಕಮ್ಮಾರಿಕೆ ಮಾಡುತ್ತಿರುವುದು ಕಂಡು ಬರುತ್ತದೆ. ಇವರು ತಮ್ಮ ವೃತ್ತಿಯಲ್ಲಿ ಆಧುನಿಕತೆಯನ್ನು ಬಳಸದೇ ಇರುವುದು ಕಂಡು ಬರುತ್ತದೆ.

ಕಾರ್ಕಳ ತಾಲೂಕಿನ ಒಟ್ಟು ೨೯ ಕುಟುಂಬಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಕಾರ್ಕಳ ಪ್ರದೇಶದಲ್ಲಿರುವ ಹತ್ತಾರು ಕುಟುಂಬಗಳು ತಮ್ಮ ವೃತ್ತಿಯಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಬಳಸುತ್ತಿದ್ದಾರೆ. ಪೇಟೆಗಳಿಂದ ಕಬ್ಬಿಣದ ಕಚ್ಚಾವಸ್ತುಗಳನ್ನು ತೆಗೆದುಕೊಂಡು ಬಂದು ಕೊಡ್ಲಿ, ಕುಡುಗೋಲು, ಕತ್ತಿ, ರಂಟೆ, ಕುಂಟೆ, ಕುಳ ಮುಂತಾದ ವಸ್ತುಗಳನ್ನು ಸಿದ್ಧ ಪಡಿಸಿ, ಹೋಲ್‌ಸೇಲ್ ದರದಲ್ಲಿ ಕಬ್ಬಿಣ ವ್ಯಾಪಾರಸ್ತರಿಗೆ ಮಾರಾಟ ಮಾಡುತ್ತಾರೆ. ಅನೇಕ ಕೃಷಿಕರು ನೇರವಾಗಿ ಇವರ ಹತ್ತಿರ ಕೃಷಿ ಉಪಕರಣಗಳನ್ನು ಖರೀದಿಸುತ್ತಾರೆ. ಉಳಿದ ಕಮ್ಮಾರರ ಕುಟುಂಬಗಳಿಗಿಂತ ಕಾರ್ಕಳ ನಗರದ ಕಮ್ಮಾರರು ಆರ್ಥಿಕವಾಗಿ ಸ್ಥಿತಿವಂತರಾಗಿಲ್ಲದಿದ್ದರೂ ಉತ್ತಮವಾಗಿ ಬದುಕನ್ನು ರೂಪಿಸಿಕೊಳ್ಳುವಲ್ಲಿ ಶ್ರಮ ವಹಿಸುತ್ತಿದ್ದಾರೆ ಎಂದು ಹೇಳಬಹುದು.

ಉಡುಪಿ ತಾಲೂಕಿನ ೧೫ ಕುಟುಂಬಗಳಲ್ಲಿಯ ಒಟ್ಟು ೧೬ ಜನರು ಕಮ್ಮಾರಿಕೆ ವೃತ್ತಿಯನ್ನು ಮಾಡುತ್ತಿರುವುದನ್ನು ಕಾಣುತ್ತೇವೆ. ಇವರಲ್ಲಿ ಐದಾರು ಜನರು ಕಮ್ಮಾರಿಕೆಯ ಜೊತೆಗೆ ಇತರೆ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸಿ ಕೊಡುತ್ತಿರುವುದು ಕಂಡುಬರುತ್ತದೆ.

ಕುಂದಾಪುರ ತಾಲೂಕಿನಲ್ಲಿಯ ಒಟ್ಟು ೭೭ ಕುಟುಂಬಗಳಲ್ಲಿ ೯೦ ಜನರು ಕಮ್ಮಾರಿಕೆಯನ್ನು ಮಾಡುತ್ತಿರುವುದು ಕಂಡು ಬರುತ್ತದೆ. ಇವರಲ್ಲಿ ೧೫ಕ್ಕೂ ಹೆಚ್ಚು ಜನರು ಕೃಷಿಗೆ ಬೇಕಾಗುವ ವಸ್ತುಗಳನ್ನು ಸಿದ್ಧಪಡಿಸುವುದರ ಜೊತೆಗೆ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸುತ್ತಿರುವುದು ಕಂಡು ಬರುತ್ತದೆ.

**೫.೧.೨.೧. ಕಮ್ಮಾರರು ಅನುಸರಿಸುತ್ತಿರುವ ಇನ್ನಿತರ ವೃತ್ತಿಗಳು:**

ಕಮ್ಮಾರರ ಸಮುದಾಯದ ಯುವ ಪೀಳಿಗೆ ಇಂದು ಕಮ್ಮಾರಿಕೆ ವೃತ್ತಿಯ ಮೂಲಕ ಕುಟುಂಬ ನಿರ್ವಹಣೆ ಅಸಾಧ್ಯ ಎಂದು ತಿಳಿದುಕೊಂಡಿದ್ದಾರೆ ಮತ್ತು ಅವರು ಇಂದು ಇತರೆ ವೃತ್ತಿಗಳಲ್ಲಿ ತೊಡಗಿಸಿಕೊಳ್ಳತ್ತಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿದೆ.

**೫.೧.೨.೧.೧. ಬಡಗಿತನ :**

ಅನೇಕ ಕಮ್ಮಾರರ ಯುವಕರು ತಂದೆಯ ವೃತ್ತಿಯನ್ನು ಅನುಸರಿಸದೇ ನಗರ ಪ್ರದೇಶಗಳಿಗೆ ಹೋಗಿ ಬಡಗಿತನದ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ನಗರ ಪ್ರದೇಶಗಳಲ್ಲಿ ಮರಗೆಲಸಕ್ಕೆ ಹೆಚ್ಚಿನ ಬೇಡಿಕೆ ಇದೆ ಎಂಬುದನ್ನು ಅರಿತುಕೊಂಡ ಇವರು, ತಮ್ಮ ಸಮುದಾಯದ

ಬಡಿಗೇರರ ಹತ್ತಿರ ಬಡಗಿತನ ಮಾಡುತ್ತಿರುವುದು ಕಂಡು ಬರುತ್ತದೆ. ಪ್ರಾರಂಭದಲ್ಲಿ ಬಡಗಿತನದ ಕೆಲಸಕ್ಕೆ ಸಹಾಯಕರಾಗಿ ಸೇರಿ ಕೊಂಡರೂ ದಿನಕ್ಕೆ ಕನಿಷ್ಟ ೧೫೦ ರೂಗಳಲ್ಲಿ ಕೂಲಿ ಸಿಗುತ್ತದೆ ಎಂಬ ಅಭಿಪ್ರಾಯ ಇವರಲ್ಲಿದೆ. ಕೆಲವೇ ತಿಂಗಳುಗಳಲ್ಲಿ ಶ್ರಮ ಪಟ್ಟು ಬಡಗಿತನದ ಕಾರ್ಯ ನಿರ್ವಹಿಸುವುದನ್ನು ಇವರು ಕಲಿತುಕೊಂಡು ಸ್ವತಂತ್ರವಾಗಿ ವೃತ್ತಿ ಮಾಡುತ್ತಿರುವುದು ಅಲ್ಲಲ್ಲಿ ಕಂಡು ಬರುತ್ತದೆ.

ಮಂಗಳೂರಿನ ಏಳು ಕಮ್ಮಾರರ ಕುಟುಂಬಗಳಲ್ಲಿ ೩ ಜನರು, ಪುತ್ತೂರಿನ ಕಮ್ಮಾರರ ೧೩ ಕುಟುಂಬಗಳಲ್ಲಿ ೪ ಜನರು, ಬೆಳ್ತಂಗಡಿ ೫ ಕುಟುಂಬಗಳಲ್ಲಿ ಇಬ್ಬರು, ಕಾರ್ಕಳದ ೨೯ ಕುಟುಂಬಗಳಲ್ಲಿ ೬ ಜನರು, ಉಡುಪಿ ೧೫ ಕುಟುಂಬಗಳಲ್ಲಿ ಮೂವರು, ಕುಂದಾಪುರದ ೭೭ ಕುಟುಂಬಗಳಲ್ಲಿ ೧೭ ಜನರು ಹಾಗೂ ಕೊಳ್ಳೆಗಾಲದ ೪೭ ಕುಟುಂಬಗಳಲ್ಲಿ ೨೭ ಜನರು ಮರದ ಕೆಲಸ ಮಾಡುತ್ತಿರುವುದು ಕಂಡು ಬರುತ್ತದೆ.

ಕಮ್ಮಾರಿಕೆಯನ್ನು ಬಿಟ್ಟು ಬಡಗಿತನ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಯುವಕರು 'ನಾವು ಆರ್ಥಿಕವಾಗಿ ಸುಧಾರಿಸಲು ಈ ವೃತ್ತಿ ಸಹಾಯಕವಾಗುತ್ತದೆ' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**೫.೧.೨.೧.೨.ಪತ್ತಾರಿಕೆ (ಚಿನ್ನದ ಕೆಲಸ):**

ಮಂಗಳೂರು ಹಾಗೂ ಉಡುಪಿ ಪ್ರದೇಶಗಳಲ್ಲಿಯ ಚಿನ್ನದ ಕೆಲಸ ಮಾಡುವ ವಿಶ್ವಕರ್ಮರು ಸಾಮಾನ್ಯವಾಗಿ ಆರ್ಥಿಕವಾಗಿ ಮುಂದುವರೆದವರಾಗಿದ್ದಾರೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅನೇಕರು ಸರಾಫಿ ಅಂಗಡಿಗಳನ್ನಿಟ್ಟುಕೊಂಡು ಬಂಗಾರ, ಬೆಳ್ಳಿಯ ಆಭರಣಗಳನ್ನು ಮಾರಾಟ ಮಾಡುತ್ತಿರುವುದು ಕಂಡು ಬರುತ್ತದೆ. ಬಂಗಾರ, ಬೆಳ್ಳಿಯ ಆಭರಣಗಳನ್ನು ತಯಾರಿಸುವಲ್ಲಿ ಆಧುನಿಕ ತಂತ್ರಜ್ಞಾನಗಳನ್ನು ಬಳಸಿಕೊಂಡ ಇವರು, ಚಿನ್ನಾಭರಣಗಳ ವ್ಯಾಪಾರದಲ್ಲಿ ಪರಿಣಿತರು ಎಂಬ ಹೆಗ್ಗಳಿಕೆ ಪಡೆದುಕೊಂಡವರು. ಇವರ ಪ್ರಭಾವ ಕಮ್ಮಾರರ ಯುವಕರ ಮೇಲಾಗಿದೆ. ಹೀಗಾಗಿ ಅನೇಕ ಕಮ್ಮಾರರ ಯುವಕರು ಹಿರಿಯ ಚಿನ್ನದ ಕೆಲಸಗಾರರ ಹತ್ತಿರ ಬಂಗಾರದ ಆಭರಣಗಳನ್ನು ತಯಾರಿಸುವ ತರಬೇತಿ ಪಡೆದು ಪತ್ತಾರಿಕೆಯಲ್ಲಿ ತೊಡಗಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಮಂಗಳೂರು ಹಾಗೂ ಉಡುಪಿ ಪ್ರದೇಶದಲ್ಲಿರುವ ಚಿನ್ನದ ಕೆಲಸಗಾರರು ಕಮ್ಮಾರಿಕೆ ವೃತ್ತಿ ಹಾಗೂ ಕಮ್ಮಾರರ ಸ್ಥಿತಿಗತಿಗಳ ಬಗ್ಗೆ ತಿಳಿದುಕೊಂಡಿದ್ದಾರೆ. ಕಮ್ಮಾರರು ತಮ್ಮ ವೃತ್ತಿಯ ಮೂಲಕ ಅವರಿಗೆ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯವಿಲ್ಲವೆಂಬುದನ್ನು ಅರಿತುಕೊಂಡಿದ್ದಾರೆ. ಹೀಗಾಗಿ ಕಮ್ಮಾರರ ಯುವಕರು ಸ್ವಪ್ರೇರಣೆಯಿಂದ ಚಿನ್ನದ ಕೆಲಸ ಕಲಿಯಲು ಹಾಗೂ ಆ ವೃತ್ತಿಯಲ್ಲಿ ಮುಂದುವರೆಯಲು ಆಸಕ್ತಿ ತೋರಿಸಿದರೆ ಅವರಿಗೆ ಸಹಾಯ ಮಾಡುತ್ತಿರುವುದು ಕಂಡು ಬರುತ್ತದೆ. ಇದರ ಉಪಯೋಗವನ್ನು ಅನೇಕ ಕಮ್ಮಾರರ ಯುವಕರು ಪಡೆದುಕೊಳ್ಳುತ್ತಿರುವುದು ಅಲ್ಲಲ್ಲಿ ಕಂಡು ಬರುತ್ತದೆ. ಇಂದು ಚಿನ್ನದ ಕೆಲಸದಲ್ಲಿಯೂ ಅನೇಕ ತೊಂದರೆಗಳನ್ನು ಇಲ್ಲಿಯ ಪತ್ತಾರರು

ಅನುಭವಿಸುತ್ತಿದ್ದಾರೆ. ಉಡುಪಿ, ಮಂಗಳೂರು ಹಾಗೂ ಕಾರವಾರದ ಅನೇಕ ಪ್ರದೇಶಗಳಲ್ಲಿ ರಾಜಸ್ಥಾನದಿಂದ ಚಿನ್ನದ ಕೆಲಸ ಮಾಡುವ ಸಾವಿರಾರು ಯುವಕರು ವಲಸೆ ಬಂದಿದ್ದಾರೆ. ಇವರು ಅತ್ಯಂತ ಕಡಿಮೆ ಕೂಲಿಯಲ್ಲಿ ಚಿನ್ನದ ಆಭರಣಗಳ ರಿಪೇರಿ ಕೆಲಸಗಳನ್ನು ಮಾಡುತ್ತಿರುವುದರಿಂದ ಸ್ಥಳೀಯ ಬಂಗಾರದ ಕೆಲಸಗಾರರಿಗೆ ಕೆಲಸಗಳು ಕಡಿಮೆಯಾಗುತ್ತಿವೆ ಹಾಗೂ ಅನಿವಾರ್ಯವಾಗಿ ಕಡಿಮೆ ಕೂಲಿಯಲ್ಲಿ ಕಾರ್ಯನಿರ್ವಹಿಸಬೇಕಾಗಿದೆ.

ಪುತ್ತೂರಿನ ಕಮ್ಮಾರರಲ್ಲಿಯ ೫ ಜನ ಯುವಕರು, ಕಾರ್ಕಳದ ೬ ಜನ, ಉಡುಪಿಯ ೩ ಜನ , ಕುಂದಾಪುರದ ೯ ಜನ, ಹಾಗೂ ಸುಳ್ಯದ ೩ ಜನ ಚಿನ್ನದ ಕೆಲಸದಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಚಿನ್ನದ ಕೆಲಸ ನಮಗೆ ತೃಪ್ತಿ ತರುತ್ತಿದೆ. ನಮ್ಮ ಸಮುದಾಯದ ಹಿರಿಯ ಆಭರಣ ತಯಾರಕರು ನಮ್ಮನ್ನು ಕೈ ಹಿಡಿದು ನಡೆಸುತ್ತಾರೆಂಬ ಭರವಸೆ ನಮ್ಮಲ್ಲಿದೆ ಎಂದು ಈ ಯುವಕರು ಹೇಳುತ್ತಾರೆ.

**೫.೧೨.೧.೩. ಸರಕಾರಿ ಕೆಲಸ:**

ಕಮ್ಮಾರರು ಶೈಕ್ಷಣಿಕವಾಗಿ ಬಹಳೇ ಹಿಂದುಳಿದವರು. ಬೆರಳೆಣಿಕೆಯ ಜನರು ಸರಕಾರಿ ಕೆಲಸಗಳಲ್ಲಿ ಸೇವೆ ಸಲ್ಲಿಸುತ್ತಿರುವುದು ಕಂಡು ಬರುತ್ತದೆ.

ಪುತ್ತೂರು ತಾಲೂಕಿನ ಕಮ್ಮಾರ ಕುಟುಂಬದ ಒಬ್ಬರು, ತಾಂತ್ರಿಕ ಶಿಕ್ಷಣದಲ್ಲಿ ಪದವಿಯನ್ನು ಪಡೆದುಕೊಂಡು ಕೆಲಸದಲ್ಲಿದ್ದಾರೆ. ಕುಂದಾಪುರ ತಾಲೂಕಿನಲ್ಲಿ ಇಬ್ಬರು ಶಿಕ್ಷಕರಾಗಿ ಒಬ್ಬರು ಪ್ರೌಢ ಶಾಲಾ ಶಿಕ್ಷಕರಾಗಿ ಒಬ್ಬರು ಬ್ಯಾಂಕಿನಲ್ಲಿ ಅಕೌಂಟಂಟ್ ಆಗಿ ಹಾಗೂ ಕೆ.ಇ.ಬಿ. ಯಲ್ಲಿ ಒಬ್ಬರು ಇಲೆಕ್ಟ್ರೀಷಿಯನ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.

**೫.೧೨.೧.೪.ಇತರೆ ವೃತ್ತಿಗಳು:**

ಕಮ್ಮಾರರಲ್ಲಿ ಕೂಲಿ, ಬಾರ್‌ಬೆಂಡಿಂಗ್, ವೈಂಡಿಂಗ್, ಬೀಡಿರೋಲಿಂಗ್, ಹಾಗೂ ಇತರೆ ಖಾಸಗಿ ಕಂಪನಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದು ಕಂಡು ಬರುತ್ತದೆ. ಕೆಲವರು ಜೆರಾಕ್ಸ, ಸ್ಟೇಷನರಿ ಅಂಗಡಿಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿರುವುದು ಕಂಡು ಬರುತ್ತದೆ.

**೫.೧೨.೧.೫. ಕೃಷಿ:**

ಉಡುಪಿ ಮತ್ತು ಮಂಗಳೂರು ಪರಿಸರದ ಒಟ್ಟು ೧೫೫ ಕುಟುಂಬಗಳಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ಸುಳ್ಯದಲ್ಲಿಯ ಎರಡು ಕಮ್ಮಾರರ ಕುಟುಂಬಗಳು ಹಾಗೂ ಕುಂದಾಪುರದ ೪ ಕುಟುಂಬಗಳು ತಲಾ ಒಂದು ಎಕರೆ ಒಣ ಭೂಮಿಯನ್ನು ಹೊಂದಿರುವುದು ಕಂಡು ಬರುತ್ತದೆ. ಕೊಳ್ಳೆಗಾಲ ತಾಲೂಕಿನ ೪೭ ಕುಟುಂಬಗಳಲ್ಲಿ ೧೧ ಕುಟುಂಬಗಳು ತಲಾ ಎರಡು ಎಕರೆ ಭೂಮಿಯನ್ನು ಹೊಂದಿರುವುದು ಕಂಡು ಬರುತ್ತದೆ. ಕಮ್ಮಾರರು ಕೃಷಿಕ ವೃತ್ತಿಯಲ್ಲಿ ತೊಡಗಿಸಿಕೊಂಡವರಲ್ಲ. ಕೃಷಿಗೆ ಬೇಕಾದ ವಸ್ತುಗಳನ್ನು ಮಾತ್ರ ಸಿದ್ಧಪಡಿಸುವವರು. ಕೊಳ್ಳೆಗಾಲದ ಕಮ್ಮಾರರು ತಮ್ಮ ಜಮೀನಿನಲ್ಲಿ ಬೆಳೆಯುವ ಬೆಳೆಯ ಅರ್ಧ ಪಾಲನ್ನು ನೀಡುವ ಕರಾರಿನ

ಮೇಲೆ ಇತರರಿಗೆ ಭೂಮಿಯನ್ನು ಉಳುಮೆ ಮಾಡಲು ನೀಡಿರುವುದು ತಿಳಿದು ಬರುತ್ತದೆ. ಆ ಭೂಮಿಯಲ್ಲಿ ಬೆಳೆಯುತ್ತಿರುವ ರಾಗಿಯನ್ನು ಮನೆಯ ಬಳಕೆಗೆ ಉಪಯೋಗಿಸುತ್ತಾರೆ.

**೫.೧.೩. ಕಮ್ಮಾರಿಕೆಗೆ ಅನಂತಾಚಾರ್ಯರ ಕೊಡುಗೆ:**

ಕಾರ್ಕಳ ತಾಲೂಕಿನ ಪಡುಮಾರ್ನಾಡು ಗ್ರಾಮದ ಅಲಂಗಾರು ಎಂಬಲ್ಲಿ ಕ್ರಿ.ಶ. ೧೮೬೧ ರಲ್ಲಿ ಅನಂತಾಚಾರ್ಯರು ಜನಿಸಿದರು. ಇವರ ಪೂರ್ವಜರು ಬಹಳ ಹಿಂದಿನ ಕಾಲದಲ್ಲಿ ಅನೆಗೊಂದಿ ಗುರುಪೀಠದ ಅನಯಾಯಿಗಳಾಗಿದ್ದ ಇವರು ವಿಶ್ವಕರ್ಮ ಕಮ್ಮಾರರು. ಬ್ರಿಟೀಷರ ಆಡಳಿತ ಕಾಲದಲ್ಲಿ ಇವರ ಹಿರಿಯರು ಪಡುಮಾರ್ನಾಡು ಗ್ರಾಮದಲ್ಲಿ ಭೂ ಹಿಡುವಳಿದಾರರಾಗಿದ್ದರು.

ಅನಂತಾಚಾರ್ಯರ ಹಿರಿಯರು ಪಡುಮಾರ್ನಾಡಿನಲ್ಲಿದ್ದಾಗ ಅದೇ ಗ್ರಾಮದಲ್ಲಿದ್ದ ಜಮೀನ್ದಾರರಲ್ಲಿ ಪ್ರಮುಖರೆಂದರೆ ನಾರಾಯಣ ಆಚಾರ್ಯ, ವೆಂಕಪ್ಪಾಚಾರ್ಯ, ಜನ್ನಾಪ್ಪ ಆಚಾರ್ಯರು ಹಾಗೂ ಶ್ರೀಮತಿ ತುಂಗು ಆಚಾರ್ಯರು. ಶತಮಾನಗಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶ್ರೀಮಂತ ಜಮೀನ್ದಾರರಾಗಿದ್ದ ವಿಶ್ವಕರ್ಮರು ಅತೀ ವಿರಳ. ಎಲ್ಲಾ ಪಟ್ಟಣ ಪ್ರದೇಶದಲ್ಲಿ ಒಬ್ಬರೋ-ಇಬ್ಬರೋ ಶ್ರೀಮಂತ ಚಿನ್ನದ ಸರಾಫರು ಇದ್ದಿರಬಹುದು. ಆದರೆ ಕಾರ್ಕಳ ತಾಲೂಕಿನ ಒಂದೇ ಗ್ರಾಮದಲ್ಲಿ ನಾಲ್ಕೈದು ಶ್ರೀಮಂತ ಕುಟುಂಬಗಳು ಇದ್ದುವೆಂದಾದರೆ ಅದು ವಿಶೇಷವೇ ಆಗಿತ್ತು.

ಅನಂತಾಚಾರ್ಯರು ಪ್ರಾಥಮಿಕ ಶಿಕ್ಷಣ ಮುಗಿಸಿ ಕಬ್ಬಿಣದ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರಿಗೆ ಹಾರೆ, ಗುದ್ದಲಿ, ಕತ್ತಿ, ಕೊಡಲಿ ಮಾಡುವುದರಲ್ಲಿ ಅವರಿಗೆ ಆಸಕ್ತಿ ಇರಲಿಲ್ಲ. ಕೌಶಲ್ಯಯುತವಾದ ಕುಸುರಿ ಕೆಲಸ ಮಾಡುವುದರಲ್ಲಿ ಇವರು ನಿಷ್ಣಾತೀತರು. ಆದರೆ ಹಳ್ಳಿ ಪ್ರದೇಶದಲ್ಲಿಯ ಕಮ್ಮಾರಿಕೆಯಲ್ಲಿ ಅದ್ಯಾವುದಕ್ಕೂ ಅಸ್ಪದವಿರಲಿಲ್ಲ.

ಬಾಸೆಲ್ ಎಂಬುದು ಜರ್ಮನಿ ಮತ್ತು ಫ್ರಾನ್ಸ ದೇಶದ ಹತ್ತಿರದ ಸ್ವಿಟ್ಜರ್‌ಲೆಂಡ್ ದೇಶದೊಳಗಿನ ಒಂದು ಪಟ್ಟಣ. ಆ ಪಟ್ಟಣದ ಎಂಟು ಮಂದಿ ಯುವಕರು ಒಟ್ಟು ಸೇರಿ ಕ್ರಿ.ಶ. ೧೮೧೫ ರಲ್ಲಿ ಬಾಸೆಲ್ ಮಿಶನ್ ಎಂಬ ಒಂದು ಸಣ್ಣ ಸಂಸ್ಥೆಯನ್ನು ಕಟ್ಟಿದರು. ಆ ಸಂಸ್ಥೆಯವರು ಧರ್ಮ ಪ್ರಚಾರದ ಉದ್ದೇಶದಿಂದ ಭಾರತದ ಕಡೆಗೆ ಬಂದು ಕೆನರಾ ಎಂದು ಕರೆಯಲ್ಪಡುತ್ತಿದ್ದ ಜಿಲ್ಲೆಯಾದ ಮಂಗಳೂರು ಪಟ್ಟಣವನ್ನು ಕ್ರಿ.ಶ. ೧೮೩೪ ರ ಅಕ್ಟೋಬರ್ ೩೦ ರಂದು ತಲುಪಿದರು. ಮಂಗಳೂರನ್ನು ತಮ್ಮ ಕೇಂದ್ರವನ್ನಾಗಿಟ್ಟುಕೊಂಡು ಅವರು ಮತ ಪ್ರಚಾರಕ್ಕೆ ತೊಡಗಿದರು. ಇವರಿಗೆ ಜನರ ನಿಕಟ ಸಂಪರ್ಕ ಬೇಕಾಗಿತ್ತು . ವ್ಯಾಪಾರ ನಡೆಸಬೇಕಾಗಿತ್ತು. ಜರ್ಮನ್ ದೇಶ ಆಗ ಕಟ್ಲೇರಿ ಸಾಮಗ್ರಿಗಳ ತಯಾರಿಕೆಗೆ ಹೆಸರು ಪಡೆದಿತ್ತು. ಅದನ್ನೆ ಅನುಸರಿಸಿ ಬಾಸೆಲ್ ಮಿಶನ್ ರವರು ಕ್ರಿ.ಶ. ೧೮೭೪ ರಲ್ಲಿ ಮಂಗಳೂರಿನ ಬಲ್ಮಠದಲ್ಲಿ ಒಂದು ಕಬ್ಬಿಣದ ಕಾರ್ಖಾನೆಯನ್ನು ಪ್ರಾರಂಭಿಸಿದರು, ಕತ್ತರಿ, ಬೀಗ, ತಿಜೋರಿ, ಒತ್ತುವ ಅಚ್ಚುಗಳು ಮತ್ತು ಇತರೆ ದಿನ ಬಳಕೆಯ ಉಪಕರಣಗಳನ್ನು ಇಲ್ಲಿ ತಯಾರಿಸಲು ಪ್ರಾರಂಭಿಸಿದರು. ಅನಂತಾಚಾರ್ಯರು ಉದ್ಯೋಗ ಹುಡುಕುತ್ತಾ ಮಂಗಳೂರಿಗೆ

ಬಂದು ಈ ಕಾರ್ಖಾನೆಗೆ ಕಾರ್ಮಿಕರಾಗಿ ಸೇರಿದರು. ಬಾಸೆಲ್ ಮಿಶನ್ ರವರು ತಮ್ಮ ಸ್ವಾಧೀನದಲ್ಲಿದ್ದ ಅತ್ತಾವರ ಗ್ರಾಮದಲ್ಲಿ ಅನಂತಾಚಾರ್ಯರಿಗೆ ಮನೆ ಕಟ್ಟಿಸಿಕೊಟ್ಟರು.

ಇದಕ್ಕಿಂತ ಮೊದಲೇ ಕ್ರಿ.ಶ. ೧೮೪೧ ರಲ್ಲಿ ಬಾಸೆಲ್ ಮಿಶನ್ ರವರು ಮಂಗಳೂರಿನಲ್ಲಿ ಛಾಪಾಖಾನೆಯೊಂದನ್ನು ಪ್ರಾರಂಭಿಸಿದ್ದರು. ಆರಂಭದ ಹಂತದಲ್ಲಿ ಅಲ್ಲಿನ ಮುದ್ರಣ ಯಂತ್ರಗಳಿಗೆ ಅಳವಡಿಸಲು ಬೇಕಾದ ಅಚ್ಚಿನ ಮೊಳೆಗಳನ್ನು ಮತ್ತು ಮಸಿಯನ್ನು ವಿದೇಶದಿಂದ ತರಿಸಿಕೊಳ್ಳುತ್ತಿದ್ದರು. ಕನ್ನಡದ ಅಚ್ಚಿನ ಮೊಳೆಗಳ ಪರಿಚಯ ವಿದೇಶಿಯರಿಗೆ ಇರಲಿಲ್ಲ. ಇಲ್ಲಿಂದ ಅಂದವಾದ ಅಕ್ಷರಗಳ ಚಿತ್ರಬರೆದು ವಿದೇಶಕ್ಕೆ ಕಳುಹಿಸಿಕೊಡುತ್ತಿದ್ದರು. ಆ ಚಿತ್ರಗಳನ್ನಾಧರಿಸಿ ಅಲ್ಲಿ ತಯಾರಿಸಲ್ಪಟ್ಟ ಅಕ್ಷರಗಳು ಮಂಗಳೂರು ಬಾಸೆಲ್ ಮಿಶನ್ ಮುದ್ರಣಾಲಯಕ್ಕೆ ಬರುತ್ತಿದ್ದವು.

ಕಬ್ಬಿಣದ ಕಾರ್ಖಾನೆಯಲ್ಲಿ ಕಮ್ಮಾರಿಕೆಯ ಕೆಲಸ ಮಾಡುತ್ತಿದ್ದ ಅನಂತಾಚಾರ್ಯರ ಸುಂದರ ಕೈಬರಹ ಮತ್ತು ಕಾರ್ಯ ಕೌಶಲ್ಯವನ್ನು ಕಂಡು ಮಿಶನರಿಯವರು ಅವರನ್ನು ಕಾರ್ಖಾನೆಯಿಂದ ಛಾಪಾಖಾನೆಗೆ ವರ್ಗಾಯಿಸಿದರು. ಅನಂತಾಚಾರ್ಯರು ಅಲ್ಲಿಗೆ ಸೇರಿ ಕನ್ನಡದ ಸುಂದರವಾದ ಅಚ್ಚು ಮೊಳೆಗಳನ್ನು ತಯಾರಿಸಿಕೊಟ್ಟರು. ಕನ್ನಡದ ಅಚ್ಚುಮೊಳೆಗಳನ್ನು ಅಚ್ಚುಹಾಕುವ ವಿಧಾನವನ್ನು ಅನಂತಾಚಾರ್ಯರು ಕಂಡುಹಿಡಿದರು. ಇದರಿಂದಾಗಿ ಬಾಸೆಲ್ ಮಿಶನ್ನಿನ ಮುದ್ರಣ ಉತ್ಕೃಷ್ಟತೆ ಹೆಚ್ಚಾಯಿತು. ಮುದ್ರಣ ಕ್ಷೇತ್ರದಲ್ಲಿ ಬಾಸೆಲ್ ಮಿಶನ್ ಛಾಪಾಖಾನೆ ಮಂಚೂಣಿಯಲ್ಲಿ ನಿಂತಿತು.

ಬಾಸೆಲ್ ಮಿಶನ್ ಖ್ಯಾತಿ ಬೇರೆಡೆಗೆ ಹರಡಿತು. ಅಂದರೆ ಅಕ್ಷರ ಶಿಲ್ಪಿಯ ಹೆಸರು ಮಾತ್ರ ಮರೆಯಲ್ಲೇ ಉಳಿಯಿತು. ಆಚಾರ್ಯರಿಗೆ ಬಾಸೆಲ್ ಮಿಶನ್ನಿನವರ ಮನೋಭಿಪ್ರಾಯ ತಿಳಿಯಿತು. ಆಚಾರ್ಯರು ಉಭಯ ಸಂಕಟದಲ್ಲಿ ಬಿದ್ದರು. ಹೊಟ್ಟೆಪಾಡಿಗಾಗಿ ಬಾಸೆಲ್ ಮಿಶನ್ ಬಿಡುವಂತಿಲ್ಲ. ಸ್ವತಃ ಮುದ್ರಣಾಲಯ ತೆರೆಯಲು ಸಾಕಷ್ಟು ಆರ್ಥಿಕ ಸಂಪತ್ತು ಇರಲಿಲ್ಲ. ಅದರೆ ಅದೇ ಸಮಯಕ್ಕೆ ಗೋವಾದಿಂದ ಬಂದ ಕಥೋಲಿಕರು ಮಂಗಳೂರಿನ ಕೊಡಿಯಾಲ್ ಬೈಲಿನಲ್ಲಿ ಮುದ್ರಣಾಲಯವನ್ನು ತೆರೆದರು. ಆ ಮುದ್ರಣಾಲಯಕ್ಕೆ ಅನಂತಾಚಾರ್ಯರನ್ನು ಕರೆಸಿಕೊಂಡರು. ಆಚಾರ್ಯರಿಗೆ ಬಹಳ ಸಂತೋಷವಾಯಿತು. ಅವರು ತಯಾರಿಸಿದ ಅಚ್ಚಿನ ಮೊಳೆಗಳಿಗೆ "ಅನಂತ ಶೇಡೆಡ್" ಎಂಬ ಹೆಸರಿಟ್ಟರು. ಆ ಹೆಸರಿನಲ್ಲಿ ಬಹಳ ಸೂಕ್ಷ್ಮವಾಗಿ ಮೊಳೆಗಳನ್ನು ಒಳಭಾಗದಲ್ಲಿ ಕೆತ್ತಿದರು. ಆ ಮೂಲಕ ಅವರು ಅಚ್ಚಿನ ಮೊಳೆಗಳ ಸ್ವಾಮ್ಯವನ್ನು ತಮ್ಮದಾಗಿಸಿಕೊಂಡರು.

ಆಚಾರ್ಯರು ಕೊಡಿಯಾಳ್ ಬೈಲಿನಲ್ಲಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿದರು. ಅವರ ಸಂಶೋಧನೆಯ ಸುದ್ದಿ ದೇಶಾದ್ಯಂತ ಹಬ್ಬಿತು. ಮುಂಬೈಯಲ್ಲಿ ಪ್ರಸಿದ್ಧ ಮುದ್ರಣಾಲಯವೆಂದು ಹೆಸರುಗಳಿಸಿದ್ದ ನಿರ್ಣಯ ಸಾಗರ್ ಪ್ರೆಸ್‌ನ ಮಾಲಿಕರಾದ ತುಕಾರಾಮ ಜಾವಾಜಿಯವರು ಮಂಗಳೂರಿಗೆ ಬಂದು ಮರಾಠಿ ಮೊಳೆಗಳನ್ನು ತಯಾರಿಸಿಕೊಡುವಂತೆ ಕೇಳಿಕೊಂಡರು. ಕೊಡಿಯಾಲ್ ಬೈಲ್ ಪ್ರೆಸ್ಸಿನ ಮಾಲಕರ ಒಪ್ಪಿಗೆಯ ಮೇರಿಗೆ ಅನಂತಾಚಾರ್ಯರು ಮುಂಬೈಯಿಗೆ ತೆರಳಿದರು. ಅಲ್ಲಿ ಮರಾಠಿ ಮತ್ತು ಗುಜರಾತಿ ಭಾಷೆಯ ಅಚ್ಚಿನ ಮೊಳೆಗಳನ್ನು ತಯಾರಿಸಿಕೊಟ್ಟರು.

ಅಷ್ಟರಲ್ಲಿ ಹೈದರಾಬಾದಿನ ನಿಜಾಮರಿಂದ ಉರ್ದು ಮೊಳೆಗಳ ತಯಾರಿಕೆಗೆ ಕರೆ ಬಂತು. ಉರ್ದು ಮತ್ತು ತೆಲುಗು ಮೊಳೆಗಳನ್ನು ತಯಾರಿಸಿಕೊಡುವ ಮೂಲಕ ಅವರ ಬೇಡಿಕೆಯನ್ನೂ ಈಡೇರಿಸಿದರು. ಕೆಲವು ವರ್ಷಗಳ ಬಳಿಕ ಆಚಾರ್ಯರು ಧಾರವಾಡಕ್ಕೆ ಬಂದು ಧಾರವಾಡದಲ್ಲಿ ಒಂದೆರಡು ವರ್ಷಗಳ ಬಳಿಕ ಮಂಗಳೂರಿಗೆ ಹಿಂತಿರುಗಿದರು.

ಮಂಗಳೂರಿಗೆ ಬಂದ ಬಳಿಕ ಅವರಿಗೆ ದೃಷ್ಟಿ ದೋಷ ಉಂಟಾಯಿತು. ಕಂಕನಾಡಿಯಲ್ಲಿ ಒಂದು ಮುದ್ರಣಾಲಯವನ್ನು ಸ್ಥಾಪಿಸಿದರು. ಅಲ್ಲಿ ಸರಿಯಾಗಿ ಕೆಲಸ ಮಾಡಲು ಸಾಧ್ಯವಾಗಲಿಲ್ಲ. ಆ ಫೌಂಡ್ರಿಯನ್ನು ಮಾರಾಟ ಮಾಡಿ ಆಯುರ್ವೇದದ ಔಷಧಿ ತಯಾರಿಕೆಯಲ್ಲಿ ತೊಡಗಿದರು. ಕೊನೆಕೊನೆಗೆ ಅವರ ಎರಡೂ ಕಣ್ಣುಗಳು ಕಾಣದಾದವು. ಮುಪ್ಪಿನಲ್ಲಿ ಅವರು ಬಹಳಷ್ಟು ತೊಂದರೆಗಳನ್ನು ಅನುಭವಿಸಬೇಕಾಯಿತು. ಕ್ರಿ.ಶ. ೧೯೪೪ ರಲ್ಲಿ ಅವರು ಮಂಗಳೂರಿನಲ್ಲಿ ಸ್ವರ್ಗಸ್ಥರಾದರು.

ಅನಂತಾಚಾರ್ಯರಿಗೆ ತಮ್ಮ ಸಮಾಜದ ಬಗ್ಗೆ ವಿಶೇಷವಾದ ಅಭಿಮಾನವಿತ್ತು. ದಕ್ಷಿಣ ಕನ್ನಡದ ವಿಶ್ವಕರ್ಮರೆಲ್ಲರೂ ವೈದಿಕ ಸಂಸ್ಕೃತಿಯನ್ನು ತಮ್ಮ ಜೀವನದಲ್ಲಿ  ಅಳವಡಿಸಿಕೊಳ್ಳಬೇಕು. ತಮ್ಮೊಳಗಿನ  ಪಂಥಭೇದ ತೊರೆದು ಒಗ್ಗಟಿನಿಂದ ಬಾಳುವಂತಾಗಬೇಕು ಎಂಬ ಅಭಿಲಾಷೆ ಇತ್ತು. ಅದಕ್ಕಾಗಿಯೇ ಅವರು ವಿಶ್ವಬ್ರಾಹ್ಮಣ ಸಮಾಜದ ಶ್ರೇಷ್ಠ ವೈದಿಕ ಶಿಕಾಮಣಿ ಬ್ರಹ್ಮಶ್ರೀ ಬಾಳಾ ಶಾಸ್ತ್ರಿಯವರನ್ನು ಪೂನಾದಿಂದ ದಕ್ಷಿಣ ಕನ್ನಡ ಜಿಲ್ಲೆಗೆ ಕರೆಯಿಸಿಕೊಂಡು ಅವರಿಂದ ಹಲವಾರು ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿದರು. ಸಾಂಸ್ಕೃತಿಕವಾಗಿ ವಿಶ್ವ ಬ್ರಾಹ್ಮಣರೆಲ್ಲಾ ಒಂದಾಗುವಂತೆ ಮಾಡಿದರು. ಹೀಗೆ ವಿಶ್ವಕರ್ಮ ಸಮಾಜದವರ ಹಾಗೂ ಕಮ್ಮಾರರ ಉದ್ಧಾರಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಇವರು ಹಮ್ಮಿಕೊಂಡಿದ್ದರೆಂದು ತಿಳಿಯುತ್ತದೆ.

**೫.೧.೪.ಕಮ್ಮಾರರ ಸಮಸ್ಯೆಗಳು:**

ಕೃಷಿ ಕಾರ್ಯ ನಿರ್ವಹಿಸಲು ಬೇಕಾದ ವಸ್ತುಗಳನ್ನು, ದುಷ್ಟಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಆಯುಧಗಳನ್ನು, ಯುದ್ಧಕ್ಕೆ ಬೇಕಾಗುವ ಶಸ್ತ್ರಾಸ್ತ್ರಗಳನ್ನು , ಅನೇಕ ಗೃಹೋಪಯೋಗಿ ವಸ್ತುಗಳನ್ನು ಸೃಷ್ಟಿಸಿ, ಸಿದ್ಧಪಡಿಸಿಕೊಡುವ ಕಾರ್ಯದಲ್ಲಿ ನಿರತರಾಗಿದ್ದ ಕಮ್ಮಾರರು ಒಂದು ಕಾಲಘಟ್ಟದಲ್ಲಿ ಜಗತ್ತಿನಲ್ಲಿ ಕಬ್ಬಿಣದ ಮೂಲಕ ಕ್ರಾಂತಿಯನ್ನು ಮಾಡಿದವರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಸಾಮಾನ್ಯ ಜನತೆಯಿಂದ ಹಿಡಿದು ರಾಜ-ಮಹಾರಾಜರವರೆಗೆ ಅವರ ಪ್ರೀತಿಗೆ ಪಾತ್ರರಾಗಿದ್ದ ಕಮ್ಮಾರರು ಬ್ರಿಟೀಷರು ಭಾರತಕ್ಕೆ ಆಗಮಿಸುವುದಕ್ಕಿಂತ ಪೂರ್ವದಲ್ಲಿ ಭಾರತೀಯರಿಗೆ ಅವಶ್ಯವಾಗಿ ಬೇಕಾದ ಕಬ್ಬಿಣದ ವಸ್ತುಗಳನ್ನು ಇವರೇ ಪೂರೈಸುತ್ತಿದ್ದರು. ಕಮ್ಮಾರರು ಸ್ವತಃ ತಾವೇ ತಮ್ಮದೇ ಆದ ದೇಶಿ ತಂತ್ರಜ್ಞಾನವನ್ನು  ಬಳಸಿಕೊಂಡು ಕಬ್ಬಿಣವನ್ನು ತಯಾರಿಸಿಕೊಳ್ಳುತ್ತಿದ್ದರು.

ಬ್ರಿಟೀಷರು ಭಾರತವನ್ನು ಪ್ರವೇಶಿಸಿ ಸ್ಥಳಿಯ ಕಮ್ಮಾರರು ಕಬ್ಬಿಣ ಸಂಸ್ಕರಿಸಲು ಬಳಸುತ್ತಿದ್ದ ವಿಧಾನವನ್ನೇ ಬಳಸಿಕೊಂಡು ಕಾರ್ಖಾನೆಗಳಲ್ಲಿ ಕಬ್ಬಿಣವನ್ನು ತಯಾರಿಸಿಕೊಂಡು ಅದರ ಮೂಲಕ

ಕೃಷಿಗೆ ಬೇಕಾದ ಉಪಕರಣಗಳನ್ನು, ಆಯುಧಗಳನ್ನು, ಗೃಹೋಪಯೋಗಿ ವಸ್ತುಗಳನ್ನು ಬ್ರಹತ್ ಪ್ರಮಾಣದಲ್ಲಿ ಸಿದ್ಧಪಡಿಸಿ ಮಾರಾಟಕ್ಕೆ ಬಿಡಲಾರಂಭಿಸಿದರು. ಅಲ್ಲಿಂದಲೇ ಕಮ್ಮಾರರ ವೃತ್ತಿಗೆ ಸಂಬಂಧಿಸಿದ ಸಮಸ್ಯೆಗಳು ಪ್ರಾರಂಭವಾಗ ತೊಡಗಿದವು. ಭಾರತೀಯರಲ್ಲಿಯ ಗುಡಿ ಕೈಗಾರಿಕೆಗಳನ್ನು ಉತ್ತೇಜನ ಗೊಳಿಸಿ ರಾಷ್ಟ್ರ ನಿರ್ಮಾಣದಲ್ಲಿ ಅವರನ್ನು ಬಳಸಿ, ರಾಮರಾಜ್ಯ ಕಟ್ಟುವ ಕನಸು ಕಾಣುತ್ತಿದ್ದ ಗಾಂಧೀಜಿಯ ಕನಸು ಆಧುನಿಕ ಕೈಗಾರಿಕೆಗಳ ಸ್ಥಾಪನೆಯಿಂದ ಅದು ನನಸಾಗಲೇ ಇಲ್ಲ. ಭಾರತದಲ್ಲಿ ಅದೆಷ್ಟೊ ಸಮುದಾಯಗಳು ಪರಂಪರಾನುಗತವಾಗಿ ಮುಂದುವರೆಸಿಕೊಂಡು ಬರುತ್ತಿದ್ದ ಕುಲ ಕಸಬುಗಳು ಹಂತ ಹಂತವಾಗಿ ಕ್ಷೀಣಿಸಲಾರಂಭಿಸಿದವು.

ಕಮ್ಮಾರರು ಬ್ರಿಟೀಷರ ಆಗಮನದ ನಂತರ ಕಬ್ಬಿಣದ ಅದಿರನ್ನು ಸಂಸ್ಕರಿಸಿ ಕಬ್ಬಿಣ ತಯಾರಿಸುವುದನ್ನು ಕೈಬಿಟ್ಟರು ಮತ್ತು 'ಆಧುನಿಕ ಕೈಗಾರಿಕೆಗಳಲ್ಲಿ ತಯಾರಾದ ಕಬ್ಬಿಣವನ್ನು ಕೊಳ್ಳಲಾರದಷ್ಟು ದುರ್ಭಲ, ಆರ್ಥಿಕ, ಮಾನಸಿಕ ಸ್ಥಿತಿಯನ್ನು ಒಳಗೊಂಡಿದ್ದರು ಮತ್ತು ಆಧುನಿಕ ಕೈಗಾರಿಕೆಯಲ್ಲಿ ತಯಾರಾದ ಕಬ್ಬಿಣ ಕಮ್ಮಾರರು ತಯಾರಿಸುತ್ತಿದ್ದ ಕಬ್ಬಿಣಕ್ಕಿಂತ ಹೆಚ್ಚು ಸುಲಭ ಬೆಲೆಯಲ್ಲಿ ದೊರೆಯುತ್ತಿದ್ದುದರಿಂದ ಬಹುತೇಕ ಭಾರತೀಯರು ಕಮ್ಮಾರರು ತಯಾರಿಸುತ್ತಿದ್ದ ಕಬ್ಬಿಣವನ್ನು ನಿರಾಕರಿತೊಡಗಿದರು" ಈ ಕಾರಣಗಳಿಂದ ಕಮ್ಮಾರರು ಕಬ್ಬಿಣವನ್ನು ತಯಾರಿಸುವ ವೃತ್ತಿಯನ್ನು ಕೈ ಬಿಟ್ಟರು. ಆದರೆ ಕಬ್ಬಿಣದಿಂದ ಅನೇಕ ವಸ್ತುಗಳನ್ನು ಸಿದ್ಧಪಡಿಸುವ ವೃತ್ತಿಯನ್ನು ಮಾತ್ರ ಕೈ ಬಿಡಲಿಲ್ಲ. ಇದರಿಂದ ಕಮ್ಮಾರರ ಆರ್ಥಿಕ ಸ್ಥಿತಿಗತಿಗಳು ಹಾಗೂ ಅವರ ಬದುಕು ಚಿಂತಾಜನಕವಾಗುತ್ತ ಸಾಗಿತು.

ಹಂತ ಹಂತವಾಗಿ ಆಧುನಿಕ ಕೈಗಾರಿಕೆಗಳು ಬೆಳೆದಂತೆಲ್ಲಾ ಕಮ್ಮಾರರ ವೃತ್ತಿಗಳು ಹಾಗೂ ಜೀವನ ಸಹ ಹಂತ ಹಂತವಾಗಿ ಕೆಳಗಿಳಿಯತೊಡಗಿತು. ಕಮ್ಮಾರರು ಹೆಚ್ಚಾಗಿ ಅನಕ್ಷರಸ್ತರು. ತಮ್ಮ ಪಾರಂಪರಿಕ ಅನುಭವ ಹಾಗೂ ಜ್ಞಾನದ ಮೇಲೆಯೇ ವೃತ್ತಿಯನ್ನು ಕೈಗೊಳ್ಳುತ್ತಾ ಬಂದವರು. ಕಮ್ಮಾರರ ಕುಲುಮೆಯಲ್ಲಿ ತಯಾರಾಗುತ್ತಿದ್ದ ಎಲ್ಲಾ ವಸ್ತುಗಳು ಕಾರ್ಖಾನೆಗಳಲ್ಲಿ ಸಿದ್ಧವಾಗಿ ಮಾರುಕಟ್ಟೆಗಳಲ್ಲಿ ಬರತೊಡಗಿದ ಮೇಲೆ ಕಮ್ಮಾರರಿಗೆ ಪ್ರಮುಖ ಕೆಲಸಗಳೇ ಇಲ್ಲದಂತಾಯಿತು. ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಅನಕ್ಷರಸ್ತ ಕಮ್ಮಾರರು ತಮ್ಮ ವೃತ್ತಿಯಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಬಳಸಿಕೊಂಡು ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತಿರುವುದನ್ನು ಕಾಣುತ್ತೇವೆ. ಗ್ರಾಮೀಣ ಪ್ರದೇಶದ ಕಮ್ಮಾರರ ಸ್ಥಿತಿಗತಿಗಳು ತುಂಬಾ ಶೋಚನೀಯ ಸ್ಥಿತಿಯಲ್ಲವೆ. ಬೆಳಿಗ್ಗೆ ಆರು ಗಂಟೆಯಿಂದ ಸಾಯಂಕಾಲದವರೆಗೆ ಬೆಂಕಿಯ ಮುಂದೆ ಕುಳಿತು ಕಾರ್ಯ ನಿರ್ವಹಿಸುತ್ತಿದ್ದರು. ಇಂದು ಕೆಲಸಗಳಿಲ್ಲದೇ ಅಲೆಯುತ್ತಿದ್ದಾರೆ. ವಯಸ್ಸಾದವರಿಗೆ ಅನೇಕ ರೋಗಗಳು ಅಂಟಿಕೊಂಡಿವೆ. ದಿನಕ್ಕೆ ೮ ರಿಂದ ೧೦ ಗಂಟೆಯವರೆಗೆ ಬೆಂಕಿಯ ಮುಂದೆ ಕುಳಿತು ಕಾರ್ಯ ನಿರ್ವಹಿಸುವುದು ಸುಲಭವಾದ ಕೆಲಸವಲ್ಲ. ಒಂದು ಕಾಲದಲ್ಲಿ ಈ ರೀತಿ ಕಾರ್ಯ ನಿರ್ವಹಿಸಿದ ಇವರು ಇಂದು ತುತ್ತು ಕೂಳಿಗೂ ಗತಿಯಿಲ್ಲದವರಾಗಿದ್ದಾರೆ.

ಕಮ್ಮಾರರ ಮಕ್ಕಳು ಕಮ್ಮಾರಿಕೆಯನ್ನು ಅನುಸರಿಸುತ್ತಿಲ್ಲ. ಬಾರ್ ಬೆಂಡಿಂಗ್, ಮರದ ಕೆಲಸ, ಡ್ರೈವರ್, ಕೂಲಿ, ಮೋಟರ್ ಮೆಕ್ಯಾನಿಕ್, ಮುಂತಾದ ವೃತ್ತಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಕೆಲ ಕಮ್ಮಾರರಿಗೆ ಕಮ್ಮಾರಿಕೆ ವೃತ್ತಿಯನ್ನು ಬಿಟ್ಟರೆ ಬೇರೆ ಯಾವ ವೃತ್ತಿಯೂ ಗೊತ್ತಿಲ್ಲ. ವಯಸ್ಸಾದ ಇವರಲ್ಲಿ ಅನೇಕರು ನಿರ್ಗತಿಕರಂತೆ ಬಾಳುತ್ತಿರುವುದು ಅಲ್ಲಲ್ಲಿ ಕಂಡು ಬರುತ್ತದೆ. ಅನೇಕ ಪ್ರದೇಶಗಳಲ್ಲಿ ವಯಸ್ಸಾದ ಕಮ್ಮಾರರನ್ನು ಅವರ ಮಕ್ಕಳು ನೋಡಿಕೊಳ್ಳುತ್ತಿಲ್ಲ. ಇದಕ್ಕೆ ಕಾರಣ ಅವರ ಮಕ್ಕಳ ಹತ್ತಿರ ಕೇಳಿದರೆ 'ನಮ್ಮ ತಂದೆ ನಮಗೆ ಶಾಲೆಯನ್ನು ಕಲಿಸಲಿಲ್ಲ. ಈ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿ ಮಾಡು ಎಂಬ ತಿಳುವಳಿಕೆಯನ್ನೂ ಹೇಳಲಿಲ್ಲ. ಕೊನೆಗೆ ನಮ್ಮನ್ನೂ ಹಾಳು ಮಾಡಿ ತಾನು ಹಾಳಾದ ಅದಕ್ಕಾಗಿ ನಾವು ಅವರಿಂದ ದೂರ ಉಳಿದಿದ್ದೇವೆ' ಎಂಬ ಮಾತುಗಳನ್ನು ಹೇಳುತ್ತಾರೆ.

**೫.೨. ಶೈಕ್ಷಣಿಕ ಸ್ಥಿತಿಗತಿಗಳು:**

ಕರ್ನಾಟಕದ ತುಂಬೆಲ್ಲ ಸಂಚರಿಸಿ ಸಮೀಕ್ಷೆ ಮಾಡಿದರೂ ಕಮ್ಮಾರರ ಸಮುದಾಯದಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ, ಬುದ್ಧಿವಂತರ, ಜಾಣರ, ಸುಶಿಕ್ಷಿತರು ಮತ್ತು ಶೈಕ್ಷಣಿಕವಾಗಿ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ವೈದ್ಯಕೀಯವಾಗಿ, ರಾಜಕೀಯವಾಗಿ, ವೈಜ್ಞಾನಿಕವಾಗಿ ಮುಂದುವರೆದವರು ಎಂದು ಹೇಳಿಕೊಳ್ಳುವ ಉಡುಪಿ ಮತ್ತು ಮಂಗಳೂರು ಪ್ರದೇಶದಲ್ಲಿ ವಾಸಿಸುತ್ತಿರುವ ಕಮ್ಮಾರರು ಸಹ ಹೆಚ್ಚಿನ ಪ್ರದೇಶಗಳಲ್ಲಿ ಶೇ ೬೫% ರಷ್ಟು ಜನ ಪ್ರಾಥಮಿಕ ಹಂತದ ಶಿಕ್ಷಣವನ್ನು ಮಾತ್ರ ಪಡೆದುಕೊಂಡಿರುವುದು ಕಂಡು ಬರುತ್ತದೆ.

ಕಮ್ಮಾರಿಕೆಯ ವೃತ್ತಿಯ ಮೇಲೆ ಆಧುನಿಕತೆ ಪ್ರಭಾವ ಬೀರುತ್ತಾ ಅವರ ವೃತ್ತಿಗಳು ಕ್ಷೀಣಿಸತೊಡಗಿದ ನಂತರ ಅವರಿಗೆ ಅರಿವು ಉಂಟಾಗಿ ನಮ್ಮ ಮಕ್ಕಳಿಗೆ ಎಷ್ಟೇ ಕಷ್ಟ ಬಂದರೂ ಸಹ ಶಿಕ್ಷಣ ಕೊಡಿಸಬೇಕು ಎಂಬ ಹಂತಕ್ಕೆ ತಲುಪಿರುವುದು ಸಂತೋಷದ ವಿಷಯ ಎಂದು ಹೇಳಬಹುದು. ಉಡುಪಿ ಮತ್ತು ಮಂಗಳೂರು ಪರಿಸರದ ಕಮ್ಮಾರರು ತಮ್ಮ ಮಕ್ಕಳು ಬೆಳೆದು ದೊಡ್ಡವರಾಗುವವರೆಗೆ ಅಂದರೆ ಹತ್ತರಿಂದ ಹನ್ನೆರಡು ವರ್ಷದ ವರೆಗೆ, ಕಮ್ಮಾರರ ಪರಿಭಾಷೆಯಲ್ಲಿ ಹೇಳುವುದಾದರೆ 'ಮಕ್ಕಳು ತಿದಿ ಊದಲು ಕುಳಿತುಕೊಳ್ಳುವವರೆಗೆ' ಮಾತ್ರ ಶಾಲೆಗೆ ಕಳುಹಿಸುತ್ತಿದ್ದರು. ನಂತರ ಅವರಿಗೆ ಕಮ್ಮಾರಿಕೆಯನ್ನು ಕಲಿಸಲಾಗುತ್ತಿತ್ತು. ಕಮ್ಮಾರಿಕೆ ವೃತ್ತಿಯನ್ನು ನಿರ್ವಹಿಸಲು ಒಬ್ಬರೇ ಸಾಕಾಗುವುದಿಲ್ಲ. ಬೇರೆಯವರನ್ನು ದಿನಗೂಲಿ ಕೆಲಸಕ್ಕೆ ತೆಗೆದುಕೊಂಡರೆ ಬರುವ ಆದಾಯದಲ್ಲಿ ಕೂಲಿಯವರಿಗೆ ಕೊಡಬೇಕಾಗುತ್ತದೆ ಎಂಬ ಕಾರಣದಿಂದ ತಮ್ಮ ಮಕ್ಕಳನ್ನೇ ಈ ವೃತ್ತಿಗೆ ಬಳಸಿಕೊಳ್ಳುವ ಪರಂಪರೆಯನ್ನು ಬೆಳಸಿಕೊಂಡರು. ಓದಲಿಕ್ಕೆ ಬರಿಯಲಿಕ್ಕೆ ಮತ್ತು ಲೆಕ್ಕ ಪತ್ರ ಮಾಡಲಿಕ್ಕೆ ಬರುವಷ್ಟು ವಿದ್ಯೆ ಬಂದರೆ ಸಾಕು, ನಮ್ಮ ವೃತ್ತಿಯನ್ನು ಸರಳವಾಗಿ ಮಾಡಿಕೊಂಡು ಹೋಗಬಹುದು ಎಂಬ ಮನೋಭಾವನೆ ಕಮ್ಮಾರರಲ್ಲಿದ್ದದ್ದೇ ಅವರಲ್ಲಿ ಶೈಕ್ಷಣಿಕತೆಯ ಪ್ರಮಾಣ

ಕಡಿಮೆಯಾಗಲು ಕಾರಣವಾಗಿದೆ ಎಂದು ಹೇಳಬಹುದು. ಅಲೆಮಾರಿ ಕಮ್ಮಾರರ ಶೈಕ್ಷಣಿಕ ಸ್ಥಿತಿಗತಿಗಳಂತೂ ಇವರಿಗಿಂತಲೂ ಕಡೆಯಾಗಿದೆ.

ಕಮ್ಮಾರರು ಶೈಕ್ಷಣಿಕವಾಗಿ ಪ್ರಗತಿಯನ್ನು ಸಾಧಿಸಿದ್ದರೆ ತಮ್ಮ ವೃತ್ತಿಯಲ್ಲಿ ಆಧುನಿಕತೆಯ ತಂತ್ರಜ್ಞಾನಗಳನ್ನು ಅಳವಡಿಸಿಕೊಂಡು ಬದುಕಬಹುದಾಗಿತ್ತು. ನಗರ ಪ್ರದೇಶಗಳಲ್ಲಿಯ ಅಕ್ಷರಸ್ತ ಕಮ್ಮಾರರು ಇಂದು ಆಧುನಿಕ ಯಂತ್ರೋಪಕರಣಗಳನ್ನು ತಮ್ಮ ವೃತ್ತಿಯಲ್ಲಿ ಬಳಸುತ್ತಿರುವುದು ಅಲ್ಲಲ್ಲಿ ಕಂಡು ಬರುತ್ತದೆ.

ಪಾರಂಪರಿಕ ಕುಲ ಕಸಬುದಾರರಲ್ಲಿರುವ ಪ್ರಮುಖವಾದ ಸಮಸ್ಯೆಯೆಂದರೆ ಶಿಕ್ಷಣ. ಮಕ್ಕಳು ಕೈಗೆ ಬರುವ ಹೊತ್ತಿಗೆ ಅವರನ್ನು ಶಾಲೆ ಬಿಡಿಸಿ ತಮ್ಮ ವೃತ್ತಿ ಕಲಿಸುತ್ತಿರುವುದೇ ಇದಕ್ಕೆ ಮೂಲ ಕಾರಣ. ವೈಜ್ಞಾನೀಕರಣ, ಆಧುನಿಕತೆಯನ್ನು ತಮ್ಮ ಪಾರಂಪರಿಕ ವೃತ್ತಿಗಳಲ್ಲಿ ಬಳಸಿಕೊಳ್ಳಬೇಕು ಎಂಬ ಅರಿವು ಇವರಲ್ಲಿ ಮೂಡದೇ ಇರುವುದು ಸಹ ಇದಕ್ಕೆ ಕಾರಣವಾಗಿದೆ.

ನಾನು ಅಧ್ಯಯನಕ್ಕೊಳಪಡಿಸಿಕೊಂಡ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ, ಉಡುಪಿ ಹಾಗೂ ಮಂಗಳೂರು ಜಿಲ್ಲೆಯ ಕಾರ್ಕಳ, ಕುಂದಾಪುರ ಉಡುಪಿ, ಮಂಗಳೂರು, ಪುತ್ತೂರು, ಬೆಳ್ತಂಗಡಿ, ಹಾಗೂ ಸುಳ್ಯ ತಾಲೂಕಿನಲ್ಲಿ ವಾಸಿಸುತ್ತಿರುವ ಕಮ್ಮಾರರ ಶೈಕ್ಷಣಿಕ ವಿವರಗಳನ್ನು ಪಡೆದುಕೊಂಡು ಅದನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದೇನೆ.

೧. ೬ ರಿಂದ ೧೫ ವರ್ಷದೊಳಗಿನವರ ಶಿಕ್ಷಣದ ಮಾಹಿತಿ.

೨. ೧೬ ರಿಂದ ೨೫ ವರ್ಷದೊಳಗಿನವರ ಶಿಕ್ಷಣದ ಮಾಹಿತಿ

೩. ೨೬ ರಿಂದ ೪೫ ವರ್ಷದೊಳಗಿನವರ ಶಿಕ್ಷಣದ ಮಾಹಿತಿ

೪. ೪೬ ರಿಂದ ೬೦ ವರ್ಷದೊಳಗಿನವರ ಶಿಕ್ಷಣದ ಮಾಹಿತಿ

**೫.೨.೧. ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಶೈಕ್ಷಣಿಕ ವಿವರಗಳು:**

ಕೊಳ್ಳೆಗಾಲ ತಾಲೂಕಿನಲ್ಲಿಯ ೪೭ ಕುಟುಂಬಗಳಲ್ಲಿ ಒಟ್ಟು ೨೧೧ ಜನಸಂಖ್ಯೆ ಕಂಡುಬಂದಿದ್ದು ಇದರಲ್ಲಿ ೧೯೭ ಪುರುಷರು ಮತ್ತು ೯೪ ಮಹಿಳೆಯರಿದ್ದಾರೆ. ೬ ರಿಂದ ೧೫ ವರ್ಷದೊಳಗಿನ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಪಡೆದ ಮತ್ತು ಶಿಕ್ಷಣವನ್ನು ಮುಂದುವರೆಸಿದ ಮಾಹಿತಿ ದೊರೆಯುತ್ತದೆ. ೧೬ ರಿಂದ ೨೫ ವರ್ಷದೊಳಗಿನವರು ಎಸ್.ಎಸ್. ಸಿ. ಯಿಂದ ಪದವಿಯವರೆಗೆ ಶಿಕ್ಷಣವನ್ನು ಪಡೆದವರಿದ್ದು ಅವರಲ್ಲಿ ಅನೇಕರು ಎಸ್.ಎಸ್.ಎಲ್.ಸಿ. ನಂತರ ಶಿಕ್ಷಣ ಮುಂದುವರೆಸಲು ಸಾಧ್ಯವಾಗದೇ ಇರುವುದು ಕಂಡು ಬರುತ್ತದೆ.

ಒಟ್ಟು ೪೭ ಕುಟುಂಬಗಳಲ್ಲಿಯ ೧೯೭ ಪುರುಷರಲ್ಲಿ ೫೯ ಜನ ಪ್ರಾಥಮಿಕ ಮತ್ತು ಮಾಧ್ಯಮಿಕ, ೨೫ ಜನ ಎಸ್.ಎಸ್.ಎಲ್.ಸಿ, ೮ ಜನ ಪಿಯುಸಿ, ೫ ಜನ ಪದವಿ, ತಲಾ ಮೂವರು ಐಟಿಐ ಹಾಗೂ ಟಿ.ಸಿ.ಎಚ್ ಶಿಕ್ಷಣವನ್ನು ಪಡೆದಿದ್ದಾರೆ. ೫೯ ಜನರಲ್ಲಿ ೧ ರಿಂದ ೫ ನೆಯ ತರಗತಿಯವರೆಗೆ ಪ್ರಾಥಮಿಕ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಗಿರುವುದು ಕಂಡುಬಂದಿದೆ.

ಒಟ್ಟು ೯೪ ಮಹಿಳೆಯರಲ್ಲಿ ೪೧ ಮಹಿಳೆಯರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು, ೧೨ ಮಹಿಳೆಯರು ಎಸ್.ಎಸ್.ಎಲ್.ಸಿ, ಪಿ.ಯು.ಸಿಯಲ್ಲಿ ಮೂವರು ಹಾಗೂ ಟಿ.ಸಿ.ಎಚ್ ನಲ್ಲಿ ಇಬ್ಬರು ಶಿಕ್ಷಣ ಪಡೆದಿರುವುದು ಕಂಡುಬರುತ್ತದೆ. ಮಹಿಳೆಯರಲ್ಲಿಯೂ ೧ ರಿಂದ ೫ನೆಯ ತರಗತಿಯವರೆಗೆ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಗಿ ಕಂಡು ಬರುತ್ತದೆ. ಕೊಳ್ಳೆಗಾಲದ ಕಮ್ಮಾರರ ಶೈಕ್ಷಣಿಕ ವಿವರಗಳನ್ನು ಗಮನಿಸಿದಾಗ ನಗರ ಪ್ರದೇಶದಲ್ಲಿಯ ಕಮ್ಮಾರರು ಎಸ್.ಎಸ್.ಎಲ್.ಸಿ, ಪಿಯುಸಿ ಹಾಗೂ, ಪದವಿವರೆಗೆ ವಿದ್ಯಾಭ್ಯಾಸ ಮಾಡಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿರುವವರು ಪ್ರಾಥಮಿಕ ಹಂತದ ಶಿಕ್ಷಣವನ್ನು ಮಾತ್ರ ಪಡೆದಿದ್ದಾರೆ.

**೫.೨.೨.ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಶೈಕ್ಷಣಿಕ ವಿವರಗಳು:**

ಕುಂದಾಪುರ ತಾಲೂಕಿನಲ್ಲಿಯ ೭೭ ಕುಟುಂಬಗಳಲ್ಲಿ ಒಟ್ಟು ೨೯೨ ಜನಸಂಖ್ಯೆ ಇದ್ದು, ಇದರಲ್ಲಿ ೧೪೮ ಪುರುಷರು ೧೪೪ ಮಹಿಳೆಯರಿರುವುದು ಕಂಡುಬಂದಿದೆ. ಇಲ್ಲಿಯ ೬ ರಿಂದ ೧೫ ವರ್ಷದೊಳಗಿನ ಮಕ್ಕಳು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತದೆ. ೧೬ ರಿಂದ ೪೫ವರ್ಷದೊಳಗಿನ ವಯಸ್ಸಿನವರು ಎಸ್.ಎಸ್.ಎಲ್.ಸಿ ಯಿಂದ ಪದವಿಯ ವರೆಗೆ ಶಿಕ್ಷಣ ಪಡೆದವರ ಮಾಹಿತಿ ಲಭ್ಯವಾಗಿದೆ. ಈ ತಾಲೂಕಿನಲ್ಲಿಯೂ ಸಹ ಅನೇಕರು ಪ್ರಾಥಮಿಕ ಶಿಕ್ಷಣದಿಂದ ಮಾಧ್ಯಮಿಕ ಶಿಕ್ಷಣವನ್ನು, ಎಸ್.ಎಸ್.ಎಲ್.ಸಿ ಯಿಂದ ಪಿ.ಯು.ಸಿ ಹಾಗೂ ಪದವಿ ಶಿಕ್ಷಣ ಮುಂದುವರೆಸಲು ಸಾಧ್ಯವಾಗದೆ ಇರುವುದು ಕಂಡುಬರುತ್ತದೆ.

ಈ ತಾಲೂಕಿನ ೧೪೮ ಪುರುಷರಲ್ಲಿ ೯೭ ಜನರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಪಡೆದವರಿದ್ದಾರೆ. ಇದರಲ್ಲಿ ೧ನೇ ತರಗತಿಯಿಂದ ೫ನೇ ತರಗತಿಯವರೆಗೆ ಶಿಕ್ಷಣ ಪಡೆದವರ ಸಂಖ್ಯೆ ಅಧಿಕವಾಗಿದೆ. ಎಸ್.ಎಸ್.ಎಲ್.ಸಿ ಯಲ್ಲಿ ೩೧ ಜನರು, ಪಿ.ಯು.ಸಿಯಲ್ಲಿ ೧೧ ಜನರು, ಪದವಿಯಲ್ಲಿ ಒಬ್ಬರು, ಬಿ.ಎಡ್.ಒಬ್ಬರು, ಬಿ.ಕಾಮ್‌ನಲ್ಲಿ ಹಾಗೂ ಬಿ.ಎ ದಲ್ಲಿ ಇಬ್ಬರು ಪದವಿ ಪಡೆದಿದ್ದಾರೆ. ಇಬ್ಬರು ಐ.ಟಿ.ಐ, ಒಬ್ಬರು ಟಿ.ಸಿ.ಎಚ್, ಇನ್ನೊಬ್ಬರು ಡ್ರಾಯಿಂಗ್ ಟೀಚರ್ ಕೋರ್ಸ್ ಮಾಡಿದ್ದಾರೆ.

೧೪೪ ಮಹಿಳೆಯರಲ್ಲಿ ೫೬ ಮಹಿಳೆಯರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆದಿದ್ದಾರೆ. ೫೬ ಮಹಿಳೆಯರಲ್ಲಿ ಪ್ರಾಥಮಿಕ ಹಂತದ ಶಿಕ್ಷಣವನ್ನು ಪಡೆದವರ ಸಂಖ್ಯೆ ಅಧಿಕವಾಗಿದೆ. ಎಸ್.ಎಸ್.ಎಲ್.ಸಿ.ಯಲ್ಲಿ ೧೪, ಪಿಯುಸಿಯಲ್ಲಿ ೧೦, ಪದವಿಯಲ್ಲಿ ಒಬ್ಬರು, ಹಾಗೂ ಡಿಪ್ಲೋಮಾ ಮತ್ತು ಟಿ.ಸಿ.ಎಚ್‌ನಲ್ಲಿ ತಲಾ ಒಬ್ಬರು ಶಿಕ್ಷಣ ಪಡೆದ ಬಗ್ಗೆ ಮಾಹಿತಿ ದೊರೆಯುತ್ತದೆ.

ಕುಂದಾಪುರ ತಾಲೂಕಿನ ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕಮ್ಮಾರರು ಇತರೆ ಸಮುದಾಯದವರ ಪ್ರಭಾವಕ್ಕೆ ಒಳಗಾಗಿ ಶಿಕ್ಷಣವನ್ನು ಪಡೆಯುವ ಪ್ರಯತ್ನ ಮಾಡಿದ್ದಾರೆ. ಆದರೆ ಗ್ರಾಮೀಣ ಪ್ರದೇಶದ ಕಮ್ಮಾರರು ಪ್ರಾಥಮಿಕ ಹಂತದ ಶಿಕ್ಷಣದಿಂದಲೂ ವಂಚಿತರಾಗಿದ್ದಾರೆ.

೩.೨.೩. ಕಾರ್ಕಳ ತಾಲೂಕಿನ ಶೈಕ್ಷಣಿಕ ವಿವರಗಳು:

ಕಾರ್ಕಳ ತಾಲೂಕಿನ ೨೯ ಕುಟುಂಬಗಳಲ್ಲಿ ಒಟ್ಟು ೧೧೯ ಜನಸಂಖ್ಯೆಯಲ್ಲಿ ೭೧ ಪುರುಷರು, ೪೮ ಮಹಿಳೆಯರಿರುವುದು ಕಂಡು ಬರುತ್ತದೆ. ಈ ತಾಲೂಕಿನಲ್ಲಿಯೂ ೬ ರಿಂದ ೧೬ ವರ್ಷದೊಳಗಿನವರು ಶಿಕ್ಷಣವನ್ನು ಮುಂದುವರೆಸುತ್ತಿರುವುದು ಕಂಡು ಬರುತ್ತದೆ. ೧೬ ರಿಂದ ೪೫ ವರ್ಷದೊಳಗಿನ ವಯಸ್ಸಿನವರು ಎಸ್.ಎಸ್.ಎಲ್.ಸಿ.ಯಿಂದ ಪದವಿಯವರೆಗೆ ಶಿಕ್ಷಣ ಪಡೆದಿರುವುದು ಕಂಡು ಬರುತ್ತದೆ. ಈ ತಾಲೂಕಿನಲ್ಲಿಯೂ ಸಹ ಅನೇಕರು ಪ್ರಾಥಮಿಕ ಶಿಕ್ಷಣದಿಂದ ಮಾಧ್ಯಮಿಕ ಶಿಕ್ಷಣವನ್ನು, ಮಾಧ್ಯಮಿಕ ಶಿಕ್ಷಣದಿಂದ ಎಸ್.ಎಸ್.ಎಲ್.ಸಿ.ಯ ವರೆಗೆ, ಎಸ್.ಎಸ್.ಎಲ್.ಸಿ.ಯಿಂದ ಪಿ.ಯು.ಸಿ ಹಾಗೂ ಪದವಿಯವರೆಗೆ ಶಿಕ್ಷಣ ಪಡೆಯಲು ಸಾಧ್ಯವಾಗದೇ ಇರುವ ಬಗ್ಗೆ ಮಾಹಿತಿ ದೊರೆಯುತ್ತದೆ.

ಈ ತಾಲೂಕಿನ ೭೧ ಪುರುಷರಲ್ಲಿ ೪೩ ಜನರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಪಡೆದವರಾಗಿದ್ದಾರೆ. ಇದರಲ್ಲೂ ೧ನೆಯ ತರಗತಿಯಿಂದ ೫ನೆಯ ತರಗತಿಯ ವರೆಗೆ ಶಿಕ್ಷಣವನ್ನು ಪಡೆದವರ ಸಂಖ್ಯೆ ಅಧಿಕವಾಗಿದೆ. ೧೩ ಜನ ಎಸ್.ಎಸ್.ಎಲ್.ಸಿ, ೩ ಜನ ಪದವಿ, ೮ ಜನ ಪಿ.ಯು.ಸಿ, ತಲಾ ಒಬ್ಬರು ಟಿ.ಸಿ.ಎಚ್ ಹಾಗೂ ಐ.ಟಿ.ಐ ಶಿಕ್ಷಣ ಪಡೆದಿದ್ದಾರೆ.

೪೮ ಮಹಿಳೆಯರಲ್ಲಿ ೨೩ ಮಹಿಳೆಯರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆದಿದ್ದಾರೆ. ಇದರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಎಸ್.ಎಸ್.ಎಲ್.ಸಿ.ಯಲ್ಲಿ ೯, ಪದವಿಯಲ್ಲಿ ಇಬ್ಬರು, ಪಿ.ಯು.ಸಿಯಲ್ಲಿ ೬ ಹಾಗೂ ಟಿ.ಸಿ.ಎಚ್‌ದಲ್ಲಿ ಒಬ್ಬರು ಶಿಕ್ಷಣ ಪಡೆದಿದ್ದಾರೆ.

ಕಾರ್ಕಳ ತಾಲೂಕಿನ ಕಮ್ಮಾರರ ಶೈಕ್ಷಣಿಕ ವಿವರಗಳನ್ನು ಗಮನಿಸಿದಾಗ, ನಗರ ಮತ್ತು ನಗರಕ್ಕೆ ಸಮೀಪದಲ್ಲಿ ವಾಸಿಸುತ್ತಿರುವ ಕಮ್ಮಾರರು ಗ್ರಾಮೀಣ ಪ್ರದೇಶದ ಕಮ್ಮಾರರಿಗಿಂತ ಮುಂದಿದ್ದಾರೆ ಎಂದು ಹೇಳಬಹುದು.

೩.೨.೩. ಉಡುಪಿ ತಾಲೂಕಿನ ಶೈಕ್ಷಣಿಕ ವಿವರಗಳು:

ಉಡುಪಿ ತಾಲೂಕಿನಲ್ಲಿಯ ೧೫ ಕುಟುಂಬಗಳಲ್ಲಿಯ ಒಟ್ಟು ಜನಸಂಖ್ಯೆ ೯೮ ಇದ್ದು, ಇದರಲ್ಲಿ ೫೮ ಪುರುಷರು ೪೦ ಮಹಿಳೆಯರಿರುವುದು ಕಂಡು ಬಂದಿದೆ. ಈ ತಾಲೂಕಿನಲ್ಲಿಯೂ ೬ ರಿಂದ ೧೬ ವರ್ಷದೊಳಗಿನ ಮಕ್ಕಳು ಶಿಕ್ಷಣವನ್ನು ಮುಂದುವರೆಸುತ್ತಿರುವುದು ಕಂಡು ಬರುತ್ತದೆ. ೧೭ ರಿಂದ ೪೫ ವರ್ಷದೊಳಗಿನವರು ಎಸ್.ಎಸ್.ಎಲ್.ಸಿ., ಪಿಯುಸಿ, ಪದವಿಯವರೆಗೆ ಶಿಕ್ಷಣ ಪಡೆದವರು ಕಂಡು ಬಂದಿದ್ದಾರೆ. ಇಲ್ಲಿಯೂ ಪ್ರಾಥಮಿಕ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಗಿ ಕಂಡು ಬರುತ್ತದೆ.

ಈ ತಾಲೂಕಿನ ೫೮ ಪುರುಷರಲ್ಲಿ ೨೯ ಜನರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆದಿರುವವರು ಹಾಗೂ ಪಡೆಯುತ್ತಿರುವವರು ಕಂಡು ಬರುತ್ತಾರೆ. ಇಲ್ಲಿಯೂ ಪ್ರಾಥಮಿಕ

ಶಿಕ್ಷಣ ಪಡೆದವರು ಅಧಿಕ ಸಂಖ್ಯೆಯಲ್ಲಿದ್ದಾರೆ. ೭ ಜನ ಎಸ್.ಎಸ್.ಎಲ್.ಸಿ, ೪ ಜನ ಪಿ.ಯು.ಸಿ, ೩ ಜನ ಪದವಿ, ಇಬ್ಬರು ಟಿ.ಸಿ.ಎಚ್, ಒಬ್ಬರು ಐ.ಟಿ.ಐ ಮತ್ತೊಬ್ಬರು ಡಿಪ್ಲೋಮಾ ಪಡೆದವರು ಕಂಡು ಬಂದಿದ್ದಾರೆ.

೪೦ ಮಹಿಳೆಯರಲ್ಲಿ ೧೯ ಮಹಿಳೆಯರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆದಿದ್ದಾರೆ ಹಾಗೂ ಪಡೆಯುತ್ತಿದ್ದಾರೆ. ಎಸ್.ಎಸ್.ಎಲ್.ಸಿ ಯಲ್ಲಿ ೩, ಪದವಿಯಲ್ಲಿ ಒಬ್ಬರು ಬಿಕಾಮ್, ಇನ್ನಿಬ್ಬರು ಬಿ.ಎ, ಒಬ್ಬರು ಪಿ.ಯು.ಸಿ ಹಾಗೂ ಟಿ.ಸಿ.ಎಚ್‌ನಲ್ಲಿ ಒಬ್ಬರು ಶಿಕ್ಷಣ ಪಡೆದಿದ್ದಾರೆ.

**೩.೨.೪. ಮಂಗಳೂರು ಜಿಲ್ಲೆ ಪುತ್ತೂರು ತಾಲೂಕಿನ ಶೈಕ್ಷಣಿಕ ವಿವರಗಳು:**

ಪುತ್ತೂರು ತಾಲೂಕಿನ ೧೩ ಕುಟುಂಬಗಳಲ್ಲಿಯ ಒಟ್ಟು ಜನಸಂಖ್ಯೆ ೬೦ ಕಂಡು ಬಂದಿದ್ದು, ಇದರಲ್ಲಿ ೩೫ ಪುರುಷರು ೨೫ ಮಹಿಳೆಯರಿದ್ದಾರೆ. ಈ ತಾಲೂಕಿನ ೬ ರಿಂದ ೧೬ ವರ್ಷದೊಳಗಿನ ಮಕ್ಕಳು ಶಿಕ್ಷಣವನ್ನು ಮುಂದುವರೆಸಿಕೊಂಡು ಹೋಗುತ್ತಿರುವುದು ಕಂಡುಬರುತ್ತದೆ. ೧೭ ರಿಂದ ೬೦ ವರ್ಷದೊಳಗಿನವರಲ್ಲಿ ಎಸ್.ಎಸ್.ಎಲ್.ಸಿ ಯಿಂದ ಪದವಿ ವರೆಗೆ ಶಿಕ್ಷಣ ಪಡೆದವರು ಕಂಡು ಬರುತ್ತಾರೆ. ಇಲ್ಲಿಯ ೬೦ ಜನಸಂಖ್ಯೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರ ಸಂಖ್ಯೆ ಅಧಿಕವಾಗಿದೆ. ಈ ತಾಲೂಕಿನಲ್ಲಿಯ ಕೆಮ್ಮಾಯಿ ಗ್ರಾಮದ ಶ್ರೀ ಪ್ರಕಾಶ ಎಂಬುವವರೊಬ್ಬರು ತಾಂತ್ರಿಕ ಶಿಕ್ಷಣದಲ್ಲಿ ಪದವಿ ಪಡೆದುಕೊಂಡಿರುವುದು ಗೋಚರಿಸುತ್ತದೆ.

೨೫ ಮಹಿಳೆಯರಲ್ಲಿ ಐವರು ಪ್ರಾಥಮಿಕ, ಇಬ್ಬರು ಎಸ್.ಎಸ್.ಎಲ್.ಸಿ, ಇಬ್ಬರು ಪಿ.ಯು.ಸಿ ಹಾಗೂ ಪದವಿಯಲ್ಲಿ ಒಬ್ಬರು ಶಿಕ್ಷಣ ಪಡೆದಿದ್ದಾರೆ.

**೩.೨.೫. ಸುಳ್ಯ ತಾಲೂಕಿನ ಶೈಕ್ಷಣಿಕ ವಿವರಗಳು:**

ಸುಳ್ಯ ತಾಲೂಕಿನ ೯ ಕುಟುಂಬಗಳಲ್ಲಿ ಒಟ್ಟು ೩೬ ಜನಸಂಖ್ಯೆ ಕಂಡು ಬಂದಿದ್ದು, ಇದರಲ್ಲಿ ೨೧ ಪುರುಷರು ೧೫ ಮಹಿಳೆಯರಿದ್ದಾರೆ. ಈ ತಾಲೂಕಿನಲ್ಲಿ ೬ರಿಂದ ೧೮ ವರ್ಷದ ವಯಸ್ಸಿನಲ್ಲಿಯ ಕೆಲವರು ಶಿಕ್ಷಣವನ್ನು ಮುಂದುವರೆಸಿದ್ದಾರೆ. ೧೯ ರಿಂದ ೬೦ ವರ್ಷದ ಒಳಗಿನವರು ಎಸ್.ಎಸ್.ಎಲ್,ಸಿ ಯಿಂದ ಪಿ.ಯು.ಸಿವರೆಗೆ ಶಿಕ್ಷಣ ಪಡೆದಿರುವುದು ಕಂಡುಬರುತ್ತದೆ. ಇಲ್ಲಯೂ ಸಹ ಪ್ರಾಥಮಿಕ ಹಂತದ ಶಿಕ್ಷಣವನ್ನು ಪಡೆದವರ ಸಂಖ್ಯೆ ಹೆಚ್ಚಾಗಿದೆ.

ಈ ತಾಲೂಕಿನ ೨೧ ಪುರುಷರಲ್ಲಿ ೧೩ ಜನರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಪಡೆದಿದ್ದಾರೆ ಹಾಗೂ ಪಡೆಯುತ್ತಿದ್ದಾರೆ. ಇಬ್ಬರು ಎಸ್.ಎಸ್.ಎಲ್.ಸಿ ಹಾಗೂ ಒಬ್ಬರು ಪಿ.ಯು.ಸಿವರೆಗೆ ಶಿಕ್ಷಣ ಪಡೆದಿರುವುದು ಕಂಡು ಬರುತ್ತದೆ.

೧೫ ಜನ ಮಹಿಳೆಯರಲ್ಲಿ ೯ ಮಹಿಳೆಯರು ಈ ಏಳು ಮಹಿಳೆಯರು ಪ್ರಾಥಮಿಕ ಶಿಕ್ಷಣ ಪಡೆದಿದ್ದಾರೆ. ತಲಾ ಒಬ್ಬರು ಎಸ್.ಎಸ್.ಎಲ್.ಸಿ ಹಾಗೂ ಪಿ.ಯು.ಸಿಯ ವರೆಗೆ ಶಿಕ್ಷಣ ಪಡೆದಿರುವುದು ಕಂಡು ಬರುತ್ತದೆ.

೩.೨.೬. ಬೆಳ್ತಂಗಡಿ ತಾಲೂಕಿನ ಶೈಕ್ಷಣಿಕ ವಿವರಗಳು:

ಬೆಳ್ತಂಗಡಿ ತಾಲೂಕಿನ ೫ ಕುಟುಂಬಗಳಲ್ಲಿಯ ಒಟ್ಟು ಜನಸಂಖ್ಯೆ ೨೭ ಇದ್ದು, ಇದರಲ್ಲಿ ೧೬ ಪುರುಷರು ೧೧ ಮಹಿಳೆಯರಿರುವುದು ಕಂಡು ಬಂದಿದೆ. ೭ ರಿಂದ ೧೮ ವಯಸ್ಸಿನೊಳಗಿನವರು ಶಿಕ್ಷಣವನ್ನು ಮುಂದುವರೆಸಿದ್ದು ಕಂಡು ಬರುತ್ತದೆ. ೧೮ ರಿಂದ ೨೫ ವರ್ಷದೊಳಗಿನವರಲ್ಲಿ ಕೆಲವರು ಶಿಕ್ಷಣವನ್ನು ಮುಂದುವರೆಸಿದ್ದು ಕಂಡು ಬರುತ್ತದೆ. ೧೮ ರಿಂದ ೪೫ ವರ್ಷದೊಳಗಿನವರು ಎಸ್.ಎಸ್.ಎಲ್.ಸಿ ಹಾಗೂ ಪಿ.ಯು.ಸಿಯ ವರೆಗೆ ಶಿಕ್ಷಣ ಪಡೆದಿರುವುದು ಕಂಡು ಬರುತ್ತದೆ.

ಈ ತಾಲೂಕಿನ ೧೬ ಪುರುಷರಲ್ಲಿ ೯ ಜನ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆದಿದ್ದಾರೆ. ಇವರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರ ಸಂಖ್ಯೆ ಅಧಿಕವಾಗಿದೆ. ಈ ಪುರುಷರಲ್ಲಿ ಇಬ್ಬರು ಎಸ್.ಎಸ್.ಎಲ್.ಸಿ ಹಾಗೂ ಒಬ್ಬರು ಪಿ.ಯು.ಸಿ ಶಿಕ್ಷಣ ಪಡೆದಿದ್ದಾರೆ.

೧೧ ಮಹಿಳೆಯರಲ್ಲಿ ಐವರು ಪ್ರಾಥಮಿಕ ಮತ್ತು ಮೂವರು ಎಸ್.ಎಸ್.ಎಲ್.ಸಿ ವರೆಗೆ ಶಿಕ್ಷಣ ಪಡೆದಿದ್ದಾರೆ.

೩.೨.೭. ಮಂಗಳೂರು ತಾಲೂಕಿನ ಶೈಕ್ಷಣಿಕ ವಿವರಗಳು:

ಮಂಗಳೂರು ತಾಲೂಕಿನ ೭ ಕುಟುಂಬಗಳಲ್ಲಿಯ ಒಟ್ಟು ಜನಸಂಖ್ಯೆ ೨೩ ಇದ್ದು, ಇದರಲ್ಲಿ ೧೧ ಪುರುಷರು ೧೨ ಮಹಿಳೆಯರಿರುವುದು ಕಂಡು ಬರುತ್ತಾರೆ.

೧೧ ಪುರುಷರಲ್ಲಿ ಮೂವರು ಪ್ರಾಥಮಿಕ, ಒಬ್ಬರು ಎಸ್.ಎಸ್.ಎಲ್.ಸಿ, ಒಬ್ಬರು ಬಿ.ಕಾಂ.ಪದವಿ ವರೆಗೆ ಶಿಕ್ಷಣ ಪಡೆದಿದ್ದಾರೆ.

೧೨ ಮಹಿಳೆಯರಲ್ಲಿ ನಾಲ್ಕು ಮಹಿಳೆಯರು ಪ್ರಾಥಮಿಕ ತಲಾ ಒಬ್ಬರು ಪಿಯುಸಿ ಹಾಗೂ ಪದವಿ ಪಡೆದು ಕೊಂಡಿದ್ದಾರೆ.

ಕಮ್ಮಾರರ ಸಮುದಾಯದ ಒಟ್ಟು ಶೈಕ್ಷಣಿಕ ಸ್ಥಿತಿ ಗತಿಗಳನ್ನು ಗಮನಿಸಿದಾಗ ಇವರು ಶಿಕ್ಷಣದಲ್ಲಿ ಎಷ್ಟು ಹಿಂದೆ ಉಳಿದಿದ್ದಾರೆ ಎಂಬುದು ಕಂಡು ಬರುತ್ತದೆ. ೨೦ ರಿಂದ ೬೦ ವರ್ಷದೊಳಗಿನ ಪುರುಷರು ಹಾಗೂ ಮಹಿಳೆಯರು ಪ್ರಾಥಮಿಕ ಹಂತದ ಶಿಕ್ಷಣವನ್ನು ಪಾತ್ರ ಪಡೆದಿರುವುದು ಕಂಡು ಬರುತ್ತದೆ. ಕಮ್ಮಾರರು ಇಂದು ಆಧುನಿಕ ಜಗತ್ತಿನಲ್ಲಿ ಅನಕ್ಷರತೆ ಮತ್ತು ಆರ್ಥಿಕತೆ ಎರಡರಿಂದಲೂ ಬಳಲುವಂತಾಗಿದೆ. ಅನೇಕ ಕಮ್ಮಾರರು ತಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣ ಕೊಡಿಸಬೇಕು ಎಂಬ ಹಂಬಲವಿಟ್ಟು ಕೊಂಡಿದ್ದಾರೆ. ಆದರೆ ಅತ್ಯಂತ ಬಡತನದಲ್ಲಿ ಬಳಲುತ್ತಿರುವುದರಿಂದ ಅದು ಸಾಧ್ಯವಾಗುತ್ತಿಲ್ಲ ಎಂಬುದು ತಿಳಿದು ಬರುತ್ತದೆ.

ನಾನು ಸಮೀಕ್ಷೆ ಮಾಡುದ ಕಮ್ಮಾರರ ಶೈಕ್ಷಣಿಕ ವಿವರಗಳನ್ನು ಈ ಕೆಳಗಿನ ಕೋಷ್ಟಕಗಳಲ್ಲಿ ನೀಡಲಾಗಿದೆ.

ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಒಟ್ಟು ಜನಸಂಖ್ಯೆ: ೧೯೭, ಗಂಡಸರು ೧೦೩, ಹೆಂಗಸರು ೯೪

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | ೦೩ | ೦೭ | - | - | - | - | - | - | - | - |
| ೭-೧೮ | ೧೫ | ೧೨ | ೧೦ | ೦೩ | ೦೨ | ೦೧ | ೦೩ | ೦೧ | ೦೧ | ೦೧ |
| ೧೯-೪೫ | ೩೦ | ೨೦ | ೧೫ | ೦೯ | ೦೬ | ೦೨ | ೦೨ | ೩ | ೧ | |
| ೪೬-೬೦ | ೧೧ | ೦೨ | - | - | - | - | - | - | - | - |

ಉಡುಪಿ ಜಿಲ್ಲೆಯ ಕುಂದಾಪೂರ ತಾಲೂಕಿನ ಒಟ್ಟು ಜನಸಂಖ್ಯೆ: ೨೯೨, ಗಂಡಸರು ೧೪೮, ಹೆಂಗಸರು ೧೪೪

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | ೦೧ | ೦೨ | - | - | - | - | - | - | - | - |
| ೭-೧೮ | ೧೭ | ೧೫ | ೦೯ | ೦೧ | ೦೩ | ೦೩ | ೦೩ | ೦೧ | ೦೧ | - |
| ೧೯-೪೫ | ೪೪ | ೨೬ | ೨೨ | ೧೩ | ೦೮ | ೦೭ | ೦೪ | ೦೧ | ೦೩ | ೦೧. |
| ೪೬-೬೦ | ೩೫ | ೧೩ | - | - | - | - | - | - | - | - |

ಉಡುಪಿ ಜಿಲ್ಲೆಯ ಕಾರ್ಕಳ ತಾಲೂಕಿನ ಒಟ್ಟು ಜನಸಂಖ್ಯೆ: ೧೧೯, ಗಂಡಸರು ೭೧, ಹೆಂಗಸರು ೪೮

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | ೦೪ | ೦೩ | - | - | - | - | - | - | - | - |
| ೭-೧೮ | ೧೦ | ೦೭ | ೦೫ | ೦೪ | ೦೨ | ೦೩ | ೦೩ | ೦೧ | - | - |
| ೧೯-೪೫ | ೧೭ | ೦೭ | ೦೮ | ೦೫ | ೦೬ | ೦೩ | ೦೩ | ೦೨ | ೦೨. | ೦೧ |
| ೪೬-೬೦ | ೧೨ | ೦೬ | - | - | - | - | - | - | - | - |

ಉಡುಪಿ ಜಿಲ್ಲೆಯ ಉಡುಪಿ ತಾಲೂಕಿನ ಒಟ್ಟು ಜನಸಂಖ್ಯೆ: ೯೮, ಗಂಡಸರು ೫೮, ಹೆಂಗಸರು ೪೦

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | ೦೩ | ೦೨ | - | - | - | - | - | - | - | - |
| ೭-೧೮ | ೦೬ | ೦೭ | ೦೪ | ೦೨ | ೦೨ | ೦೧ | ೦೩ | - | - | - |
| ೧೯-೪೫ | ೧೩ | ೦೬ | ೦೨ | ೦೧ | ೦೨ | - | ೦೩ | ೦೨ | ೦೪. | ೦೧. |
| ೪೬-೬೦ | ೦೭ | ೦೪ | ೦೧ | - | - | - | - | - | - | - |

ಮಂಗಳೂರು ಜಿಲ್ಲೆಯ ಪುತ್ತೂರು ತಾಲೂಕಿನ ಒಟ್ಟು ಜನಸಂಖ್ಯೆ: ೬೦, ಗಂಡಸರು ೩೫, ಹೆಂಗಸರು ೨೫

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | – | – | – | – | – | – | – | – | – | – |
| ೬-೧೮ | ೦೪ | – | – | ೦೩ | ೦೨ | – | – | – | – | – |
| ೧೯-೪೫ | ೦೮ | ೦೨ | ೦೭ | ೦೨ | – | ೦೨ | ೦೨ | ೦೧ | ೦೧.ಬಿ.ಇ | – |
| ೪೬-೬೦ | ೦೫ | ೦೩ | – | – | ೦೨ | – | – | – | – | – |

ಮಂಗಳೂರು ಜಿಲ್ಲೆಯ ಸುಳ್ಯ ತಾಲೂಕಿನ ಒಟ್ಟು ಜನಸಂಖ್ಯೆ: ೩೬, ಗಂಡಸರು ೨೧, ಹೆಂಗಸರು ೧೫

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | ೦೨ | – | – | – | – | – | – | – | – | – |
| ೬-೧೮ | ೦೩ | ೦೨ | – | – | – | – | – | – | – | – |
| ೧೯-೪೫ | ೦೬ | ೦೫ | ೦೨ | ೦೧ | ೦೧ | ೦೧ | – | – | – | – |
| ೪೬-೬೦ | ೦೨ | ೦೨ | – | – | – | – | – | – | – | – |

ಮಂಗಳೂರು ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಒಟ್ಟು ಜನಸಂಖ್ಯೆ: ೨೭, ಗಂಡಸರು ೧೬, ಹೆಂಗಸರು ೧೧

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | – | – | – | – | – | – | – | – | – | – |
| ೬-೧೮ | – | – | ೦೨ | ೦೧ | – | – | – | – | – | – |
| ೧೯-೪೫ | ೦೫ | ೦೩ | ೦೨ | ೦೨ | ೦೧ | – | – | – | – | – |
| ೪೬-೬೦ | ೦೪ | ೦೨ | – | – | – | – | – | – | – | – |

ಮಂಗಳೂರು ಜಿಲ್ಲೆಯ ಮಂಗಳೂರು ತಾಲೂಕಿನ ಒಟ್ಟು ಜನಸಂಖ್ಯೆ: ೨೩, ಗಂಡಸರು ೧೧, ಹೆಂಗಸರು ೧೨

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | – | – | – | – | – | – | – | – | – | – |
| ೬-೧೮ | – | – | – | – | – | – | – | – | – | – |
| ೧೯-೪೫ | ೦೧ | ೦೪ | ೦೧ | – | – | ೦೧ | – | ೦೧ | – | – |
| ೪೬-೬೦ | ೦೨ | – | – | – | – | – | ೦೧ | – | – | – |

ಮಂಗಳೂರು, ಉಡುಪಿ ಜಿಲ್ಲೆ ಹಾಗೂ ಕೊಳ್ಳೆಗಾಲ ತಾಲೂಕಿನ ಒಟ್ಟು ಜನಸಂಖ್ಯೆ: ೬೫೫ ಗಂಡಸರು ೩೬೦ ಹೆಂಗಸರು ೨೯೫

| ವಯೋಮಾನ | ಪ್ರಾಥಮಿಕ ಮಾಧ್ಯಮಿಕ | | ಎಸ್.ಎಸ್.ಎಲ್.ಸಿ | | ಪಿ.ಯು.ಸಿ. | | ಪದವಿ | | ಇತರೆ | |
|---|---|---|---|---|---|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೦-೬ | ೧೩ | ೧೪ | – | – | – | – | – | – | – | – |
| ೭-೧೮ | ೫೫ | ೪೩ | ೩೩ | ೧೩ | ೯ | ೮ | ೦೩ | ೦೧ | ೦೪ | ೦೧ |
| ೧೯-೪೫ | ೧೨೪ | ೭೩ | ೫೯ | ೩೩ | ೩೭ | ೧೬ | ೧೪ | ೦೭ | ೧೨ | ೦೫ |
| ೪೬-೬೦ | ೭೮ | ೩೨ | ೦೪ | – | ೦೨ | – | ೦೧ | – | – | – |

### ೫.೩. ರಾಜಕೀಯ:

ಕಮ್ಮಾರರ ಸಮುದಾಯದಲ್ಲಿ ಸಂಘಟನೆಯ ಕೊರತೆ ಇರುವುದು ಎದ್ದು ಕಾಣುತ್ತಿದೆ. ಇತ್ತೀತ್ತಲಾಗಿ ವಿಶ್ವಕರ್ಮರ ಐದು ವೃತ್ತಿಯವರು ಸೇರಿಕೊಂಡು ಸಂಘಟನೆಗಳನ್ನು ಹುಟ್ಟು ಹಾಕಿದ್ದಾರೆ ಆದರೂ ಇವರಲ್ಲಿ ವೃತ್ತಿ ಬೇಧಗಳು ಇರುವುದರಿಂದ ಅವು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಎಂದು ಹೇಳಬಹುದು. ಸಾಮಾನ್ಯವಾಗಿ ಅನಕ್ಷರಸ್ತರಾದ ಇವರು ರಾಜಕೀಯದಿಂದ ಬಹಳ ದೂರ ಉಳಿದವರು. ಊರಿಗೆ ಒಂದು ಅಥವಾ ಎರಡು ಕುಟುಂಬಗಳನ್ನು ಹೊಂದಿರುವ ಇವರನ್ನು ರಾಜಕೀಯ ಪಕ್ಷಗಳು ನಿರ್ಣಾಯಕ ಮತದಾರರೆಂದು ಎಂದೂ ಪರಿಗಣಿಸಿಲ್ಲ. ಅತ್ಯಂತ ಕಡಿಮೆ ಜನಸಂಖ್ಯೆ ಹೊಂದಿರುವ ಇವರನ್ನು ಭಾರತ ಸರ್ಕಾರ ಪರಿಶಿಷ್ಟ ಪಂಗಡದಲ್ಲಿ ಸೇರಿಸಿದ್ದರೂ ಅವರಿಗೆ ಪ್ರಮಾಣ ಪತ್ರಗಳು ದೊರೆಯುತ್ತಿಲ್ಲ. ಆಧುನಿಕತೆ, ಜಾಗತೀಕರಣ, ವೈಜ್ಞಾನೀಕರಣದಿಂದ ಕಮ್ಮಾರರ ವೃತ್ತಿಗಳೆಲ್ಲವೂ ದಿವಾಳಿಯಾಗುತ್ತ ನಡೆದಿವೆ. ಆರ್ಥಿಕವಾಗಿ ದುರ್ಬಲರಾಗಿರುವ ಇವರ ಕೈಗಳಿಗೆ ದುಡಿಯಲಿಕ್ಕೆ ಕೆಲಸಗಳೇ ಇಲ್ಲದಂತಾಗಿದೆ. ಆಧುನಿಕ ಜಗತ್ತಿನಲ್ಲಿ ಬದುಕುವುದೇ ದುಸ್ತರವಾಗಿದ್ದಾಗ ನಮಗೇಕೆ ರಾಜಕೀಯ ಎಂದು ಪ್ರಶ್ನೆ ಮಾಡುವವರೇ ಹೆಚ್ಚಾಗಿದ್ದಾರೆ.

ಪ್ರಾರಂಭದಿಂದಲೂ ಕೃಷಿಕ ಕುಟುಂಬಗಳ ಜೊತೆಗೆ ಒಡನಾಟ ಇಟ್ಟುಕೊಂಡಿರುವ ಇವರು ರಾಜಕೀಯ ಪ್ರಾತಿನಿಧ್ಯತೆಯನ್ನು ಕೊಡುವಂತಹ ಯಾವ ಗುರುತರವಾದ ಕಾರ್ಯಗಳನ್ನು ಇವರು ನಿರ್ವಹಿಸಲಿಲ್ಲ ಆದರೂ ಕರ್ನಾಟಕದ ಶ್ರೇಷ್ಠ ಜಾನಪದ ತಜ್ಞ ನಾಟಕಕಾರ, ಕವಿ ಎಂದು ಗುರುತಿಸಿ ಡಾ. ಚಂದ್ರಶೇಖರ ಕಂಬಾರ ಇವರನ್ನು ವಿಧಾನ ಸಭೆಯ ಸದಸ್ಯರನ್ನಾಗಿ ನೇಮಕ ಮಾಡಿದ್ದನ್ನು ಬಿಟ್ಟರೆ, ಇಂದು ಯಾವ ಕಮ್ಮಾರರು ರಾಜಕೀಯ ಪ್ರವೇಶ ಮಾಡುವಂತಹ ಸಾಹಸದ ಕೆಲಸಕ್ಕೆ ಕೈ ಹಾಕಿಲ್ಲ ಎಂದು ಕಮ್ಮಾರರ ಅನೇಕ ವಕ್ತೃಗಳು ಹೇಳುತ್ತಾರೆ. ಗ್ರಾಮ ಪಂಚಾಯತಿ ಮಟ್ಟದಲ್ಲಿ ಒಬ್ಬಿಬ್ಬರು ಈ ಹಿಂದೆ ಸದಸ್ಯರಾಗಿದ್ದನ್ನು ಬಿಟ್ಟರೆ ಉಳಿದಂತೆ ನಮಗೆ ರಾಜಕೀಯ ಬೇಡ. ದುಡಿಯಲು ಸದಾ ಹವಣಿಸುತ್ತಿರುವ ಈ ಕೈಗಳಿಗೆ ಸೂಕ್ತವಾದ ಕೆಲಸ ಕೊಡಿ ಎಂದು ಕೇಳಿಕೊಳ್ಳುವವರೇ ಈ ಕಮ್ಮಾರರಲ್ಲಿ ಕಂಡು ಬರುತ್ತಾರೆ.

ಭಾರತದಂತಹ ದೇಶದಲ್ಲಿ ಸಬಲರಿಗೆ ಮಾತ್ರ ಅಧಿಕಾರ, ಅಂತಸ್ತು, ಸ್ಥಾನಮಾನಗಳು, ಸಂಪತ್ತು ಲಭ್ಯವಾಗುತ್ತಿರುವುದು ಕಂಡು ಬರುತ್ತದೆ. ಕೆಳವರ್ಗದವರು ಅಲೆಮಾರಿಗಳಾಗುತ್ತಿರುವ ಕುಶಲ ಕರ್ಮಿಗಳು, ಕುಲ ಕಸುಬುದಾರರ ಆರ್ಥಿಕ ಸ್ಥಿತಿಯು ತುಂಬಾ ಹೀನಾಯ ಸ್ಥಿತಿಯಲ್ಲಿರುವುದರಿಂದ ಇವರು ರಾಜಕೀಯದಲ್ಲಿ ಭಾಗವಹಿಸುವುದು ಕನಸಿನ ಮಾತಾಗಿದೆ. ದಿನ ನಿತ್ಯದ ಸಂಸಾರ ನೌಕೆಯನ್ನು ಸಾಗಿಸುವುದಕ್ಕಾಗಿ ಹೆಣಗಾಡುತ್ತಿರುವ ಇವರು ರಾಜಕೀಯದ ಬಗ್ಗೆ ಎಂದೂ ಯೊಚಿಸಿದವರಲ್ಲ.

**೫.೪. ಸರಕಾರದ ಸೌಲಭ್ಯಗಳು ಮತ್ತು ಕಮ್ಮಾರರು:**

ಭಾರತ ಸರ್ಕಾರ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ, ಉಡುಪಿ ಹಾಗೂ ಮಂಗಳೂರು ಜಿಲ್ಲೆಯಲ್ಲಿ ವಾಸಿಸುತ್ತಿರುವ ಕಮ್ಮಾರರನ್ನು ೧೯೫೦ ರಲ್ಲಿಯೇ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿತು. ಆದರೆ ಇದರ ಉಪಯೋಗ ಪಡೆದವರು ಬೆರಳೆಣಿಕೆಯ ಜನರು ಮಾತ್ರ. ಕಮ್ಮಾರರು ವಿಶ್ವಕರ್ಮರಲ್ಲಿಯ ಒಂದು ಪಂಗಡ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಇವರು ಪರಿಶಿಷ್ಟ ಪಂಗಡದ ಪ್ರಮಾಣ ಪತ್ರ ಪಡೆದು, ಸರಕಾರದ ಸೌಲಭ್ಯಗಳನ್ನು ಪಡೆದುಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದರೆ, ವಿಶ್ವಕರ್ಮರಲ್ಲಿಯ ಇತರೆ ಪಂಗಡದವರು ಇವರನ್ನು ತುಚ್ಛವಾಗಿ ಕಾಣಹತ್ತಿದರು ಮತ್ತು ಸಾಮಾಜಿಕವಾಗಿ ಬಹಿಷ್ಕಾರ ಹಾಕುವ ಬೆದರಿಕೆಗಳನ್ನು ಹೇರತೊಡಗಿದರು. ಇದರ ಜೊತೆಗೆ ಕರ್ನಾಟಕ ಸರಕಾರದ ರೆವಿನ್ಯೂ ಅಧಿಕಾರಿಗಳು ಪರಿಶಿಷ್ಟ ಪಂಗಡದ ಪ್ರಮಾಣ ಪತ್ರವನ್ನು ಕೇಳಲು ಹೋದರೆ ನೀವು ಯಾವ ರೀತಿಯ ಕಮ್ಮಾರರು, ವಿಶ್ವಕರ್ಮ ಕಮ್ಮಾರರಾದರೆ ನಿಮಗೆ ಈ ಸೌಲಭ್ಯ ಸಿಗುವುದಿಲ್ಲ ಎಂದು ಪ್ರಮಾಣ ಪತ್ರ ನೀಡುವಲ್ಲಿ ಇಲ್ಲಸಲ್ಲದ ನೆಪಗಳನ್ನು ಹೇಳಿ ಪರಿಶಿಷ್ಟ ಪಂಗಡದ ಪ್ರಮಾಣ ಪತ್ರಗಳನ್ನು ಕೊಡುತ್ತಿಲ್ಲ. "ದೇವರು ವರ ಕೊಟ್ಟರೂ ಪೂಜಾರಿ ವರ ಕೊಡುತ್ತಿಲ್ಲ" ಎಂಬ ಗಾದೆ ಮಾತಿನಂತೆ ಸರಕಾರ ಕಮ್ಮಾರರನ್ನು ಪರಿಶಿಷ್ಟ ಪಂಗಡದಲ್ಲಿ ಸೇರಿಸಿದ್ದರೂ ಅಧಿಕಾರಿಗಳು ಮಾತ್ರ ಪ್ರಮಾಣ ಪತ್ರ ನೀಡದೇ ಇರುವುದು ವಿಪರ್ಯಾಸವೇ ಸರಿ ಎಂದು ಹೇಳಬೇಕಾಗುತ್ತದೆ. ಈ ಸಮಸ್ಯೆಯನ್ನಿಟ್ಟುಕೊಂಡು ಕೆಲ ಕಮ್ಮಾರರು ಅದರಲ್ಲೂ ಕೊಳ್ಳೆಗಾಲ ಪರಿಸರದ ಕಮ್ಮಾರರು ಹತ್ತಾರು ಸಲ ಜಿಲ್ಲಾಧಿಕಾರಿಗಳಿಗೆ ಮನವಿಯನ್ನು ಸಲ್ಲಿಸಿದರೂ ಪ್ರಯೋಜನವಾಗಿಲ್ಲ ಎಂದು ಹಲಗೂರಿನ ಮಂಟೇಲಿಂಗಾಚಾರ್ಯರು ಹೇಳುತ್ತಾರೆ.

ಉಡುಪಿ ಮತ್ತು ಮಂಗಳೂರು ಪರಿಸರದ ವಿಶ್ವಕರ್ಮರ ಇತರೆ ಪಂಗಡದವರು ವೈದಿಕ ಧರ್ಮದ ಪ್ರಭಾವಕ್ಕೆ ಒಳಗಾಗುತ್ತಿರುವುದರಿಂದ ಮತ್ತು ಕಮ್ಮಾರರನ್ನು ವೈದಿಕ ಧರ್ಮದ ಆಚರಣೆ ಸಂಪ್ರದಾಯಗಳತ್ತ ಸೆಳೆಯುತ್ತಿರುವುದರಿಂದ ಕಮ್ಮಾರರು ತಮ್ಮ ಸಾಮಾಜಿಕ ಬದುಕಿಗೆ ಅಪವಾದ ಬರಬಾರದು ಎಂಬ ಕಾರಣಗಳಿಂದ ಪರಿಶಿಷ್ಟ ಪಂಗಡದ ಪ್ರಮಾಣ ಪತ್ರವನ್ನು ಅದರ ಸೌಲಭ್ಯಗಳನ್ನು ಪಡೆಯಲಿಕ್ಕೆ ಹಿಂದೇಟು ಹಾಕುತ್ತಿರುವುದು ಕಂಡು ಬರುತ್ತದೆ.

"ಕರ್ನಾಟಕ ಸರಕಾರವು ಬುಡಕಟ್ಟುಗಳ ಸರ್ವತೋಮುಖ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆಯನ್ನು ೧೯೭೬-೭೭ ರಿಂದ ಪ್ರಾರಂಭಿಸಿತು. ರಾಜ್ಯದಲ್ಲಿ ಬುಡಕಟ್ಟು ಜನರು ವಾಸಿಸುತ್ತಿರುವ ಪ್ರದೇಶಗಳಾದ ಚಿಕ್ಕಮಗಳೂರು ಜಿಲ್ಲೆಯ ಮೂಡಗೆರೆ, ಕೊಡಗು ಜಿಲ್ಲೆಯ ಪೊನ್ನಂಪೇಟೆ, ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ದಕ್ಷಿಣ ಕೊಡಗು ಜಿಲ್ಲೆಯ ಪುತ್ತೂರು ಮತ್ತು ಹಿಂದೆ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ್ದ ಉಡುಪಿಗಳಲ್ಲಿ ಸಮಗ್ರ ಬುಡಕಟ್ಟು ಅಭಿವೃದ್ಧಿ ಯೋಜನೆ ಕೇಂದ್ರಗಳು ಆರಂಭವಾದವು. ಆದರೆ ಈ ಜಿಲ್ಲೆಗಳಲ್ಲಿ ರಾಜ್ಯದ ಒಟ್ಟು ಗಿರಿಜನರ ಜನಸಂಖ್ಯೆಯ ಶೇ ೧೪ ರಷ್ಟು ಬುಡಕಟ್ಟು ಜನರು ಮಾತ್ರ ಇದ್ದು, ಉಳಿದ ಶೇ. ೮೬ ರಷ್ಟು ಬುಡಕಟ್ಟು ಜನರು ಈ ಜಿಲ್ಲೆಗಳ ಹೊರಗೆ ಇದ್ದುದರಿಂದ ಈ ಯೋಜನೆಯ ಉಪಯೋಗವನ್ನು ಎಲ್ಲ ಬುಡಕಟ್ಟಿನವರಿಗೆ ದೊರೆಯುವಂತೆ ಮಾಡಲು ಅದನ್ನು ೧೯೯೬ ರಿಂದ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಲಾಯಿತು."[೪] ಈ ಸೌಲಭ್ಯವನ್ನು ಉಡುಪಿ ಹಾಗೂ ಮಂಗಳೂರು ಜಿಲ್ಲೆಯ ಕೊರಗರು, ಮಲೆಕುಡಿಯರು, ಕುಡಿಯರು ಎಲ್ಲರೂ ಪಡೆದುಕೊಂಡರು. ಆದರೆ ಈ ಪ್ರದೇಶದ ಕಮ್ಮಾರರು ಮಾತ್ರ ಅದರ ಉಪಯೋಗ ಪಡೆಯುವ ಗೋಜಿಗೆ ಹೋಗಲಿಲ್ಲ ಎಂಬುದು ತಿಳಿದುಬರುತ್ತದೆ.

ವಿಶ್ವಕರ್ಮರ ಐದು ವೃತ್ತಿಯವರನ್ನು ಕರ್ನಾಟಕ ಸರಕಾರ ಹಿಂದುಳಿದ ವರ್ಗಗಳ ವರ್ಗ ೨.ಎ ದಲ್ಲಿ ಗುರುತಿಸಿದೆ. ಉಡುಪಿ ಮಂಗಳೂರು ಹಾಗೂ ಕೊಳ್ಳೆಗಾಲದ ಕಮ್ಮಾರರು ೨ ಎ ದ ಸೌಲಭ್ಯಗಳನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಕರ್ನಾಟಕ ಸರಕಾರ ಉದ್ಯೋಗ ಮತ್ತು ತರಬೇತಿ ಇಲಾಖೆಯ ವತಿಯಿಂದ ಬುಡಕಟ್ಟಿನವರಿಗೆ ಬಡಿಗಿತನ, ಟೈಲರಿಂಗ ಮುಂತಾದ ಇತರೆ ವೃತ್ತಿಗಳಲ್ಲಿ ತರಬೇತಿಯನ್ನು ನೀಡುತ್ತಿದೆ. ಈ ತರಬೇತಿ ಅವಧಿಯಲ್ಲಿ ಪ್ರತಿ ಅಭ್ಯರ್ಥಿಗೆ ತಿಂಗಳಿಗೆ ೫೦೦ ರೂ ಗಳಂತೆ ಒಂದು ವರ್ಷದ ವರೆಗೆ ಶಿಷ್ಯವೇತನವನ್ನು ನೀಡುವುದರ ಜೊತೆಗೆ ೧೦೦ ರೂಗಳ ಪ್ರೋತ್ಸಾಹ ಹಣವನ್ನು ಅಭ್ಯರ್ಥಿಗೆ ನೀಡುತ್ತದೆ. ತರಬೇತಿಯನ್ನು ಯಶಸ್ವಿಯಾಗಿ ಪೂರೈಸಿದವರಿಗೆ ಟೂಲ್ ಕಿಟ್, ಹೊಲಿಗೆಯಂತ್ರ ಹಾಗೂ ಕಚ್ಚಾವಸ್ತುಗಳನ್ನು ಉಚಿತವಾಗಿ ನೀಡುತ್ತದೆ. ಇಂತಹ ಪ್ರಯೋಜನವನ್ನು ಈ ಪ್ರದೇಶದ ಕಮ್ಮಾರರು ಪಡೆಯದೇ ಇರುವುದು ಕಂಡು ಬರುತ್ತದೆ.

ಸರ್ಕಾರದ ಆಶ್ರಯ ಮನೆಯೋಜನೆ, ಭಾಗ್ಯ ಜ್ಯೋತಿ ವಿದ್ಯುತ್ ಯೋಜನೆ ಮುಂತಾದ ಯಾವ ಯೋಜನೆಗಳೂ ಕಮ್ಮಾರರಿಗೆ ದೊರೆಯದೇ ಇರುವುದು ಮತ್ತು ಅವುಗಳನ್ನು ಪಡೆಯಲು ಮುಂದಾಗದೇ ಇರುವುದು ಕಂಡು ಬರುತ್ತದೆ.

ಕೊಳ್ಳೆಗಾಲದ ಕಮ್ಮಾರರು ಬುಡಕಟ್ಟು ಸಮುದಾಯಗಳಿಗೆ ಸಿಗುವ ಸೌಲಭ್ಯಗಳೆಲ್ಲ ನಮಗೂ ದೊರೆಯಬೇಕು ಎಂದು ಅನೇಕ ಅಧಿಕಾರಿಗಳನ್ನು ಕಂಡು ಮನವಿ ಪತ್ರ ಸಲ್ಲಿಸಿದ್ದಾರೆ. ಆದರೆ ಯಾವ ಪ್ರಯೋಜವಾಗದೆ ಇರುವುದು ಕಂಡು ಬರುತ್ತದೆ.

ಕಮ್ಮಾರರಿಗೆ ತಮ್ಮ ವೃತ್ತಿಯಲ್ಲಿ ಆಧುನಿಕತೆಯನ್ನು ಬೆಳೆಸಿಕೊಳ್ಳಬೇಕೆಂಬ ಹಂಬಲವಿದೆ. ಇದನ್ನು ಕಾರ್ಯಗತಗೊಳಿಸಲು ಮತ್ತು ಆರ್ಥಿಕ ಸಹಾಯ ಪಡೆಯಲು ಬ್ಯಾಂಕುಗಳ ಮೆಟ್ಟಿಲು ಹತ್ತಿದರೆ. ಬ್ಯಾಂಕಿನಿಂದ ಸಾಲವು ದೊರೆಯುತ್ತಿಲ್ಲ ಎಂದು ಹೆಬ್ರಿಯ ಗಣೇಶಾಚಾರ್ಯರು ಹೇಳುತ್ತಾರೆ. ಆರ್ಥಿಕವಾಗಿ ಸ್ವಲ್ಪ ಮುಂದುವರೆದಿದ್ದರೆ ಬ್ಯಾಂಕಿನವರು ಸಾಲ ಕೊಡುತ್ತಾರೆ. ಇಲ್ಲದಿದ್ದರೆ ಸಾಲ ಸಿಗುವುದೇ ಇಲ್ಲ ಎಂಬ ಅಳಲನ್ನು ನಮ್ಮ ಮುಂದೆ ತೊಡಿಕೊಂಡರು.

ಅಳಿವಿನ ಅಂಚಿನಲ್ಲಿರುವ ಕಮ್ಮಾರಿಕೆಗೆ ಮತ್ತು ಕಮ್ಮಾರರಿಗೆ ಸರ್ಕಾರ ಸಹಾಯ ಮಾಡಲೇಬೇಕಾಗಿದೆ. ಕಮ್ಮಾರರಿಗೆ ಕಚ್ಚಾವಸ್ತುಗಳನ್ನು ಪೂರೈಸಿ ಅವರಿಗೆ ಆಧುನಿಕತೆಯ ತರಬೇತಿ ನೀಡಿ ಅವರಿಂದ ವಸ್ತುಗಳನ್ನು ಸಿದ್ಧಪಡಿಸಿ ಅದಕ್ಕೆ ಸರಿಯಾದ ಮಾರುಕಟ್ಟೆಯನ್ನು ಒದಗಿಸಿದರೆ ಕಮ್ಮಾರರು ಉಸಿರಾಡಬಹುದು. ವಯಸ್ಸಾಗಿ ಹಾಸಿಗೆ ಹಿಡಿದಿರುವ ಕಮ್ಮಾರರಿಗೆ ಪಿಂಚಣಿ ರೂಪದಲ್ಲಿ ಆರ್ಥಿಕ ಸಹಾಯ ಮಾಡಬೇಕು. ಕಮ್ಮಾರರ ಮಕ್ಕಳಿಗೆ ತಾಂತ್ರಿಕ ತರಬೇತಿಯನ್ನು ಪಡೆಯಲು ಐಟಿಐ ಮತ್ತು ಡಿಪ್ಲೋಮಾ ಪ್ರವೇಶದಲ್ಲಿ ರಿಯಾಯಿತಿ ನೀಡಬೇಕು.

ಒಂದು ಕಾಲದಲ್ಲಿ ಇಡೀ ಜಗತ್ತಿನಲ್ಲಿ ಕಬ್ಬಿಣದ ವೃತ್ತಿಯ ಮೂಲಕ ಕ್ರಾಂತಿಯನ್ನುಂಟು ಮಾಡಿದ ಕಮ್ಮಾರರ ಬದುಕಿಗೆ ಸರಕಾರ ಇತರೆ ಸರ್ಕಾರೇತರ ಸಂಘ ಸಂಸ್ಥೆಗಳು ಸಹಾಯ ಮಾಡಿ ಅವರಲ್ಲಿರುವ ಪಾರಂಪರಿಕ ಜ್ಞಾನಕ್ಕೆ ಆಧುನಿಕತೆಯ ಸ್ಪರ್ಷ ನೀಡಿ ಅವರ ಬದುಕಿಗೆ ಆಶಾಕಿರಣವಾಗಬೇಕಾಗಿದೆ.

**೫.೪.೧. ಕಮ್ಮಾರರ ಸಮಸ್ಯೆಗಳು:**

ಹೊಲಿಗೆಯ ಸೂಜಿಯಿಂದ ಹಿಡಿದು ಬಾಹ್ಯಾಕಾಶಕ್ಕೆ ಉಡಾಯಿಸುವ ಕ್ಷಿಪಣಿಗಳವರೆಗಿನ ಎಲ್ಲಾ ಉಪಕರಣಗಳ ತಯಾರಿಕೆಯಲ್ಲಿಯೂ ಕಬ್ಬಿಣ ಇಲ್ಲವೇ ಉಕ್ಕು ಬಳಸಲ್ಪಡುತ್ತದೆ. ಹಿಂದಿನ ಗ್ರಾಮೀಣ ಕುಶಲಕರ್ಮಿಗಳು ಕತ್ತಿ, ಹಾರೆ, ಪಿಕಾಸಿ, ಮುಂತಾದ ಉಪಕರಣಗಳನ್ನು ತೀಕ್ಷ್ಣಗೊಳಿಸಿದ ಬಳಿಕ ಅದು ಹೊಡೆತದಿಂದ ಬಗ್ಗಿ ಹೋಗದಂತೆ ತಡೆಯಲು ನೀರಿಡುವ ಒಂದು ಕ್ರಮವಿತ್ತು. ಉಪಕರಣಗಳನ್ನು ಕಾಯಿಸಿ ಅದರ ಹಲಗಿನಷ್ಟು ಭಾಗಕ್ಕೆ ನೀರು ಹೊಯ್ಯುವುದನ್ನು ನೀರಿಡುವುದು ಎನ್ನುತ್ತಾರೆ. ಈ ಕೆಲಸದಲ್ಲಿ ಬಹಳ ಕೌಶಲ್ಯ ಬೇಕಾಗುತ್ತದೆ. ಮೃದುತ್ವವನ್ನು ಕಳೆದು ಅದು ಗಟ್ಟಿಯಾಗಬೇಕು. ಆದರೆ ಪೆಡಸಾಗಬಾರದು. ನೀರಿಡುವ ಕೆಲಸದಲ್ಲಿ ಪರಿಣಿತರಾದ ಕಮ್ಮಾರರು ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತಾರೆ. ಹಾರೆ, ಕುಡುಗೋಲು, ಕುರುಪಿ, ಕೊಡ್ಲಿ, ಬಾಚಿ, ಕುಳ, ಕತ್ತಿ, ಮುಂತಾದವುಗಳ ಅಲಗುಗಳು ಹರಿತವಾಗಿರಲು ನೀರು ಕುಡಿಸುವುದು ಅತಿ ಮುಖ್ಯವಾದ ಕೆಲಸ. ಇದನ್ನು ನುರಿತ ಕಮ್ಮಾರರು ಅತ್ಯಂತ ಜಾಣ್ಮೆಯಿಂದ ನಿರ್ವಹಿಸುತ್ತಾರೆ. ಈ ಕಾರ್ಯ ಎಲ್ಲರಿಗೂ ಬರುವುದಿಲ್ಲ ಅನುಭವ ಇದ್ದವರಿಗೆ ಮಾತ್ರ ಅದು ಸಾಧ್ಯ.

ಈ ಯಂತ್ರ ಯುಗದಲ್ಲಿ ಕಬ್ಬಿಣದ ಉಪಯುಕ್ತತೆ ಬಹಳ ಹೆಚ್ಚಿದೆ. ಇಂದು ಕಬ್ಬಿಣದ ಎಲ್ಲಾ ಉಪಕರಣಗಳು ತಂತ್ರಗಳ ಮೂಲಕವೇ ತಯಾರಾಗುತ್ತವೆ. ಇದರ ಪರಿಣಾಮವಾಗಿ ಹಳ್ಳಿಯಲ್ಲಿ

ಉಳಿ, ಕೊಡಲಿ, ಕತ್ತಿ, ತಯಾರಿಕೆಯೂ ನಿಂತು ಹೋಗಿದೆ. ಗ್ರಾಮೀಣ ಪ್ರದೇಶದ ಕುಶಲಕರ್ಮಿಗಳಿಗೆ ಉದ್ಯೋಗದ ಭರವಸೆ ಇಲ್ಲದಂತಾಗಿದೆ. ಬದಲಾಗುತ್ತಿರುವ ಪರಿಸ್ಥಿತಿಯಲ್ಲಿ ಕಬ್ಬಿಣದ ಕೆಲಸಗಾರರು ತಮ್ಮ ಕೆಲಸವನ್ನು ನಿಲ್ಲಿಸಬೇಕಾಗಿ ಬಂದರೂ ತಮ್ಮ ಮಕ್ಕಳನ್ನು ಬದಲಾದ ಯಂತ್ರೋಧ್ಯಮದಲ್ಲಿ ತೊಡಗಿಸುವುದು ಅತ್ಯಗತ್ಯ. ಬೇರೆ ಬೇರೆ ಕಾರ್ಖಾನೆಗಳಿಗೆ, ವಾಹನಗಳನ್ನು ರಿಪೇರಿಗೊಳಿಸುವ ಗ್ಯಾರೇಜುಗಳಿಗೆ, ಗೃಹೋಪಕರಣ, ವಾಹನ, ಪೀಠೋಪಕರಣವನ್ನು ತಯಾರಿಸುವ ಕೈಗಾರಿಕೆಗಳು ಇಂತಹ ನೂರಾರು ಹೊಸ ರೀತಿಯ ಉದ್ಯೋಗಗಳು ತಲೆ ಎತ್ತಿ ನಿಂತಿವೆ. ಈ ಸಂಸ್ಥೆಗಳಿಗೆ ಸರ್ಕಾರ ಕಮ್ಮಾರರ ಮಕ್ಕಳನ್ನು ಸೇರಿಸಲು ಪ್ರಯತ್ನಿಸಬೇಕು. ಮತ್ತು ಬ್ಯಾಂಕ ಹಾಗೂ ಸರಕಾರದ ಆರ್ಥಿಕ ಸಹಾಯದಿಂದ ಸಾಲ ಸವಲತ್ತು ನೀಡಿ ಹೊಸ ಕೈಗಾರಿಕೆಗಳನ್ನು ಪ್ರಾರಂಭಿಸಲು ಪ್ರೋತ್ಸಾಹಿಸಬೇಕು.

ಕಮ್ಮಾರರಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚಾಗಿದೆ. ಅವರು ಶೈಕ್ಷಣಿಕವಾಗಿ ಮುಂದುವರೆಯಲು ಎಲ್ಲಾ ರೀತಿಯ ಸಹಾಯ ಸಹಕಾರಗಳನ್ನು ನೀಡುವುದು ತ್ವರಿತಗತಿಯಲ್ಲಿ ನಡೆಯಬೇಕಾಗಿದೆ. ಕಮ್ಮಾರರ ಮಕ್ಕಳು ತಾಂತ್ರಿಕ ಶಿಕ್ಷಣ ಪಡೆದರೆ ಬದಲಾದ ಪರಿಸ್ಥಿತಿಯಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಉದ್ಯೋಗ ಪಡೆಯುತ್ತಾರೆ ಆಧುನಿಕತೆಯನ್ನು ತಮ್ಮ ವೃತ್ತಿಯಲ್ಲಿ ಅಳವಡಿಸಿಕೊಂಡು ತಮ್ಮ ಕುಲ ಕಸುಬನ್ನು ಉಳಿಸಿಕೊಳ್ಳಲು ಪ್ರಯತ್ನಿಸಲು ಪ್ರೋತ್ಸಾಹಿಸುವುದು ಅಗತ್ಯ. ಪರಂಪರಾನುಗತವಾಗಿ ಕಬ್ಬಿಣದ ಉದ್ಯೋಗವನ್ನು ನಡೆಸಿಕೊಂಡು ಕೆಲಸ ಕಳೆದುಕೊಂಡವರ ಮಕ್ಕಳಿಗೆ ಕೈಗಾರಿಕಾ ಕ್ಷೇತ್ರದಲ್ಲಿ ಸರಕಾರ ಪ್ರವೇಶ ದೊರಕಿಸಿಕೊಡುವುದು ಅಗತ್ಯ

ಕಮ್ಮಾರರ ಮೂಲ ಕಸುಬು ಕಬ್ಬಿಣದ ವಸ್ತುಗಳ ತಯಾರಿಕೆ. ಇವರು ಕುಲುಮೆ ಕಬ್ಬಿಣ ಹಾಗೂ ಇದ್ದಿಲಿನ ಜೊತೆಗೆ ಕೆಲಸ ಮಾಡುತ್ತಿರುತ್ತಾರೆ. ಇವರ ಮೈತುಂಬಾ ಇದ್ದಿಲಿನ ಕಪ್ಪು ತುಂಬಿರುತ್ತದೆ. ಅದಲ್ಲದೆ ಬೆಂಕಿಯ ಹತ್ತಿರ ಕುಳಿತುಕೊಂಡು ಕಠಿಣವಾದ ಕೆಲಸಗಳನ್ನು ಮಾಡುವುದರಿಂದ ಬೆವರು ಸುರಿದು ಮೈಯೆಲ್ಲಾ ಕಪ್ಪಾಗುತ್ತದೆ. ಆದರೆ ಇಷ್ಟೆಲ್ಲಾ ಕಷ್ಟಪಟ್ಟು ಮಾಡುತ್ತಿರುವ ಕೆಲಸಕ್ಕೆ ಸಿಗುವ ಕೂಲಿ ಮಾತ್ರ ಅಲ್ಪವಾಗಿದೆ. ಇದರಿಂದ ಜೀವನ ನಿರ್ವಹಣೆ ಸಾಧ್ಯವಿಲ್ಲದಂತಾಗಿದೆ. ಇವರ ಮಕ್ಕಳಿಗೆ ಉತ್ತಮವಾದ ಆಹಾರ ಸಿಗದೆ ಅವರು ಅನಾರೋಗ್ಯದಿಂದ ಬಳಲುತ್ತಿದ್ದಾರೆ. ವಿದ್ಯಾಭ್ಯಾಸವಂತೂ ಮರಿಚಿಕೆಯೇ ಆಗಿದೆ. ಇವರ ಮಕ್ಕಳೂ ಸಹ ಕುಲುಮೆಯ ಹತ್ತಿರ ತಿರುಗುತ್ತಾ ತನ್ನ ತಂದೆಯ ಜೊತೆಯಲ್ಲಿ ಸೇರಿಕೊಂಡು ತಿದಿಯನ್ನು ಒತ್ತುವ ಕೆಲಸವನ್ನು ಮಾಡುತ್ತಾ ಅದೇ ಕೆಲಸಕ್ಕೆ ಸೇರಿಕೊಳ್ಳುತ್ತಿದ್ದಾರೆ. ಒಟ್ಟಾರೆ ಬಡತನದಲ್ಲಿ ಹುಟ್ಟಿ ಯಾವುದೇ ಮೂಲ ಸೌಲಭ್ಯಗಳಿಲ್ಲದೆ ಬೆಳೆದು ಬಡತನದಲ್ಲಿಯೇ ಸಾಯುವಂತಹ ಸ್ಥಿತಿ ಇವರಿಗೆ ಬಂದಿದೆ ಎಂದು ಹೇಳಿದರೆ ಅತಿಶಯೋಕ್ತಿ ಎನಿಸಲಾರದು.

ನಾನು ಕ್ಷೇತ್ರಕಾರ್ಯಕ್ಕೆ ಹೋದಾಗ ಹಲವರನ್ನು ಭೇಟಿಯಾದ ಸಂದರ್ಭದಲ್ಲಿ ಮತನಾಡಿಸಿದಾಗ ಅವರು ನಾವು ಇಂದು ಒಂದು ರೀತಿಯ ಪಶುಗಳ ರೀತಿಯಲ್ಲಿ ಜೀವನ ಮಾಡುತ್ತಿದ್ದೇವೆ. ನಮಗೆ

ಸಮಾಜದಲ್ಲಿ ಯಾವುದೇ ರೀತಿಯ ಬೆಲೆ ಇಲ್ಲ. ನಿರಕ್ಷರಿ ಕುಕ್ಷಿಗಳಾಗಿ ಬದುಕುತ್ತಿದೇವೆ. ಈ ಜೀವನ ನಮ್ಮ ಜೊತೆಯಲ್ಲಿಯೇ ಕೊನೆಯಾಗಲಿ. ನಮ್ಮ ಮಕ್ಕಳಿಗೆ ಈ ದುಃಸ್ಥಿತಿ ಬರಬಾರದು. ಅದಕ್ಕಾಗಿಯೆ ಅವರಿಗೆ ಇಷ್ಟ ಬಂದಂತಹ ಕೆಲಸವನ್ನು ನಿರ್ವಹಿಸಿಕೊಂಡು ಹೋಗಲಿ. ಬೇರೆ ಯಾವ ಕೆಲಸದಲ್ಲಾದರೂ ಗುರುತಿಸಿಕೊಳ್ಳಲಿ. ಕೂಲಿಯನ್ನಾದರು ಮಾಡಲಿ ಅದು ಚೆನ್ನಾಗಿದೆ. ನಮ್ಮ ಕೆಲಸದಲ್ಲಿ ನೆಮ್ಮದಿ ಸಿಗುತ್ತಿಲ್ಲ. ನಮಗೆ ಯಾವುದೇ ಕೆಲಸ ಮಾಡಲು ಬರುವುದಿಲ್ಲ. ನಮ್ಮ ವಿಶ್ವಕರ್ಮ ಸಮಾಜದಲ್ಲಿಯೂ ನಮ್ಮನ್ನು ಬಹಳ ಕೀಳಾಗಿ ಕಾಣುತ್ತಾರೆ. ಕಾರಣವೇನೆಂದರೆ ಇತರೆ ವೃತ್ತಿಗಳನ್ನು ಮಾಡುತ್ತಿರುವ ನಮ್ಮ ಸಮುದಾಯದವರು ಉತ್ತಮವಾದ ಸ್ಥಿತಿಯಲ್ಲಿದ್ದಾರೆ. ಕಬ್ಬಿಣದ ಕೆಲಸಕ್ಕೆ ಬೇಕಾಗುವಂತಹ ಇದ್ದಿಲು ಈಗ ಸಿಗುತ್ತಿಲ್ಲ. ಹಿಂದೆಲ್ಲಾ ಕಾಡು ಹೇರಳವಾಗಿತ್ತು. ಇದ್ದಿಲು ಮಾಡಿಕೊಂಡು ಕೆಲಸ ಮಾಡುತ್ತಿದ್ದೆವು. ಈಗ ಅದೂ ಕಷ್ಟವಾಗಿದೆ. ಕಚ್ಚಾ ಕಬ್ಬಿಣದ ಬೆಲೆ ಕೂಡಾ ತುಂಬಾ ಜಾಸ್ತಿಯಾಗಿದೆ. ಅದನ್ನು ಕೊಂಡು ತಂದು ಹೊಸ ರೀತಿಯ ಕತ್ತಿ, ಕೊಡಲಿ, ಇನ್ನಿತರ ಸಾಮಗ್ರಿಗಳನ್ನಾಗಿ ಮಾಡಿ ಮಾರಿದರೆ ಏನೂ ಲಾಭ ನಮ್ಮ ಪಾಲಿಗೆ ಉಳಿಯುವುದಿಲ್ಲ. ಅದ್ದರಿಂದ ಈ ಜನಾಂಗದವರು ಈ ಕಮ್ಮಾರಿಕೆ ಕೆಲಸವನ್ನು ಬಿಟ್ಟು ಬೇರೆ ಕೂಲಿ ಕೆಲಸಕ್ಕೆ ಹೋಗುತ್ತಿದ್ದಾರೆ.

ಕೃಷಿಯಲ್ಲಿ ಇತ್ತೀಚೆಗೆ ಟ್ರ್ಯಾಕ್ಟರ್, ಟಿಲ್ಲರ್‌ಗಳನ್ನು ಬಳಸುತ್ತಿರುವುದರಿಂದ ನಮಗೆ ಆಧಾರವಾಗಿದ್ದ ನೇಗಿಲನ ಕೆಲಸಗಳು ಮಾಯವಾಗಿವೆ. ಬಹಳ ಹಿಂದೆ ಚಕ್ಕಡಿ ಗಾಡಿ ಕೆಲಸಗಳು ಬರುತ್ತಿದ್ದವು. ಈಗ ಮೋಟಾರ್ ವಾಹನಗಳ ಸಂಖ್ಯೆ ಹೆಚ್ಚಾಗಿದ್ದುದರಿಂದ ಗಾಡಿ ಕೆಲಸಗಳು ಕೂಡಾ ಕಣ್ಮರೆಯಾಗಿರುವುದನ್ನು ಕಾಣುತ್ತೇವೆ. ಗಾಡಿ ಕೆಲಸವಂತೂ ತುಂಬಾ ಕೌಶಲ್ಯಭರಿತವಾದ ಉದ್ಯೋಗವಾಗಿದ್ದು ಅದೂ ಕೂಡ ನಿಂತು ಹೋಗಿದೆ. ಒಟ್ಟಿನಲ್ಲಿ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಕಮ್ಮಾರಿಕೆಯ ವೃತ್ತಿಯಲ್ಲಿ ಬದುಕಲಿಕ್ಕೆ ಅವಕಾಶವಿಲ್ಲದ ಪರೀಸ್ಥಿತಿ ಉಂಟಾಗಿದೆ. ಸರಕಾರ ನಮ್ಮನ್ನು ಮತ್ತು ನಮ್ಮ ಪಾರಂಪರಿಕ ಉದ್ಯೋಗವನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಸಹಾಯ ಮಾಡಬೇಕಾಗಿದೆ ಎಂದು ಕಮ್ಮಾರರು ಅಭಿಪ್ರಾಯ ಪಡುತ್ತಾರೆ.

**೫.೫ ಆಧುನಿಕತೆಯ ಪ್ರಭಾವ:**

ನಗರೀಕರಣ, ಜಾಗತೀಕರಣ, ಪಾಶ್ಚಾತ್ಯೀಕರಣ, ಅಧುನೀಕರಣ ಪ್ರಭಾವದಿಂದ ಕಮ್ಮಾರರ ಪಾರಂಪರಿಕ ವೃತ್ತಿಗಳು ಮೂಲೆ ಗುಂಪಾಗಿರುವುದು ಕಂಡು ಬರುತ್ತದೆ. ಇದರ ಜೊತೆಗೆ ಕಮ್ಮಾರರ ಬದುಕು ಅತಂತ್ರವಾಯಿತು. ಕಮ್ಮಾರಿಕೆಯ ವೃತ್ತಿಯ ಮೇಲೆ ಆಧುನಿಕತೆ ಪ್ರಭಾವ ಬೀರದೆ ಇದ್ದ ಸಂದರ್ಭದಲ್ಲಿ ಕೃಷಿಗೆ ಬೇಕಾದ ಉಪಕರಣಗಳೆಲ್ಲವೂ ಕಮ್ಮಾರರ ಕುಲುಮೆಯಲ್ಲಿಯೇ ತಯಾರಾಗುತ್ತಿದ್ದವು. ಆಧುನಿಕತೆಯ ಪ್ರಭಾವದಿಂದ ಇಂದು ಕೃಷಿ ಉಪಕರಣಗಳೆಲ್ಲವೂ ಕಾರ್ಖಾನೆಗಳಲ್ಲಿ ಸಿದ್ಧವಾಗುತ್ತಿವೆ. ಗ್ರಾಮೀಣ ಪ್ರದೇಶಗಳಲ್ಲಿ ಕಮ್ಮಾರಿಕೆ ವೃತ್ತಿಯನ್ನು ಮಾಡುತ್ತಿರುವವರೆಲ್ಲ ಇಂದು ಕುರುಪಿ, ಕುಡುಗೋಲು, ಕೊಡ್ಲಿ, ಕುಂಟೆಗಳಿಗೆ ಮಾತ್ರ ಸೀಮಿತರಾಗಿದ್ದಾರೆ. ಒಂದು ಕಾಲಕ್ಕೆ ಚಕ್ಕಡಿ ಗಾಲಿಗಳ ಹಳಿಗಳನ್ನು ಅತ್ಯಂತ ಕ್ರಮಬದ್ಧವಾಗಿ ಹಾಕುತ್ತಿದ್ದ ಕಮ್ಮಾರರು ಅದನ್ನು

ಇಂದೂ ಕಳೆದುಕೊಂಡಿದ್ದಾರೆ. ಹಳಿ ಹಾಕುವ ಕೆಲಸವೂ ಸಹ ಇಂದು ವೆಲ್ಡಿಂಗ ಶಾಪ್ಗಳಲ್ಲಿ ನಡೆಯುತ್ತಿದೆ.

ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಮತ್ತು ಅಕ್ಷರಸ್ತರಾದ ಕೆಲ ಕಮ್ಮಾರರು ತಮ್ಮ ಪಾರಂಪರಿಕ ವೃತ್ತಿಯಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಕಮ್ಮಾರಿಕೆಯ ವೃತ್ತಿಯ ಜೊತೆಗೆ ಅಲ್ಮೇರಾ, ಖುರ್ಚಿ, ಕಬ್ಬಿಣ ಗೇಟ್, ಕಬ್ಬಿಣ ಟೇಬಲ್, ಮಂಚ, ಕಿಡಕಿಗಳ ಗ್ರಿಲ್, ಮುಂತಾದ ಕೆಲಸಗಳ್ನು ನಿರ್ವಹಿಸುತ್ತಿದ್ದಾರೆ. ಜೊತೆಗೆ ವೆಲ್ಡಿಂಗ್, ಲೇತ್, ಗ್ರೈಂಡಿಂಗ್, ಡ್ರಿಲ್ಲಿಂಗ್, ಯಂತ್ರಗಳನ್ನು ಬಳಸಿಕೊಂಡು ಅನೇಕ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುವುದರಲ್ಲಿ ನಿರತರಾಗಿರುವುದು ಕಂಡು ಬರುತ್ತದೆ.

ಪಾರಂಪರಿಕ ಕಮ್ಮಾರಿಕೆಯ ವೃತ್ತಿಗಾರರು ತಮ್ಮ ವೃತ್ತಿಯಲ್ಲಿ ಭವಿಷ್ಯವಿಲ್ಲ ಎಂದು ತಿಳಿದು ಅನೇಕರು ಮರದ ಕೆಲಸ, ಚಿನ್ನದ ಕೆಲಸ, ಮೋಟಾರ್ ಮೆಕ್ಯಾನಿಕ್, ಎಲೆಕ್ಟ್ರಿಕ್ ಮೋಟರ್ ವೈಂಡಿಂಗ್, ಬೋರವೆಲ್ಲ್ ರಿಪೇರಿ, ಮುಂತಾದ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಿರುವುದು ಕಂಡು ಬರುತ್ತದೆ. ಬಾರ್ ಬೆಂಡಿಂಗ್‌ನಂತಹ ಕೆಲಸಗಳನ್ನೂ ಸಹ ಇವರ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ.

ಒಂದು ಕಾಲದಲ್ಲಿ ಕಮ್ಮಾರಿಕೆ ವೃತ್ತಿಯಲ್ಲಿ ಹಣದ ಚಲಾವಣೆ ಇರಲಿಲ್ಲ. ಕಮ್ಮಾರರು ಕೃಷಿಗೆ ಬೇಕಾದ ವಸ್ತುಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು ಮತ್ತು ಅವರು ಬೆಳೆಯುವ ಬೆಳೆಯಲ್ಲಿ ಇವರು ಆಯಾ ಪಡೆಯುತ್ತಿದ್ದರು. ಇಂದು ಆಯ ಪಡೆಯುವ ಪದ್ಧತಿ ಮಾಯವಾಗಿದೆ. ಇಂತಿಂತಹ ಕೆಲಸಕ್ಕೆ ಇಂತಿಷ್ಟು ಹಣ ಎಂದು ನಿಗದಿ ಪಡಿಸಿ ಹಣ ಪಡೆಯುತ್ತಿರುವುದು ಕಂಡು ಬರುತ್ತದೆ.

ಆಧುನಿಕ ಜಗತ್ತು ಇಂದು ವೇಗವಾಗಿ ಚಲಿಸುತ್ತಿದೆ. ಆಧುನಿಕ ತಂತ್ರಜ್ಞಾನದಿಂದ ಇಂದು ಜಗತ್ತು ಒಂದು ಹಳ್ಳಿಯಾಗಿ ಪರಿವರ್ತನೆಯಾಗುತ್ತಿದೆ. ಆಧುನಿಕತೆಗೆ ಮುಖಾಮುಖಿಯಾಗುತ್ತಿರುವ ಕುಶಲಕರ್ಮಿಗಳು, ಕುಲಕಸುಬುದಾರರು ಅನಿವಾರ್ಯವಾಗಿ ಅದಕ್ಕೆ ಹೊಂದಿಕೊಳ್ಳಲೇಬೇಕಾಗಿದೆ. ಆಧುನಿಕತೆಯ ಪ್ರಭಾವದಿಂದ ಅವರ ಜೀವನ ಶೈಲಿ, ವೇಷ ಭೂಷಣಗಳು, ಸಂಸ್ಕೃತಿ, ಆಚಾರ, ವಿಚಾರ, ಸಂಪ್ರದಾಯ, ನಡೆ-ನುಡಿಗಳಲ್ಲಿ ಎಲ್ಲದರಲ್ಲೂ ಬದಲಾವಣೆಯಾಗಿದೆ. ಅನಕ್ಷರತೆಯಲ್ಲಿಯೇ ಬದುಕುತ್ತಿದ್ದ ಕಮ್ಮಾರರು ಇಂದು ಅನಿವಾರ್ಯವಾಗಿ ಶಿಕ್ಷಣವನ್ನು ಪಡೆಯಲೇಬೇಕಾದ ಸ್ಥಿತಿಗೆ ಬಂದಿದ್ದಾರೆ. ಕಮ್ಮಾರರಲ್ಲಿ ಪಾರಂಪರಿಕ ಜ್ಞಾನ ಮಾಯವಾಗಿ ಅದರ ಸ್ಥಳವನ್ನು ಆಧುನಿಕ ಜ್ಞಾನ ಪರಂಪರೆ ತುಂಬಿಕೊಳ್ಳುತ್ತಿದೆ.

**ಅಡಿಟಿಪ್ಪಣಿಗಳು:**

೧. ಖಂಡೋಬಾ ಪಿ.ಕೆ. ೧೦೦೩, ಪು ೨೪

೨. ಆರ್.ಬಿ.ಕುಮಾರ್, ೨೦೦೪, ಪುಟ, ೧೪೪

೩. ಆರ್.ಬಿ. ಕುಮಾರ, ೨೦೦೪, ಪು, ೧೬೭

೪. ಕೆ. ಎಂ ಮೈತ್ರಿ, ೨೦೦೪, ಪು.೪೬

## ಕಮ್ಮಾರರ ಮೌಖಿಕ ಸಾಹಿತ್ಯ

ಶ್ರಮ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬದುಕುತ್ತಿರುವ ಕಮ್ಮಾರರ ಸಮುದಾಯದಲ್ಲಿಯೂ ಮೌಖಿಕ ಸಾಹಿತ್ಯ ಕಂಡುಬರುತ್ತದೆ. ಈ ಸಮುದಾಯದ ಹಿನ್ನೆಲೆ ನೋವು, ನಲಿವು, ಸಂಸ್ಕೃತಿ, ಆಚಾರ–ವಿಚಾರ, ಆಚರಣೆ ಸಂಪ್ರದಾಯ ಮುಂತಾದವುಗಳನ್ನೆಲ್ಲ ಕಂಡು ಕೊಳ್ಳಬಹುದು. ಕಮ್ಮಾರರು ಹೇಳುವ ಅನೇಕ ಕಥೆ, ಪುರಾಣಗಳು ಮಂಗಳೂರು ಮತ್ತು ಉಡುಪಿ ಪರಿಸರದಲ್ಲಿಯ ಅನೇಕ ಸಮುದಾಯಗಳಲ್ಲಿ ಕಂಡು ಬರುತ್ತವೆ. ನಾನು ನನ್ನ ಈ ಅಧ್ಯಯನದಲ್ಲಿ ಕಮ್ಮಾರರ ಸಮುದಾಯದವರಿಗೆ ಮಾತ್ರ ಸೀಮಿತವಾಗಿರುವ ಅವರ ಮೌಖಿಕ ಸಾಹಿತ್ಯವನ್ನು ಮಾತ್ರ ಇಲ್ಲಿ ಅಧ್ಯಯನಕ್ಕೊಳಡಿಸಲಾಗಿದೆ. ಕಮ್ಮಾರರು ಸಾಮಾನ್ಯವಾಗಿ ಅನಕ್ಷರಸ್ತರು. ಇವರಲ್ಲಿರುವ ಕಥೆ, ಗಾದೆ, ಪುರಾಣಗಳು, ಒಗಟು, ಒಡಪು, ಇವು ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿವೆ. ಕಮ್ಮಾರರ ಯುವ ಪೀಳಿಗೆಯಲ್ಲಿ ಈ ಮೌಖಿಕ ಸಾಹಿತ್ಯದ ಬಗೆಗೆ ಯಾವ ಮಾಹಿತಿಯೂ ಇಲ್ಲದಿರುವುದು ಕಂಡು ಬರುತ್ತದೆ. ಕಮ್ಮಾರರಿಗೆ, ಕಮ್ಮಾರ ವೃತ್ತಿಗೆ ಸಂಬಂಧಿಸಿದ ಕಥೆಗಳೆಲ್ಲವು ಉತ್ತರ ಕರ್ನಾಟಕ ಹಾಗು ದಕ್ಷಿಣ ಕರ್ನಾಟಕದಲ್ಲಿ ಒಂದೆ ಆಶಯವನ್ನು ಹೊಂದಿದ್ದು , ಕಥೆ ನಿರೂಪಣೆಯಲ್ಲಿ ಭಿನ್ನತೆ ಇರುವುದು ಕಂಡು ಬರುತ್ತದೆ.

**೬.೧. ಕಥೆಗಳು:**

"ಒಂದಾನೊಂದು ಕಾಲದಲ್ಲಿ ಶಿವನು ಲೋಕ ಸಂಚಾರ ಕೈಗೊಂಡಾಗ ಸಪ್ತ ಋಷಿಗಳ ಹೆಂಡಂದಿರು ದೇವಕೊಂಡದಲ್ಲಿ ಈಜಾಡುವುದನ್ನು ಕಾಣುತ್ತಾನೆ. ಆ ಸಪ್ತ ಋಷಿಗಳ ಹೆಂಡತಿಯರ ಬೆತ್ತಲೆ ದೇಹಗಳನ್ನು ನೋಡಿ ಮೋಹಿಸಿದ ಶಿವನು ಆ ಏಳು ಜನ ಹೆಂಗಸರನ್ನು ಕೊಡುತ್ತಾನೆ. ಆ ಏಳು ಜನರು ಶಿವನಿಗೆ ಬಸಿರಾಗಿ ಏಳು ಗಂಡು ಮಕ್ಕಳಿಗೆ ಜನ್ಮ ನೀಡುತ್ತಾರೆ. ಆ ಕೃತ್ಯದಿಂದ ಹುಟ್ಟಿದ - ಮಕ್ಕಳನ್ನು ತಮ್ಮೊಂದಿಗೆ ಕರೆದುಕೊಂಡು ಹೋದರೆ ತಮ್ಮ ಗಂಡಂದಿರು ಅನುಮಾನ ಪಡುತ್ತಾರೆಂದು ಬಯಪಟ್ಟು ಋಷಿಗಳ ಹೆಂಡಂದಿರು ಆ ಮಕ್ಕಳನ್ನು ನೀನೆ ಕರೆದುಕೊಂಡು ಹೋಗಬೇಕೆಂದು ಶಿವನಿಗೆ ಹೇಳುತ್ತಾರೆ. ಅರುಂಧತಿ ಮಾತ್ರ ತನ್ನ ಹೊಟ್ಟೆಯಲ್ಲಿ ಹುಟ್ಟಿದ

ಮಗುವನ್ನು ತಾನೇ ಕರೆದುಕೊಂಡು ಹೋಗುತ್ತಾಳೆ. ಇನ್ನುಳಿದ ಆರು ಮಕ್ಕಳನ್ನು ಶಿವನು ತನ್ನೊಂದಿಗೆ ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ಈ ಮಕ್ಕಳನೆಲ್ಲ ನೋಡಿದ ಪಾರ್ವತಿಯು ಇವರು ಯಾರ ಮಕ್ಕಳೆಂದು ಶಿವನನ್ನು ಪ್ರಶ್ನಿಸುತ್ತಾಳೆ. ಈ ಎಲ್ಲಾ ಮಕ್ಕಳು ನಿನ್ನದೇ ಎಂದು ಶಿವನು ಉತ್ತರ ಕೊಡುತ್ತಾನೆ. ಅವನ ಮಾತನ್ನು ಸಹಿಸಿಕೊಂಡು ಈ ಎಲ್ಲಾ ಮಕ್ಕಳನ್ನು ಪಾರ್ವತಿಯು ತನ್ನ ಬಲಗೈಯಿಂದ ಮೇಲೆತ್ತುತ್ತಾಳೆ. ಅವಳು ಎತ್ತಿದಾಕ್ಷಣ ಆರು ದೇಹಗಳು ಒಂದೇ ದೇಹವಾಗಿ ಮುಖಗಳು ಮಾತ್ರ ಆರಾಗಿ ಉಳಿಯುತ್ತವೆ. ಅವನನ್ನು ತನ್ನ ಮಗನೆಂದು ಅಪ್ಪಿಕೊಂಡ ಪಾರ್ವತಿಯು, ಅವನಿಗೆ ಷಣ್ಮುಖನೆಂದು ಹೆಸರಿಡುತ್ತಾಳೆ. ಕಬ್ಬಿಣದಿಂದ ಆಯುಧಗಳನ್ನು ತಯಾರಿಸಿ ಕೊಡುವ ಕಮ್ಮಾರನ ಉಸ್ತುವಾರಿಗೆ ಈ ಮಗುವನ್ನು ನೇಮಿಸುತ್ತಾಳೆ.[೧]"

**ಕಮ್ಮಾರಿಕೆಯ ವೃತ್ತಿ ಶಿವನಿಂದಲೇ ಪ್ರಾರಂಭವಾಯಿತು ಎಂದು ತಿಳಿಸುವ ಕಥೆ:**

"ಆದಿಯಲ್ಲಿ ಶಿವನೇ ಕಮ್ಮಾರನಾಗಿದ್ದ. ತನ್ನ ಬಲತೊಡೆಯನ್ನು ಅಡಿಗಲ್ಲನ್ನಾಗಿಸಿಕೊಂಡಿದ್ದ. ಹಾಗೆಯೇ ಎಡಗೈಯನ್ನು ಇಕ್ಕಳವಾಗಿ ಬಳಸುತ್ತಿದ್ದ. ಅವನ ಬಲಗೈಯೇ ಸುತ್ತಿಗೆಯಾಗಿದ್ದಿತ್ತೆಂದು ತನ್ನ ಎಡಗಾಲನ್ನೇ ಕಬ್ಬಿಣವಾಗಿಸಿಕೊಂಡು ಅದನ್ನು ಹಣೆದು ಆಯುಧಗಳನ್ನು ತಯಾರಿಸುತ್ತಿದ್ದನು"[೨] ಎಂದು ಈ ಕಥೆ ವಿವರಿಸುತ್ತದೆ.

"ಹಿಂದೆ ಅಣ್ಣ ತಮ್ಮಂದಿರಿಬ್ಬರೂ ಪ್ರತಿ ದಿನ ಕುಲುಮೆಯಲ್ಲಿ ಕಬ್ಬಿಣ ತಯಾರಿಸುತ್ತಿದ್ದರು. ಕಾಳಿಯ ಸ್ವರೂಪವಾದ ಕುಲುಮೆಗೆ ಪೂಜಿಸಿ ಪ್ರತಿ ಮಂಗಳವಾರ ಮತ್ತು ಶುಕ್ರವಾರ ಒಂದು ಕುರಿ ಬಲಿ ಕೊಡುತ್ತಿದ್ದರು. ಕುರಿ ಬಲಿಕೊಟ್ಟು ನಂತರ ಅದರ ದೇಹವನ್ನು ಮಾಂಸ ತಿನ್ನುವ ಜನರಿಗೆ ಕೊಡುತ್ತಿರುತ್ತಾರೆ. ಹೀಗೆಯೇ ನಡೆಯುತ್ತಿರುವಾಗ ಒಮ್ಮೆ ತಮ್ಮನು ದೂರದ ಊರಿಗೆ ಹೋಗುತ್ತಾನೆ. ಆ ಸಂದರ್ಭದಲ್ಲಿ ಅಣ್ಣನು ಕುಲುಮೆಗೆ ಕುರಿ ಬಲಿ ಕೊಡುತ್ತಾನೆ. ಕುರಿ ಬಲಿಕೊಟ್ಟ ನಂತರ ಅದರ ಮಾಂಸವನ್ನು ಬೇರೊಬ್ಬನಿಗೆ ಕೊಡಲು ಅವನ ಮನಸ್ಸು ಒಪ್ಪುವುದಿಲ್ಲ. ಆ ಮಾಂಸವನ್ನು ತಾನೇ ಬೇಯಿಸಿಕೊಂಡು ತಿನ್ನುತ್ತಾನೆ. ನಂತರ ಮಾಂಸ ತಿನ್ನುವುದನ್ನು ಮುಂದುವರಿಸುತ್ತಾನೆ. ಇದನ್ನು ತಿಳಿದ ತಮ್ಮನು ಅಣ್ಣನಿಗೆ ಮಾಂಸ ತಿನ್ನುವುದು ಒಳ್ಳೆಯದಲ್ಲ ಎಂದು ತಿಳಿಸಿ ಹೇಳುತ್ತಾನೆ. ಆದರೆ ಮಾಂಸ ತಿನ್ನುವುದನ್ನು ಅಣ್ಣನು ಬಿಡುವುದಿಲ್ಲ. ಆಗ ಅವರಿಬ್ಬರಲ್ಲಿಯೂ ಜಗಳವಾಗುತ್ತದೆ. ಜಗಳದ ನಂತರ ಅಣ್ಣನು ಕಾಡಿನ ಕಡೆಗೆ ನಡೆಯುತ್ತಾನೆ. ತಮ್ಮನು ನಾಡಿಗೆ ಬರುತ್ತಾನೆ. ಕಾಡಿಗೆ ಹೋದ ಅಣ್ಣನ ವಂಶದವರನ್ನು ದೊಡ್ಡಮನೆ ಕಮ್ಮಾರರು ಎಂದೂ, ನಾಡಿಗೆ ತೆರಳಿದ ತಮ್ಮನ ವಂಶಜರನ್ನು ಚಿಕ್ಕ ಮನೆ ಕಮ್ಮಾರರೆಂದು ಕರೆಯುತ್ತಾರೆ.[೩]"

"ಬಹಳ ವರ್ಷಗಳ ಹಿಂದೆ ಕುಲುಮೆಯಲ್ಲಿ ಕಮ್ಮಾರರು ಕಬ್ಬಿಣ ತಯಾರಿಸುತ್ತಿದ್ದರು. ಕಬ್ಬಿಣ ತಯಾರಿಸುವಾಗ ಒಂದು ದಿನ ಎಷ್ಟು ಪ್ರಯತ್ನಿಸಿದರೂ ಎಷ್ಟು ತಿದಿಯನ್ನು ಒತ್ತಿದರೂ ಕಬ್ಬಿಣದ ಅಡುಗೆಯೇ ಇಳಿಯಲಿಲ್ಲ. ಯಾಕೆ ಅಡುಗೆ ಬರುತ್ತಿಲ್ಲವೆಂದು ಕುಲುಮೆಯಲ್ಲಿ ಕಮ್ಮಾರರು ಚಿಂತಾಕ್ರಾಂತರಾಗಿ ಕುಳಿತಿದ್ದಾಗ ಒಂದೇ ಸಾರಿ ಕುಲುಮೆ ಸಿಡಿಯುವಂತೆ ಶಬ್ಧ ಹೊರಟು ಭೂಮಿಗೂ

ಆಕಾಶಕ್ಕೂ ಏಕವಾಗಿ ಕಪ್ಪನೆಯ ಕಾಳಿಯು ನಿಂತಳು. ಕಾಳಿಯ ಆ ಅವತಾರವನ್ನು ನೋಡಿದ ಕಮ್ಮಾರರೆಲ್ಲ ಹೆದರಿ ದೂರಕ್ಕೆ ಓಡಲು ಪ್ರಯತ್ನಿಸುತ್ತಾರೆ. ಆಗ ಕಾಳಿಯು ದೂರ ಓಡುವ ಅವಶ್ಯಕತೆ ಇಲ್ಲ. ಇದು ನನ್ನ ವಾಸಸ್ಥಾನವೆಂದು ತಿಳಿಸಿ ಅಲ್ಲಿಯೇ ನೆಲೆ ನಿಲ್ಲುತ್ತಾಳೆ. ಅಂದಿನಿಂದ ಕಾಳಿಗೆ ಪೂಜ್ಯ ಸ್ಥಾನ ಸಿಗುತ್ತದೆ."[7] ಅಂದಿನಿಂದ ಕಮ್ಮಾರರು ಅವಳನ್ನು ಪೂಜಿಸಲು ಪ್ರಾರಂಭಿಸುತ್ತಾರೆಂದು ಈ ಕಥೆ ತಿಳಿಸುತ್ತದೆ.

"ಹಿಂದೆ ಮಲೆನಾಡಿನ ಮಲೆಶಂಕರ ಕಾಡಿನಲ್ಲಿ ಹಿಬ್ರೂಕ, ಬಬ್ರೂಕ ಎನ್ನುವ ಎರಡು ರಾಕ್ಷಸಗಳು ವಾಸವಾಗಿದ್ದವು. ಈ ಎರಡು ರಾಕ್ಷಸಗಳು ಪ್ರಾರಂಭದಲ್ಲಿ ಕಾಡಿನ ಮಧ್ಯದಲ್ಲಿ ಸಂಚರಿಸುತ್ತಿದ್ದವು. ಈ ರಾಕ್ಷಸಗಳು ಪ್ರಾರಂಭದಲ್ಲಿ ಕಮ್ಮಾರರಿಗಾಗಲೀ ಕುಲುಮೆಗಾಗಲೀ ಯಾವ ತೊಂದರೆಯನ್ನು ಮಾಡುತ್ತಿರಲಿಲ್ಲ. ಆದರೆ ಬರುಬರುತ್ತಾ ಕಮ್ಮಾರರು ಮಧ್ಯ ರಾತ್ರಿಯ ವೇಳೆಯಲ್ಲಿಯೂ ಕಬ್ಬಿಣ ತಯಾರಿಕೆಯ ಕೆಲಸದಲ್ಲಿ ತೊಡಗಿದ್ದರಿಂದ ಅವುಗಳ ಸಂಚಾರಕ್ಕೆ ಅಡಚಣೆಯಾಗತೊಡಗಿತು. ಇದರಿಂದ ಸಿಟ್ಟಿಗೆದ್ದ ರಾಕ್ಷಸಗಳು ಕಮ್ಮಾರರು ಕುಲುಮೆ ಬಿಟ್ಟು ಮನೆಗೆ ಬಂದ ವೇಳೆಯಲ್ಲಿ ಕುಲುಮೆಗಳನ್ನು ಕೆಡಿಸುತ್ತಿದ್ದವು ಮತ್ತು ಅನೇಕ ಉಪಟಳಗಳನ್ನು ನೀಡುತ್ತಿದ್ದವು. ಆಗ ಕಮ್ಮಾರರು ಮಲೆಶಂಕರನ ಮೊರೆಹೋದರು. ಆಗ ಮಲೆಶಂಕರನು ತನ್ನ ಹೆಂಡತಿ ಪಾರ್ವತಿಯನ್ನು ಕಾಳಿಯ ರೂಪದಲ್ಲಿ ಕಳುಹಿಸಿದನು. ಕಾಳಿಯು ಆ ಎರಡು ರಾಕ್ಷಸಗಳನ್ನು ಸಂಹರಿಸಿ ಕಮ್ಮಾರರಿಗೆ ರಕ್ಷಣೆ ನೀಡಿದಳು."[8]

"ಪುರಾತನ ಕಾಲದಲ್ಲಿ ಪಾಂಚಾಳರು ಕಾಂತ ಕಲ್ಲಿನ ಕೋಟೆಯೊಂದನ್ನು ಕಟ್ಟಿಕೊಂಡು ಅದರೊಳಗೆ ಕಬ್ಬಿಣ ತಯಾರಿಕೆ, ಲೋಹಶಾಸ್ತ್ರಕ್ಕೆ ಸಂಬಂಧಿಸಿದ ಇತರೆ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಕೋಟೆಯೊಳಗೆ ಪಾಂಚಾಳರಲ್ಲದವರಿಗೆ ಪ್ರವೇಶವಿರಲಿಲ್ಲ. ಆ ಕೋಟೆಯ ಹೆಬ್ಬಾಲಿಗೆ ಸ್ವಯಂ ಚಾಲಿತ ಕದಗಳಿದ್ದವು. ಹೆಬ್ಬಾಗಿಲಿನಲ್ಲಿ ಯಾವಾಗಲೂ ಪಾಂಚಾಳ ಯುವಕರಿಬ್ಬರೂ ಕಾವಲು ಕಾಯುತ್ತಿದ್ದರು. ಆ ಕೋಟೆಯ ಹೆಬ್ಬಾಗಿಲುಗಳು ಸೂರ್ಯನ ಹುಟ್ಟಿನೊಂದಿಗೆ ತನ್ನಿಂದ ತಾನೇ ಮುಚ್ಚಿಕೊಳ್ಳುತ್ತಿದ್ದವು ಮತ್ತು ರಾತ್ರಿ ತನ್ನಿಂದ ತಾನೇ ತೆರೆದುಕೊಳ್ಳುತ್ತಿದ್ದವು. ಕೋಟೆಯೊಳಗೆ ತಯಾರಾಗುತ್ತಿದ್ದ ಲೋಹ ಮತ್ತು ಇತರೆ ಉಪಕರಣಗಳನ್ನು ಚಪ್ಪನ್ನಾರು ದೇಶಗಳಿಗೆ ವಿತರಿಸುತ್ತಿದ್ದರು. ಕೋಟೆಯೊಳಗಿನ ಗುಟ್ಟನ್ನು ತಿಳಿಯಬೇಕೆಂದು ಒಬ್ಬ ವ್ಯಕ್ತಿ ಸತತ ಪ್ರಯತ್ನ ನಡೆಸುತ್ತಿದ್ದ. ಆದರೆ ಸ್ವಯಂಚಾಲಿತ ಬಾಗಿಲುಗಳನ್ನು ಬಿಗಿಯಾದ ಕಾವಲನ್ನು ಹೊಂದಿದ್ದ ಕೋಟೆ ತನ್ನೊಳಗಿನ ಗುಟ್ಟನ್ನು ಬಿಟ್ಟುಕೊಡುತ್ತಿರಲಿಲ್ಲ. ಇದರಿಂದ ರೋಷಗೊಂಡ ವ್ಯಕ್ತಿಯು ಅದರ ಗುಟ್ಟನ್ನು ಅರಿಯಲು ತನ್ನ ಸೌಂದರ್ಯವತಿ ಹರೆಯದ ಮಗಳನ್ನು ಬಿಟ್ಟನು. ಅವಳು ಕಾವಲು ಕಾಯುತ್ತಿದ್ದ ಪಾಂಚಾಳರನ್ನು ಮೋಹಿಸಿದಂತೆ ನಟಿಸತೊಡಗಿದಳು. ಅವರೊಂದಿಗೆ ಹಾಸಿಗೆಯಲ್ಲಿ ಮಲಗತೊಡಗಿದಳು. ನಿಧಾನವಾಗಿ ಕಾವಲುಗಾರರ ದೌರ್ಬಲ್ಯಗಳನ್ನೆಲ್ಲ ತಿಳಿದುಕೊಂಡ ಆಕೆ ಅವರಿಂದ ಕೋಟೆಯನ್ನು ಭೇದಿಸುವ ಗುಟ್ಟನ್ನು ಅರಿತುಕೊಂಡಳು. ಆ ಗುಟ್ಟನ್ನು ಸಂಗ್ರಹಿಸಿ ತನ್ನ ತಂದೆಗೆ ತಿಳಿಸಿದಳು. ಅವಳು ತಿಳಿಸಿದಂತೆಯೇ

ಒಂದು ದಿನ ಕೋಟೆಯ ಸುತ್ತ ದರ್ಭೆಯ ಹುಲ್ಲನ್ನು ಹರಡಿ ಆ ಹುಲ್ಲಿಗೆ ಬೆಂಕಿ ಇಟ್ಟನು. ಬೆಂಕಿಯ ಝಳಕ್ಕೆ ಕೋಟೆ ಕರಗಿತು. ಕೋಟೆಯೊಳಗಿದ್ದ ಪಾಂಚಾಳರೆಲ್ಲ ಬಯಲಿಗೆ ಬಂದರು. ಕೋಟೆಯ ರಕ್ಷಣೆ ಇಲ್ಲದೆ ಅವರು ದಿಕ್ಕಪಾಲಾದರು."[೬]

"ಪರಿಮಳ ಜೋಳನೆಂಬ ರಾಜನ ಬಳಿಗೆ ಒಮ್ಮೆ ವ್ಯಾಸನು ಬಂದು, ನಮ್ಮ ವಂಶಸ್ಥರನ್ನು ರಾಜರ ಬಳಿಯಲ್ಲಿ ಆಚಾರ್ಯರನ್ನಾಗಿ ಮಾಡಿದರೆ ಭೂತ, ಭವಿಷ್ಯತ್ ಮತ್ತು ವರ್ತಮಾನ ಈ ತ್ರಿಕಾಲಗಳನ್ನು ಹೇಳುವನೆಂದು ಹೇಳುತ್ತಾನೆ. ಆಗ ಆ ರಾಜನು ತ್ರಿಕಾಲಗಳನ್ನು, ಪಂಚಕೃತ್ಯಗಳನ್ನು ತಿಳಿಸಿ ಹೇಳುವ ಮಹಾಜ್ಞಾನಿಗಳಾದ ಪಾಂಚಾಳರು ನಮ್ಮಲ್ಲಿ ಆಚಾರ್ಯರಾಗಿರುವುದುಂಟು. ಅದಕ್ಕಾಗಿ ನಿಮ್ಮ ಅಗತ್ಯವಿಲ್ಲವೆಂದು ಹೇಳಿ ಕಳುಹಿಸಿಬಿಟ್ಟ. ಕಾಲಾನಂತರ ಪರಿಮಳ ರಾಜನ ರಾಜ್ಯ ಅವನ ತಮ್ಮನಿಗೆ ರಾಜ್ಯದ ಪಟ್ಟ ಹೋಗುತ್ತದೆ. ತಮ್ಮನ ಆಸ್ಥಾನಕ್ಕೆ ಮತ್ತೆ ವ್ಯಾಸನು ಬಂದು ಹಿಂದಿನಂತೆಯೇ ತಮ್ಮನ್ನು ಆಚಾರ್ಯರನ್ನಾಗಿ ಮಾಡಲು ವಿನಂತಿಸಿಕೊಳ್ಳುತ್ತಾನೆ. ಆದಿಯಿಂದಲೂ ಪಂಚಾಳರೇ ಆಚಾರ್ಯರಾಗಿರುವುದರಿಂದ ತಮಗೆ ಇನ್ನೊಬ್ಬ ಆಚಾರ್ಯನ ಅವಶ್ಯಕತೆಯಿಲ್ಲವೆಂದೂ ಆ ರಾಜನು ತಿಳಿಸುತ್ತಾನೆ. ಇದರಿಂದ ಅಪಮಾನಿತನಾದ ವ್ಯಾಸನು ಕುತಂತ್ರದಿಂದ ಚೋಳ ರಾಜನ ದೂರದ ಸಂಬಂಧಿಯೊಬ್ಬನನ್ನು ಹುಡುಕಿ ಪಟ್ಟ ಕಟ್ಟುವ ಅಪೇಕ್ಷೆಯನ್ನು ಮನದಲ್ಲಿ ಮಾಡಿಕೊಳ್ಳುತ್ತಾನೆ. ಹಾಗೆಯೆ ಅತಿಯಾಸೆಗೆ ಒಳಗಾದ ಈ ಸಂಬಂಧಿಯು ರಾಜ್ಯವನ್ನು ಗೆಲ್ಲುವ ಕುತಂತ್ರವನ್ನು ವ್ಯಾಸನೊಂದಿಗೆ ಸೇರಿ ಮಾಡುತ್ತಾನೆ. ಚೋಳ ರಾಜನ ರಾಜ್ಯಕ್ಕೆ ದಂಡೆತ್ತಿ ಹೋದಾಗ ಬೆಟ್ಟದ ಹಾದಿಯಲ್ಲಿ ಕಬ್ಬಿಣದ ಗುಂಡುಗಳು ತಮ್ಮ ಮೇಲೆ ಬೀಳುವುದನ್ನು ಕಂಡು ಅವರು ಸೋಜಿಗಪಡುತ್ತಾರೆ. ಆದರೆ ಆ ಗುಂಡುಗಳ ಎಸೆದಾಟಕ್ಕೆ ಹೆದರಿದ ವ್ಯಾಸನು ಮತ್ತು ಆತನ ಸೈನ್ಯಪಡೆಯು ತಾವು ಸೋತಿದ್ದಾಗಿ ಸ್ವಯಂ ಘೋಷಿಸಿ ಕೊಳ್ಳುತ್ತಾರೆ. ಇವರ ಮಾತಿಗೆ ಮನ್ನಣೆ ಕೊಟ್ಟು ಗುಂಡಿನ ಎಸೆತವನ್ನು ಚೋಳ ರಾಜನು ನಿಲ್ಲಿಸುತ್ತಾನೆ. ತಾನು ಎಂದೂ ನೋಡದ ಈ ಕಬ್ಬಿಣದ ಗುಂಡುಗಳು ಹೇಗೆ ಉತ್ಪತ್ತಿಯಾದವು ಮತ್ತು ಹೇಗೆ ದೊರೆತದ್ದು ಎಂದು ಕೇಳಲಾಗಿ ತಮ್ಮಲ್ಲಿಯ ಆಚಾರ್ಯನಾದ ಕಮ್ಮಾರನೊಬ್ಬನನ್ನು ತೋರಿಸಿ ಈ ಆಚಾರ್ಯನೇ ಇವುಗಳ ಸೃಷ್ಟಿಕರ್ತನು. ನಮ್ಮ ಆಪದ್ಬಾಂದವನೆಂದೂ ರಾಜನು ತಿಳಿಸುತ್ತಾನೆ. ಕಮ್ಮಾರರನ್ನು ನೋಡಿ ಇವನನ್ನು ಹಿಡಿದುಕೊಂಡರೆ ರಾಜ್ಯವು ತನ್ನ ಕೈವಶವಾಗುವುದೆಂದು ಭಾವಿಸಿದ ವ್ಯಾಸನು ಮೋಸದಿಂದ ಕಮ್ಮಾರನನ್ನು ಹಿಡಿದು ಗಲ್ಲಿಗೇರಿಸುತ್ತಾನೆ. ಕಮ್ಮಾರನ ಸಹಾಯವಿಲ್ಲದ ಚೋಳ ಅರಸನು ಸೋಲನ್ನು ಒಪ್ಪುತ್ತಾನೆ. ಚೋಳ ರಾಜನ ಸ್ಥಾನದಲ್ಲಿ ವ್ಯಾಸನು ಆತನ ದೂರದ ಸಂಬಂಧಿಯೊಬ್ಬನನ್ನು ಕೂರಿಸಿ ಆಡಳಿತದ ಸೂತ್ರವನ್ನು ತನ್ನ ಕೈಯೊಳಗೆ ತೆಗೆದುಕೊಂಡು ಅವರ ವಂಶಸ್ಥರನ್ನೆಲ್ಲ ರಾಜಭ್ರಷ್ಟರನ್ನಾಗಿ ಮಾಡಿ ಹೊರ ಹಾಕುತ್ತಾನೆ".[೭]

**ಚರಿತ್ರೆ ಹೇಳುವ ಕಥೆ:**

ಕ್ರಿ. ಶ. ೧೫ನೇ ಶತಮಾನದ ಪ್ರಾರಂಭದಲ್ಲಿ ೧ನೇ ಭೈರವರಸನು ಕಳಸ ರಾಜ್ಯದ ಒಡೆಯನಾಗಿದ್ದಾಗ ತುಳುನಾಡಿನ ಕಾರ್ಕಳವು ಈ ಮನೆತನದವರ ಒಡೆತನಕ್ಕೆ ಸೇರಿತ್ತು. ಇವರು ಜೈನ ಧರ್ಮಾವಲಂಬಿಗಳಾಗಿದ್ದರು. ಕೆರವಸೆ(ಈಗಿನ ಕಾರ್ಕಳ) ಅವರ ರಾಜಧಾನಿಯಾಗಿತ್ತು. ಜೈನ ಗುರುಗಳಾದ ಲಲಿತಕೀರ್ತಿ ಯತಿಗಳ ಆಶೀರ್ವಾದ ಪಡೆದ ಚಂದ್ರವಂಶಿಯರಾದ ಶ್ರೀಭೈರವೇಂದ್ರ ಅರಸನ ಮಗನಾದ ಶ್ರೀ ವೀರ ಪಾಂಡ್ಯನೆಂಬ ರಾಜನು ಕಾರ್ಕಳದಲ್ಲಿ ಕ್ರಿ.ಶ. ೧೪೩೨ರ ಫೆಬ್ರವರಿ ೧೩ ರಂದು ೪೨ ಅಡಿಗಳಷ್ಟು ಎತ್ತರದ ಬಾಹುಬಲಿಯ ಮೂರ್ತಿಯನ್ನು ಕೆತ್ತಿಸಿ ಪ್ರತಿಷ್ಠಾಪಿಸಿದನು.

ನಯನ ಮನೋಹರವಾದ ಬಾಹುಬಲಿಯ ಆ ಬೃಹತ್ ಮೂರ್ತಿಯನ್ನು ರಾಮ ಸಮುದ್ರ ಸರೋವರದ ತಪ್ಪಲಿನ ಬೆಟ್ಟದಲ್ಲಿಯ ಕಲ್ಲು ಬಂಡೆಯ ಮೇಲೆ ಸ್ಥಾಪಿಸಲಾಗಿದೆ. ಆ ಮೂರ್ತಿಯು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಗರಿಗರಿಯಾದ ಗುಂಗುರು ಕೂದಲು, ತುಂಬಿ ತುಳುಕುವ ಕೆನ್ನೆಗಳು, ಗಂಭೀರವಾದ ಮುಖ ಮುದ್ರೆ, ಶಾಂತವಾದ ಕಣ್ಣುಗಳು, ನೀಲವಾದ ಮೂಗು, ವಿಶಾಲವಾದ ಹಣೆ, ಅಜಾನುಬಾಹು ಕೈಗಳು, ಮೊಣಕಾಲು ಗಂಟನ್ನು ಮೀರುತ್ತಿರುವ ಕೈಬೆರಳುಗಳು, ಆ ಬಾಹುಬಲಿ ಮೂರ್ತಿಯ ಸೊಬಗನ್ನು ಹೆಚ್ಚಿಸಿವೆ. ಪಾದಗಳ ಬುಡದಲ್ಲಿ ಎದ್ದು ತೋರುತ್ತಿರುವ ತಾವರೆಯ ಮೊಗ್ಗುಗಳಿಂದ ಕೂಡಿದ ಬಳ್ಳಿಗಳು ಕೈ ಕಾಲುಗಳನ್ನು ಎರಡೆರಡು ಬಾರಿ ಸುತ್ತಿ ಬಳಕುತ್ತಿರುವುದು ಅತ್ಯಂತ ಚಿತ್ತಾಕರ್ಷವಾಗಿದೆ. ಇಂತಹ ಸುಂದರವಾದ ಶಿಲಾವಿಗ್ರಹವನ್ನು ಕೆತ್ತಿದ ಶಿಲ್ಪಿಗಳ ಮುಖ್ಯಸ್ಥ, ಪ್ರಧಾನ ಸ್ಥಪತಿ "ಬೀರು ಕಲ್ಕುಡ". ಈತ ಹುಟ್ಟಿದ ಊರು ಕೆಲ್ಲಮತ್ತೆ ಮಾರ್ನಾಡು. ಈಗಿನ ಕೆಲ್ಲಪುತ್ತಿಗೆ. ಕೆಲ್ಲುಪುತ್ತಿಗೆ ಕಾರ್ಕಳದಿಂದ ನೈರುತ್ಯ ದಿಕ್ಕಿಗೆ ೧೫ ಕಿ. ಮೀ. ದೂರದಲ್ಲಿದೆ. ಸಮಾರು ೧೦-೧೧ ನೆಯ ಶತಮಾನದಲ್ಲಿ ಇದು ಕೆಲ್ಲ ಮನೆತನದ ಸಾಮಂತ ರಾಜರ ರಾಜಧಾನಿಯಾಗಿತ್ತು. ಇವರು ಕೂಡ ಜೈನ ಧರ್ಮದವರಾಗಿದ್ದರು ಮತ್ತು ಆಳುಪರ ಅಧೀನದಲ್ಲಿದ್ದರು. ಕೆಲ್ಲ ಅರಸನಿಗೆ ಸಂಬಂಧಿಸಿದ ಕೆಲವು ವೀರ ಸ್ಮಾರಕಗಳು ಕೆಲ್ಲ ಪುತ್ತಿಗೆಯಲ್ಲಿ ದೊರಕಿವೆ. ಇಂತಹ ಇತಿಹಾಸ ಪ್ರಸಿದ್ಧವಾದ ಕೆಲ್ಲಪುತ್ತಿಗೆಯಲ್ಲಿ ಬೀರು ಕಲ್ಕುಡನ ಪೂರ್ವಜರು ನೆಲೆಸಿದ್ದರೆಂದು ಸಂಶೋಧಕರಾದ ಪ್ರೊ. ಪಿ.ಎನ್. ನರಸಿಂಹಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.

ಬೀರು ಕಲ್ಕುಡನ ತಂದೆ ಶಂಭುನಾರಾಯಣ. ಅಚ್ಚವ ತಾಯಿ ವೀರವತಿ. ಅವರಿಗೆ ನಾಲ್ಕು ಜನ ಗಂಡು ಮಕ್ಕಳು. ಒಬ್ಬಳು ಮಗಳು. ಕೊನೆ ಮಗ ಬೀರು ತಂಗಿ ಕಾಳಮ್ಮನೊಂದಿಗೆ ಅವಳಿಯಾಗಿ ಹುಟ್ಟಿದವನು. ಶಂಭು ನಾರಾಯಣನ ಪೂರ್ವಜರು ಶ್ರವಣಬೆಳಗೊಳದ ಗೊಮ್ಮಟೇಶ್ವರನ ನಿರ್ಮಾಣ(ಕ್ರಿ.ಶ.೯೮೩) ಮತ್ತು ಬೇಲೂರಿನ ಚನ್ನಕೇಶವ ದೇವಾಲಯ ಕಟ್ಟುವ(ಕ್ರಿ.ಶ. ೧೧೧೭) ಸಂದರ್ಭದಲ್ಲಿ ಶಿಲ್ಪಿ ಕೆಲಸಗಳಲ್ಲಿ ಭಾಗಿಯಾಗಿದ್ದರು ಎಂಬುದನ್ನು ಪಾಡ್ದನಗಳ ಆಧಾರಗಳ ಮೇಲೆ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ ಎಂದು ಡಾ. ಪ್ರಾಲ್ತಾಡಿ ರಾಮಕೃಷ್ಣ ಅಚಾರ್ಯರು ಹೇಳುತ್ತಾರೆ.

ಇದರಿಂದಾಗಿ ಬೀರು ಕಲ್ಕುಡನ ವಂಶಸ್ಥರು ಕಲ್ಲುಪತ್ತಿಗೆಯಲ್ಲಿ ಕೆಲ್ಲರಸರ ಕಾಲದಲ್ಲೇ ನೆಲೆಸಿದ್ದರು ಮತ್ತು ಅವರ ಆಸ್ಥಾನದ ಶಿಲ್ಪಿಗಳಾಗಿದ್ದರು ಎಂದು ಊಹಿಸಬಹುದಾಗಿದೆ.

ಕಾರ್ಕಳದ ಗೊಮ್ಮಟೇಶ್ವರನನ್ನು ಕೆತ್ತಿದ ಶಿಲ್ಪಿ ಬೀರು ಕಲ್ಕುಡ ಈ ಮೂರ್ತಿ ಪ್ರತಿಷ್ಠಾಪನೆಯ ಹೊತ್ತಿಗೆ ಅಂದರೆ ಕ್ರಿ.ಶ. ೧೪೩೨ ರ ಹೊತ್ತಿಗೆ ಅವನು ಇನ್ನೂ ಯುವಕ. ಶಿಲ್ಪಿಯ ಅಪ್ರತಿಮ ಕೆಲಸದಿಂದ ಅರಸ ಬಲು ಸಂತುಷ್ಟನಾಗಿದ್ದರೂ. ಮೂಲತಃ ಮತ್ಸರಿಯೂ ಅಹಂಕಾರಿಯೂ ಆದ ಆತ, ಪಕ್ಕದ ಮೂಡಬಿದ್ರೆ, ವೇಣೂರಿನ ಅರಸರೊಡನೆ ವೈರತ್ವ ಕಟ್ಟಿ ಕೊಂಡಿದ್ದ. ಅವರಲ್ಲಿ ಯಾರಾದರೂ ಇಂತಹ ಇನ್ನೊಂದು ಗೊಮ್ಮಟವನ್ನು ಕೆತ್ತಿಸಿದರೆ ತನ್ನ ಕೀರ್ತಿಗೆ ಧಕ್ಕೆ ಬರಬಹುದೆಂಬ ದೂರಾಲೋಚನೆಯಿಂದ ಗುಟ್ಟಾಗಿ ಶಿಲ್ಪಿಯ ಒಂದು ಕೈ ಒಂದು ಕಾಲನ್ನು ಕಡಿಸಿದನೆಂದು ಪಾಡ್ದನಗಳಲ್ಲಿ ಹೇಳಲಾಗಿದೆ. ಈ ಅವಮಾನವನ್ನು ಸಹಿಸಲಾರದ ಬೀರು ಕಲ್ಕುಡ ತನ್ನ ತಂಗಿ ಕಾಳಮ್ಮ ಸಹಿತ ಪ್ರಾಣತ್ಯಾಗ ಮಾಡಿ ಮಾಯದ ದೈವಗಳಾಗಿ ಕಾರ್ಕಳದ ಭೈರವ ಅರಸನ್ನು ಕಾಡುತ್ತಾರೆ. ಇವರು ಕಲ್ಕುಡ ಮತ್ತು ಕಲ್ಲುರ್ಟಿ ಎಂಬ ಅವಳಿ ದೈವಗಳಾಗಿ ನಾಡಿನಾದ್ಯಂತ ಭಕ್ತರಿಂದ ಈಗಲೂ ಸೇವೆಯನ್ನು ಸಲ್ಲಿಸಿಕೊಳ್ಳುತ್ತಿದ್ದಾರೆ. ಹೀಗೆ ಕಲ್ಕುಡ ಕಲ್ಲುರ್ಟಿ ಮನುಷ್ಯ ತತ್ವದಿಂದ ದೈವತತ್ವದೆಡೆಗೆ ಸಾಗಿದವರು ಮತ್ತು ಇವರು ವಿಶ್ವಕರ್ಮ ಸಮುದಾಯದವರು ಎಂದು ಈ ಭಾಗದ ವಿಶ್ವಕರ್ಮರು, ಕಮ್ಮಾರರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ತುಳುನಾಡಿನಾದ್ಯಂತ ಮಾತ್ರವಲ್ಲ ಕೇರಳ, ಕೊಡಗು, ಚಿಕ್ಕಮಗಳೂರು ಜಿಲ್ಲೆಗಳಲ್ಲಿಯೂ ಜಾತಿ ಮತ ಭೇದವಿಲ್ಲದೆ ಸಕಲ ಭಕ್ತರಿಂದಲೂ ಸೇವೆ ಸಲ್ಲಿಸಿಕೊಳ್ಳುತ್ತಾ, ನಂಬಿದವರ ಬೇಡಿಕೆಗಳನ್ನು ಈಡೇರಿಸುತ್ತಿರುವ ಕಲ್ಕುಡ-ಕಲ್ಲುರ್ಟಿಯವರನ್ನು ಭಕ್ತರು ಪುರಾಣ ಪುರುಷರನ್ನಾಗಿ ಕಲ್ಪಿಸಿಕೊಂಡಿದ್ದಾರೆ. ಶಿಲ್ಪ ದೇವತೆ ವಿಶ್ವಕರ್ಮನ ಮಗನಾದ ವಿಶ್ವರೂಪಾಚಾರ್ಯನೇ ಕಲ್ಕುಡನೆಂದು ಆದಿಮಾಯೆ ಜಗದಂಬೆ ಕಾಳಿಕಾಂಬೆಯೇ ಕಲ್ಲುರ್ಟಿಯಾಗಿ ಅವತಾರವೆತ್ತಿದವರೆಂದು ಜನ ನಂಬಿದ್ದಾರೆ.

**ಪಂಜುರ್ಲಿ ಹಾಗೂ ಕಲ್ಕುರ್ಟಿ ಭೂತದ ಕಥೆ**

**ದಕ್ಷಿಣ ಕನ್ನಡ, ಉಡುಪಿ ಹಾಗೂ ಕಾಸರಗೋಡು ಪ್ರದೇಶಗಳಲ್ಲಿ ಆರಾಧನೆಗೊಳಪಡುವ ಪ್ರಸಿದ್ಧ ಭೂತಗಳ ಕಥೆ:**

ಒಂದು ದಿನ ವೈಕುಂಟದಲ್ಲಿ ಶ್ರೀಮನ್ ನಾರಾಯಣನೊಡನೆ ಬ್ರಹ್ಮಶಿವ ಹಾಗು ಪಾರ್ವತಿಯರು ಮಾತನಾಡುತ್ತಾ ಕುಳಿತಿದ್ದಾಗ ಶ್ರೀ ನಾರಾಯಣನ ಒಂದು ಬೆವರಿನ ಹನಿ ಭೂಲೋಕಕ್ಕೆ ಬೀಳುತ್ತದೆ. ಆ ಬೆವರು ಹನಿಯಿಂದ ಒಂದು ವರಹವು ಸೃಷ್ಟಿಯಾಗಿ ಎದುರು ಬದುರು ಬಂದವರನ್ನೆಲ್ಲ ಹೆದರಿ ಓಡಿಸಹತ್ತಿತು. ಭೂಲೋಕದಲ್ಲಿ ಪಾಪಿಷ್ಟರು ಹೆಚ್ಚಿಗಿದ್ದಾರೆ. ಅವರನ್ನು ಶಿಕ್ಷಿಸಲು ಈ ವರಾಹವನ್ನು ನನ್ನ ಬೆವರಿನಿಂದ ಸೃಷ್ಟಿಸಿದ್ದೇನೆ ಎಂದು ನಾರಾಯಣ ಹೇಳುತ್ತಾನೆ ಮತ್ತು ವರಾಹಕ್ಕೆ ಭೂಲೋಕಕ್ಕೆ ಹೋಗಿ ಪಾಪಿಗಳಿಗೆ ಕಷ್ಟ ಕೊಡಲು ಹೇಳುತ್ತಾನೆ. ಆಗ ವರಾಹವು ನಾರಾಯಣನನ್ನು ಕುರಿತು ನಾನು ಭೂಲೋಕಕ್ಕೆ ಹೋಗಿ ಮನುಷ್ಯರನ್ನು ಹಿಡಿದಾಗ ಅವರು ನನ್ನನ್ನು ನಿನ್ನ ಹೆಸರೇನು?

ಎಂದು ಕೇಳಿದರೆ ಏನು ಹೇಳಲಿ? ಎಂದು ಕೇಳಿದಾಗ ನಾರಾಯಣನು ಅದಕ್ಕೆ ನನ್ನ ಹೆಸರು "ಪಂಜುರ್ಲಿ ಭೂತ" ಎಂದು ಹೇಳು ಎನ್ನುತ್ತಾನೆ. ತುಳು ಭಾಷೆಯಲ್ಲಿ ಪಂಜು ಎಂದರೆ ಹಂದಿ. ಈ ಭೂತ ಮಲೆನಾಡಿನಲ್ಲಿರುವ ಸುಬ್ರಹ್ಮಣ್ಯಕ್ಕೆ ಬಂದು ನಮಸ್ಕರಿಸಿ ಮುಂದೇನು ಮಾಡಬೇಕು ನೀನು ದಾರಿ ತೋರಿಸು ಎಂದು ಸುಬ್ರಹ್ಮಣ್ಯನನ್ನು ಕೇಳಿಕೊಂಡಾಗ ಸುಬ್ರಹ್ಮಣ್ಯನ ದೇವಸ್ಥಾನದ ಗಂಟೆ ಬಾರಿಸುತ್ತದೆ. ಅದನ್ನೇ ಶುಭ ಶಕುನವೆಂದು ತಿಳಿದು ಅಲ್ಲಿಂದ ಹೊರಟು ಜಾನುವಾರುಗಳಿರುವ ಸ್ಥಳಕ್ಕೆ ಬಂದು ಒಂದು ರಾತ್ರಿಯಲ್ಲಿ ಒಟದ ಕೋಣವನ್ನು ಹಿಡಿದುಕೊಂಡಿತು. ಕೋಣಗಳು ಕಿರುಚಾಡಿದ್ದನ್ನು ಕಂಡ ಯಜಮಾನ ನೋಡಿದಾಗ ಕೋಣಗಳೆರಡೂ ನೆಲಕ್ಕೆ ಬಿದ್ದಿದ್ದವು. ಕೋಣಗಳಿಗೆ ಈ ಸ್ಥಿತಿ ಬರಲು ಕಾರಣವೇನು ಎಂದು ಜೋಯಿಸರನ್ನು ಕೇಳಲು ಕೋಣಗಳಿಗೆ ಹಂದಿ ಮುಖದ ಭೂತದ ಉಪದ್ರವ ಇರುವುದಾಗಿ ತಿಳಿಸಿದರು ಮತ್ತು ಆ ಭೂತಕ್ಕೆ ಬಲಿ ಕೊಟ್ಟು ಗುಡಿ ಕಟ್ಟಿಸಿಕೊಟ್ಟರೆ ಕೋಣಗಳಿಗೆ ಆರೋಗ್ಯವಾಗುತ್ತದೆ ಎಂದು ಹೇಳುತ್ತಾರೆ. ಕೋಣಗಳನ್ನು ಸಾಕಿದ ಯಜಮಾನ ಜೋಯಿಸರು ಹೇಳಿದಂತೆ ಭೂತಕ್ಕೆ ಹರಕೆ ಹೊತ್ತುಕೊಳ್ಳುತ್ತಾನೆ. ಕೋಣಗಳು ಮೊದಲಿನ ಸ್ಥಿತಿಗೆ ಬರುತ್ತವೆ. ಆಗ ಬಲ್ಲಾಳರು ಭೂತದ ಗುಡಿ ಕಟ್ಟಲು ಸ್ಥಳವನ್ನು ಗುರುತಿಸಿ ಕಟ್ಟಿಗೆ ತರಲು ಕೆಲವರನ್ನು ಕಾಡಿಗೆ ಕಳುಹಿಸುತ್ತಾನೆ. ಕೊರಗ ಆಚಾರಿಯ ಮೈ ಮೇಲೆ ಭೂತ ಪ್ರವೇಶಿಸುತ್ತದೆ. ಆಗ ಬಲ್ಲಾಳರು ನೀನು ಯಾರು ಎಂದು ಪ್ರಶ್ನಿಸಿದಾಗ ನಾನು ಕಲ್ಲುರ್ಟಿ ಭೂತವೆಂದು ಮತ್ತು ನಾನು ಈ ಮರದಲ್ಲಿ ವಾಸಿಸುತ್ತಿದ್ದೇನೆ. ಈ ಮರವನ್ನು ಬಿಟ್ಟು ಬೇರೆ ಮರವನ್ನು ಕಡಿದುಕೊಳ್ಳಬೇಕು ಮತ್ತು ನನಗೆ ಈಗ ಬಾಯಾರಿಕೆ ಆಗಿದೆ ಕುಡಿಯಲು ಏನಾದರು ಕೊಡಿ ಎಂದು ಕೇಳಿಕೊಳ್ಳುತ್ತದೆ. ಆ ಭೂತಕ್ಕೆ ಕುಡಿಯಲು ಎಳನೀರು ಕೊಟ್ಟಾಗ ಅದು ಕೊರಗ ಆಚಾರಿಯನ್ನು ಬಿಟ್ಟು ಹೋಗುತ್ತದೆ. ಬಲ್ಲಾಳರು ಪಂಜುರ್ಲಿ ಭೂತಕ್ಕೆ ಒಂದು ಮಂಚ ತಯಾರಿಸಿ ಕಮ್ಮಾರನಿಂದ ಖಡ್ಗ, ಒಳೆ, ಗುರಾಣಿ ಮತ್ತಿತರ ಆಭರಣಗಳನ್ನು ಮಾಡಿಸಿಕೊಡುತ್ತಾರೆ ಮತ್ತು ಬಲ್ಲಾಳರು ಪಂಜುರ್ಲಿ ಭೂತದ ಉತ್ಸವಕ್ಕೆ ಸಕಲ ಸಿದ್ಧತೆಗಳನ್ನು ಮಾಡುತ್ತಾರೆ. ಮತ್ತು ಭೂತವನ್ನು ಆರಾಧಿಸಿ ಅದನ್ನು ತೃಪ್ತಿ ಪಡಿಸುತ್ತಾರೆ.

**ಸಿದ್ದಪ್ಪಾಜಿ ಕಥೆ:**

ಕನ್ನಡ ಜಾನಪದ ಸಾಹಿತ್ಯದಲ್ಲಿ ಪಾಂಚಾಳ ಕಮ್ಮಾರರ ಸಿರಿವಂತಿಕೆಯನ್ನು ವರ್ಣಿಸುವ ಕಥೆ ಸಿದ್ದಪ್ಪಾಜಿಯ ಹಲಗೂರು ಪವಾಡದ ಕಥೆಯಲ್ಲಿದೆ. ಮಂಟೇಸ್ವಾಮಿ ಕಾವ್ಯದಲ್ಲಿ ಈ ಕಥೆಯನ್ನು ಕಾಣುತ್ತೇವೆ. ಮಂಟೇಸ್ವಾಮಿಯ ಶಿಷ್ಯರಲ್ಲಿ ಸಿದ್ದಪ್ಪಾಜಿ ಪವಾಡ ಪುರುಷ. ಸಿದ್ದಪ್ಪಾಜಿಯನ್ನು ಸಿಡಿಲುಮರಿ ಎಂಬುದಾಗಿ ಜನಪದರು ವರ್ಣಿಸಿದ್ದಾರೆ, ಹತ್ತೊಂಬತ್ತರ ಹರೆಯದ ಸಿದ್ದಪ್ಪಾಜಿ ತನ್ನ ಕುಲದ ಹಲಗೂರು ಪಾಂಚಾಳರ ಮನೆಗೆ ಕಬ್ಬಿಣದ ಭಿಕ್ಷೆಗೆ ಹೋಗುತ್ತಾರೆ. ಅವರು ಹಲಗೂರಿಗೆ ಹೋಗಿ ಮುಟ್ಟಿದಾಗ ಮಾರಿ ಗರ್ಜಿಸಿತು. ಹಲಗೂರು ನಡುಗಿತು ಎಂದು ಜನಪದರು ವರ್ಣಿಸುತ್ತಾರೆ.

ಹಲಗೂರು ಪಾಂಚಾಳರ ಕೇರಿಯಲ್ಲಿ ಏಳುನೂರೈವತ್ತು ಒಕ್ಕಲು. ಇವರಿಗೆ ಏಳು ಜನ ಒಡೆಯರು. ಹಲ್ಲೋಜ, ಚನ್ನೋಜ, ಬೋಲೋಜ, ಬೆಟ್ಟೋಜ, ಕಾಳೋಜ, ಲಿಂಗೋಜ, ನರಸೋಜ, ಈ ಏಳು

ಮಂದಿ ಧಣಿಗಳು ಕೂಡಿ ಪಗಡೆಯಾಡುತ್ತಿದ್ದರು. ಪಗಡೆಯ ಕೈ ನಿಲ್ಲಿಸಿ ಸಣ್ಣಕ್ಕಿ ಬೊನಮೇದ್ದು, ಸರಳೆಮ್ಮೆ ನೊರೆಹಾಲು ಕುಡಿದು, ಚೆನ್ನಾಗಿ ಪಟ್ಟಣದ ರಾಮಪುಡಿ ಸಕ್ಕರೆ ಊಟ ಮಾಡಿ

ಗಂಟಲನ್ನು ವಾಲಾಡಿಸಿದರು. ಅಷ್ಟರಲ್ಲಿ ಸಿದ್ದಪ್ಪಾಜಿ ಭಿಕ್ಷೆಗೆ ಬರುವುದು ಕಂಡಿತು.

ಬೀದಿ ಬೀದಿಯಲ್ಲಿ ಭಿಕ್ಷೆ ಬೇಡುತ್ತಾ "ದಾನವಕೊಡಿರಯ್ಯಾ ಹಲಗೂರ ಪಂಚಾಳರಿರಾ ಭಿಕ್ಷವ ಕೊಡಿರಯ್ಯಾ ಲಕ್ಷ್ಮೀಪತಿಗಳಿರಾ" ಎಂದು ಸಿದ್ದಪ್ಪಾಜಿ ಕೇಳುತ್ತಾರೆ. ಅವರನ್ನು ಕಂಡ ಏಳು ಧಣಿಗಳು ಕಾಳಮ್ಮನ ಕಾವಲು, ತೆಂಕಲಲ್ಲಿ ವೀರಭದ್ರನ ಕಾವಲು, ಬಡಗಲಲ್ಲಿ ಮೂರು ಕೊಂಬಿನ ಬಸವನ ರಕ್ಷೆ ಇರುವಾಗ ಯಾರು ಬಿಟ್ಟರೋ ಈ ಕಾಡು ಗೊರವನಾ ಎಂದು ಸಿದ್ಧಪ್ಪಾಜಿಯನ್ನು ಅವಮಾನಿಸುತ್ತಾರೆ. ಪಾಂಚಾಳರ ಊರಿನಲ್ಲಿ ಕಬ್ಬಿಣದ ಭಿಕ್ಷೆಯ ಹೊರತು ಬೇರೇನು ಸಿಗಲಾರದು. ನಾವು ಏಳುನೂರೈವತ್ತು ಒಕ್ಕಲು, ಏಳು ಮಂದಿ ದೊರೆಗಳು ಕಬ್ಬಿಣದ ಭಿಕ್ಷೆ ಕೊಟ್ಟಲ್ಲಿ ಹಿಡಿಯುವಂತ ಶಕ್ತಿ ನಿನ್ನಲ್ಲಿ ಇದೆಯೋ ಎಂದು ಪ್ರಶ್ನಿಸಿ ಭಿಕ್ಷೆ ನೀಡಲು ಅಣಿಯಾಗುತ್ತಾರೆ.

ಹೆಗ್ಗಲುಮೆಯನ್ನು ಸಾರಿಸಿ ಗೂಡಿಸಿ ರಂಗವಲ್ಲಿ ಇಟ್ಟು ನೇಗಿಲ ತುಂಡು ಗಾತ್ರದ ಕಬ್ಬಿಣವನ್ನು ಒಲೆಗೆ ಹಾಕಿದರು. ಇದ್ದಲು ಸುರಿದು, ನೆಲ್ಲಹೊಟ್ಟು ಸುರಿದು ಪಾಂಚಾಳರು ತಿದಿ ಒತ್ತಿದರು. ನಿಗಿನಿಗಿ ಕೆಂಡವಾಯಿತು. ಕಬ್ಬಣದ ತುಂಡನ್ನು ನೂರು ಮಂದಿ ಪಂಚಾಳರು "ಕೊಂಗಿಕ್ಕಳದಲ್ಲಿ" ಎತ್ತಿದರು. "ಹಿಡಿಯೋ ಪರದೇಶಿ ನಿನ್ನ ಎರಡೂ ಕೈಯ" ಎಂದಾಗ ಸಿದ್ದಪ್ಪಾಜಿ ಕಣ್ಣು ಮುಚ್ಚಿದರು. ಗುರುಧ್ಯಾನ ಮಾಡಿದರು. ಎರಡೂ ಕೈಯನ್ನು ಮುಂದಕ್ಕೆ ಚಾಚಿದರು, ಕಬ್ಬಿಣ ಕೈ ಮೇಲೆ ಬಿತ್ತು. ಎತ್ತಿ ಕಣ್ಣಿಗೊತ್ತಿಕೊಂಡರು. ಆ ಕಬ್ಬಿಣ ಮೂರು ತುಂಡಾಗಿ ಮುರಿದು ಜೋಳಿಗೆ ಸೇರಿಕೊಂಡಿತು. ಸಿದ್ಧಪ್ಪಾಜಿ ಅಲ್ಲಿ ಪವಾಡ ಮಾಡಿ ಹಲಗೂರಿನ ಪಾಂಚಾಳರನ್ನು ಬೆಚ್ಚಿ ಬೀಳಿಸುತ್ತಾರೆ.

ಆದರೂ ಪಾಂಚಾಳ ದಣಿಗಳು ಬೆಚ್ಚಲಿಲ್ಲ. ಕಾದ ಕುಲುಮೆ ಮತ್ತೆ ಸಿದ್ಧವಾಯಿತು. ಎತ್ತಿನ ಗಾತ್ರದ ಕಬ್ಬಿಣದ ತುಂಡು ಏಳು ದಿನ ಕಾದಿತ್ತು. ಏಳು ದಿನ ಕಾದ ಕಬ್ಬಿಣದ ಗಟ್ಟಿಯನ್ನು ಸಿದ್ದಪ್ಪಾಜಿ ಎತ್ತುವುದನ್ನು ನೋಡಲು ಕೇರಿಯ ಜನರೆಲ್ಲಾ ನೆರೆದಿದ್ದರು. ಸಿದ್ದಪ್ಪಾಜಿ ಒಮ್ಮೆ ಎಡಪಾದದಲ್ಲಿ ಕಬ್ಬಿಣವನ್ನು ಮೆಟ್ಟಿದಾಗ ಎತ್ತಿನ ಗಾತ್ರದ ಆ ತುಂಡು ಹಲಗೂರು ಚಿನ್ನಾಪುರದ ಹೊಳೆಗೆ ಹೋಗಿ ಬೀಳುತ್ತದೆ.

ಏಳು ಮಂದಿ ಪಾಂಚಾಳ ದಣಿಗಳ ಕಣ್ಣು ಕೆಂಪೇರುತ್ತದೆ. ಅವರು ಪವಾಡವನ್ನು ಒಡ್ಡಿ ಇನ್ನು ಅವನು ಇಲ್ಲದಂತೆ ಮಾಡಿಬಿಡಬೇಕೆಂದು ಬಗೆದರು. ಏಳು ಸಾವಿರ ವರಹದ ಆನೆಯ ಗಾತ್ರದ ಪಂಚಲೋಹದ ತುಂಡಿನತ್ತ ಅವರ ದೃಷ್ಟಿ ಹೊರಳಿತು. ಅದನ್ನು ಹನ್ನೆರಡು ದಿನ ಕಾಯಿಸಿದರು. ಅದನ್ನು ಕಾಯಿಸಲು ಬಸವನ ಬೆಟ್ಟದಿಂದ ಏಳು ಸಾವಿರ ಖಂಡುಗ ಬಿದಿರಿನ ಇದ್ದಿಲು ಬಂದಿತ್ತು. ರಾಗಿಯ ಕಣದಗಲದ ಹೆಗ್ಗುಲುಮೆ ಊರ ಮೂಡಲ ಸಣ್ಣ ಹಳ್ಳದ ಅಂಚಿನಲ್ಲಿ ಹದಗೊಂಡಿತ್ತು. ಕುಲುಮೆ ಉರಿಸಲು ಕೋಣದ ತಿದಿಯೇಬೇಕಾಯಿತು. ಏಳುನೂರ ಐವತ್ತು ಒಕ್ಕಲು ತಿದಿಯೊತ್ತಿದರು.

ಹನ್ನೆರಡು ದಿನಗಳವರೆಗೆ ಆ ಗೊರವವನ್ನು ಬಂಧನದಲ್ಲಿ ಇರಿಸಿ ಎಂದು ಆದೇಶ ನೀಡಿದರು. ಊರ ದೇವತೆ ಕಾಳಮ್ಮನ ಸುತ್ತ ಏಳುಸುತ್ತಿನ ಬಿಚ್ಚುಗತ್ತಿ ಪಹರೆ ಕಾದಿತ್ತು. ಕಾಳಿಯು ಸೌಮ್ಯ ಸ್ವರೂಪ ತಾಳಿ ಸ್ವಾಮಿಯ ಪಾದಗಳನ್ನು ತನ್ನ ತೊಡೆಯಮೇಲಿಟ್ಟು, ಒತ್ತಿ ಓಲೈಸಿದಳು. ಸಿದ್ದಪ್ಪಾಜಿ ತನ್ನ ಗುರು ಮಂಟೇಸ್ವಾಮಿಯನ್ನು ಸ್ಮರಿಸಿಕೊಂಡರು. ಹಲಗೂರ ಹಾದಿಯಲ್ಲಿ ಬರಿಗಾಲ ನಡಿಗೆಯಲ್ಲಿ ಸ್ವಾಮಿ ನಡೆದು ಬಂದರು. ಕಾವಲಿನವರಿಗೆ ಮಾಯದ ನಿದ್ದೆಕೊಟ್ಟರು. ಶಿಷ್ಯನನ್ನು ಕರೆದು ಹೊರಗೆ ನಡೆದರು.

ಕುಲುಮೆಯಲ್ಲಿ ಉರಿಯುತ್ತಿರುವ ಆನೆ ಗಾತ್ರದ ಕಬ್ಬಿಣದ ತುಂಡು ಸಿದ್ಧವಾಗಿತ್ತದೆ. ಅಷ್ಟರಲ್ಲಿ ಸಿದ್ದಪ್ಪಾಜಿ ಗುಡಿಯೊಳಗಿಲ್ಲವೆಂದು ಸುದ್ದಿ ಬಂತು. "ಎಲ್ಲಿದ್ದರೂ ಹುಡುಕಿ ತನ್ನಿ ಧಣಿಗಳ ಅಪ್ಪಣೆಯಾಯಿತು". ಸಿದ್ದಪ್ಪಾಜಿ ನಸುಗುತ್ತಾ ಜನಗಳ ಮಧ್ಯ ನಿಂತಿದ್ದರು. ದಾರಿ ಸರಿಸಿ ಬಂದು ಪಂಚಲೋಹದ ಗಟ್ಟಿಯ ಮೇಲೆ ಮಲಗಿದರು. ಮಲಗಿದ ಮೇಲೆ ಅವರ ಮೇಲೆ ಇದ್ದಲು ಸುರಿದರು ಬಿಡದೇ ಕೋಣದ ತಿದಿಯನ್ನೊತ್ತಿದರು. ತಿದಿಯೊತ್ತಿ ಒತ್ತಿ ಸಾಕಾಗಿ ಒಬ್ಬೊಬ್ಬರಾಗಿ ಬಳಲಿ ಕುಸಿದರು. "ಲೋಹದ ಗಟ್ಟಿ ನೀರಾಗಿ ಹರಿದು ಹೋಗಲಿ ಎಂದು ಸಿದ್ದಪ್ಪಾಜಿ ನುಡಿದನು. ಕಾದ ಗಟ್ಟಿ ನೀರಾಗಿ ಹಲಗೂರು ಬೀದಿಯಲ್ಲಿ ಹರಿದು ಹೋಯಿತು.

ಆದರೂ ಏಳು ಮಂದಿ ಧಣಿಗಳ ಮನಸ್ಸು ಕರಗಲಿಲ್ಲ . ಇನ್ನಷ್ಟು ಕಠಿಣ ಪರೀಕ್ಷೆ ನಡೆಸಿದರು. ಮೂರು ತಿಂಗಳು ತುಂಬಿತು ಕಬ್ಬಿಣದ ಭಿಕ್ಷೆ ದೊರೆಯಲಿಲ್ಲ. ಸಿದ್ದಪ್ಪಾಜಿ ಸಿಟ್ಟುಗೊಂಡರು. "ಹಲಗೂರಿಗೆ ವಾಂತಿ ಭೇದಿ ಹಬ್ಬಲಿ" ಎಂದು ಶಾಪವಿತ್ತರು. ರೋಗ ಹರಡಿ ಊರಿಗೆ ಬಂದಾಗ ಪಾಂಚಾಳರ ಧಣಿಗಳು ಧೈರ್ಯಗೆಟ್ಟರು. ಸೋತು ಶರಣಾಗಿ ಸಿದ್ದಪ್ಪಾಜಿಯ ಅಡಿಗೆರಗಿದರು. ಸಿದ್ದಪ್ಪಾಜಿ ಜಲಭಾವಿಯಲ್ಲಿ ಪವಡಿಸಿ ಲೋಕಕ್ಕೆ ಮಂಗಳ ಕೋರಿದರು. ಚಿಕ್ಕಲೂರಿನ ಅವರ ತಪೋ ಭೂಮಿಯಲ್ಲಿ ವರ್ಷಕ್ಕೊಮ್ಮೆ ಆರು ದಿನಗಳ ಕಾಲ ಸಿದ್ದಪ್ಪಾಜಿಯ ಜಾತ್ರೆ ನಡೆಯುತ್ತದೆ. ಹಲಗೂರು ಪವಾಡದ ಕಥೆ ಕಮ್ಮಾರ ವೃತ್ತಿಯ ಪಾಂಚಾಳರ ವೈಭವನ್ನು ಸಾರುತ್ತದೆ.

" ಕಮ್ಮಾರನ ದುಡುಮೆಯನ್ನು ಮೆಚ್ಚಿ ಲಕ್ಷ್ಮಿ(ಹಣ, ಸಂಪತ್ತು)ಯು ಆವನಲ್ಲಿಯೇ ನೆಲೆಸುವುದೆಂದು ನಿರ್ಧರಿಸಿಕೊಂಡು ಕಮ್ಮಾರನ ಮನೆಗೆ ಬರುತ್ತಾಳೆ. ಲಕ್ಷ್ಮಿ ಮನೆಗೆ ಬಂದದ್ದನ್ನು ಕಂಡು ತುಂಬಾ ಸಂತೋಷಗೊಂಡ ಕಮ್ಮಾರನು ಆಕೆಯನ್ನು ಕರೆದು ಮನೆಯಲ್ಲಿ ಕುಳ್ಳರಿಸಿ ಅವಳಿಗೆ ಅಲಂಕಾರ ಮಾಡಿ ಪೂಜಿಸಿದ. ಇನ್ನೇನು ಲಕ್ಷ್ಮಿ ಸಂತುಷ್ಟಳಾದಳು ಎನ್ನುವಷ್ಟರಲ್ಲಿ ಅಲಂಕಾರಿಕ ಲಕ್ಷ್ಮಿಯನ್ನು ಕಂಡ ಕಮ್ಮಾರನು ಆಕೆಯನ್ನು ಪ್ರೇಮಿಸುವ ಆಸೆಯಿಂದ ಲಕ್ಷ್ಮಿಯನ್ನು ಹಿಡಿದುಕೊಳ್ಳಲು ಹೋದ. ಇದರಿಂದ ಕೋಪಗೊಂಡ ಲಕ್ಷ್ಮಿಯು, ನೀನೆಷ್ಟು ದುಡಿದರೂ ನನ್ನನ್ನು ಒಲಿಸಿಕೊಳ್ಳಲಾರೆ ಎಂದು ಶಾಪವಿತ್ತು ನೆರೆಮನೆಗೆ ಹೋಗುತ್ತಾಳೆ. ಆ ಮನೆಯ ಶೆಟ್ಟಿ (ಕೋಮಟಿ) ಯು ಆಕೆಯನ್ನು ದೇವರ ಮನೆಗೆ ಕರೆದುಕೊಂಡು ಹೋಗಿ ಅಲಂಕರಿಸಿ ಪೂಜಿಸಿದ. ಪೂಜೆ ಮುಗಿದ ನಂತರ ನಾನು ಹೋಗುವೆ ಎಂದು ಲಕ್ಷ್ಮಿ ಎದ್ದ ತಕ್ಷಣ ಶೆಟ್ಟಿಯು ತನ್ನ ಪಕ್ಕದಲ್ಲಿಯೇ

ಇದ್ದ ಒನಕೆಯಿಂದ ಲಕ್ಷ್ಮಿಯ ಎರಡೂ ಕಾಲಿಗೆ ಜೋರಾಗಿ ಹೊಡೆದನು. ಕಾಲು ಮುರಿಸಿಕೊಂಡ ಲಕ್ಷ್ಮಿಯು ಹೊರಗೆ ಹೋಗಲಾರದೆ ಶಪಿಸತೊಡಗಿದಳು. ಅವಳ ಅಸಹಾಯಕತೆ ಕಂಡು ಶೆಟ್ಟಿಯು ಸಂತುಷ್ಟನಾಗಿ ತಾಯಿ ನಿನ್ನ ಸ್ಥಾನ ನನ್ನ ಮನೆ. ಇದರಾಚೆಗೆ ನೀನು ಹೋಗಬಾರದೆಂದೇ ನಾನು ಈ ರೀತಿ ಮಾಡಿದ್ದು ಎಂದು ತಿಳಿಸಿದ. ಅಂದಿನಿಂದ ಲಕ್ಷ್ಮಿ ಶೆಟ್ಟರ ಮನೆಯ ಪಾಲಾದಳು. ಒಲಿದು ಬಂದ ಲಕ್ಷ್ಮಿಯನ್ನು ಹೊರದೂಡಿದ ಕೀರ್ತಿ ಮಾತ್ರ ಕಮ್ಮಾರನಿಗೆ ಬಂದಿತು."೮

**೬.೨. ಪದ್ಯ ಸಾಹಿತ್ಯ:**

ಮೌಖಿಕ ಪರಂಪರೆಯಲ್ಲಿಯೇ ಮುಂದುವರೆಯುತ್ತಿರುವ ಸಮುದಾಯಗಳ ಪದ್ಯ ಸಾಹಿತ್ಯ ಅನೇಕ ಹೊಸ ಹೊಸ ವಿಚಾರಗಳನ್ನು ಸೇರಿಸಿಕೊಳ್ಳುತ್ತ ನಿಂತ ನೀರಾಗದೇ ಹರಿಯುವ ಹಳ್ಳ ಹೊಳೆಯಾಗಿ ಮಾರ್ಪಾಡಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಈ ಪದ್ಯ ಸಾಹಿತ್ಯದಲ್ಲಿ ಹೆಂಗಸರ ಹಾಡುಗಳು, ಗಂಡಸರ ಹಾಡುಗಳು, ಶಿಶುಗೀತೆಗಳು, ತ್ರಿಪದಿಗಳು, ಭಕ್ತಿ ಹಾಡುಗಳು, ಶಾಸ್ತ್ರದ ಹಾಡುಗಳು, ಆರತಿ ಹಾಡುಗಳು, ಸುಗ್ಗಿ ಕುಣಿತದ ಹಾಡುಗಳು, ಹೀಗೆ ಹತ್ತು ಹಲವಾರು ಪ್ರಕಾರದ ಪದ್ಯ ಸಾಹಿತ್ಯವನ್ನು ಕಾಣುತ್ತೇವೆ. ಈ ಜನಪದ ಸಾಹಿತ್ಯ ಅತ್ಯಂತ ವಿಶಾಲವಾದದ್ದು. ಏನು ಬೇಕು ಅದೆಲ್ಲವೂ ಈ ಪದ್ಯ ಸಾಹಿತ್ಯದಲ್ಲಿ ದೊರೆಯುತ್ತದೆ. "ಅತ್ತೆ-ಸೊಸೆ, ತಾಯಿ-ಮಗಳು, ಅಣ್ಣ-ತಂಗಿ, ಅತ್ತಿಗೆ-ನಾದಿನಿ, ಮೈದುನರು, ಸವತಿ, ಓರಗಿತ್ತಿಯರು, ಪತಿ ಪತ್ನಿಯರು, ತಂದೆ ಮಗ, ತವರು, ಹೆಣ್ಣು ಜನ್ಮ, ಮಕ್ಕಳು, ಮೊಮ್ಮಕ್ಕಳು, ಬಸಿರು-ಬಯಕೆ, ಬಡತನ, ಸಿರಿತನ, ವಿಧವೆ ಗೋಳು, ಗೆಣೆಯ-ಗೆಣತಿಯರು, ಸಾವು ನೋವು, ಬಾಣಂತಿತನ, ವೃತ್ತಿ, ನೆಂಟರು, ಬಂಜೆ, ಪ್ರೇಮ-ದ್ವೇಷ, ಮುನಿಸು-ಜಗಳ, ಒಂದೇ ಎರಡೇ ನೂರಾರು ಸಂಗತಿಗಳು ಇಡೀ ಹಳ್ಳಿಯ ಬದುಕಿನ ಉಸಿರು ಹಾಡಾಗಿ ಹೊರ ಹೊಮ್ಮುತ್ತದೆ. ಹಾಡಿನ ಜೋಡಿ ಇಲ್ಲದೆ ಯಾವ ಕೆಲಸವೂ ಸಾಗುವುದಿಲ್ಲ. ಕುಟ್ಟುವುದು, ಬೀಸುವುದು, ಮೊಸರು ಕಡೆಯುವುದು, ಅಡಿಕೆ, ತೆಂಗು ಸುಲಿಯುವುದು, ಹಚ್ಚೆ ಹೊಯ್ಯುವುದು, ಮಗು ಮಲಗಿಸುವುದು, ಯಾವ ಕೆಲಸವೇ ಆಗಿರಲಿ ಹಾಡು ಕಲಿತರೆ ಕೆಲಸ ಸಾರಾಗವಾಗಿ ಸರಿಯುತ್ತದೆ. ಬೇಸಾಯ, ನೆಯ್ಗೆ, ಕಮ್ಮಾರಿಗೆ, ಪತ್ತಾರಿಕೆ, ಬಡಗಿತನ ಮುಂತಾದ ಸಂದರ್ಭಗಳಲ್ಲದೇ ಹಬ್ಬ ಹರಿದಿನ, ಮದುವೆ ಯಾವ ಶುಭಕಾರ್ಯವೇ ಆಗಲಿ ಶಾಸ್ತ್ರವೇ ಆಗಲಿ, ದೇವರ ಕಾರ್ಯವೇ ಆಗಲಿ, ಹಾಡಿನಿಂದ ಮೊದಲಾಗಬೇಕು ಹಾಡಿನಿಂದ ಅಂತ್ಯಗೊಳ್ಳಬೇಕು"೯.

ಉಡುಪಿ ಮತ್ತು ಮಂಗಳೂರು ಪರಿಸರದ ಕಮ್ಮಾರರಲ್ಲಿ ಒಂದು ಕಾಲಕ್ಕೆ ವಿಶಿಷ್ಟವಾದ ಪದ್ಯಸಾಹಿತ್ಯ ಮೌಖಿಕ ಸಂಪ್ರದಾಯದಲ್ಲಿ ಕಂಡು ಬರುತ್ತಿತ್ತು. ಅದು ತುಳು ಭಾಷೆಯಲ್ಲಿತ್ತು ಎಂದು ತಿಳಿಯುತ್ತದೆ. ಇತ್ತಿತ್ತಲಾಗಿ ಮಂಗಳೂರು ಹಾಗೂ ಉಡುಪಿ ಜಿಲ್ಲೆಯಲ್ಲಿರುವ ಕಮ್ಮಾರರಲ್ಲಿಯ ತಾಳ ಮದ್ದಳೆ, ಯಕ್ಷಗಾನದ ಪದ್ಯಗಳನ್ನು ಬಿಟ್ಟರೆ ಅವರಲ್ಲಿ ಉಳಿದಂತೆ ಪದ್ಯ ಸಾಹಿತ್ಯ ಕಂಡುಬರುವುದಿಲ್ಲ ಕೆಲವರು ಪಾಡ್ದನೆಗಳನ್ನು ಹಾಡುವವರು ಅಪರೂಪಕ್ಕೆ ಕಂಡು ಬರುತ್ತಾರೆ.

ಕುಸುರಿ ಕಲೆಯ ಚಿನಿವಾರರು ನಾವು
ಮರದ ದಿಮ್ಮಿಗೆ ರೂಪ ಕೊಡುವ ಬಡಗಿಗಳು ನಾವು
ನಾಡಿಗನ್ನವೀಯಲು ದುಡಿವ ಕಮ್ಮಠಿಗರು ನಾವು
ಕಮ್ಮಾರರು ನಾವು ಶಿಲ್ಪ ಕಲೆಯ ನೈಪುಣ್ಯರು ನಾವೇ ನಾವು...

ದೈವಶಿಲ್ಪಿ ವಿಶ್ವಕರ್ಮ ದೇವಾದಿ ದೇವತೆಗಳಿಂದಲೂ ಆಧರಿಸಿಕೊಳ್ಳುತ್ತಿದ್ದ, ಆರಾಧಿಸಿಕೊಳ್ಳುತ್ತಿದ್ದ ಮಹಾನ್ ಪುರುಷ. ತನ್ನ ಕಲಾ ನೈಪುಣ್ಯತೆಯಿಂದ ಪ್ರಾವಿಣ್ಯತೆಯಿಂದ ಕ್ಷಣ ಮಾತ್ರದಲ್ಲಿ ಮೀರಿದ ಖ್ಯಾತಿ ಅವನದು. ಅವನ ವಂಶಜರಾದ ನಮ್ಮಲ್ಲಿ ರಕ್ತಗತವಾಗಿಯೇ ಕಲೆ, ಸಾಹಿತ್ಯ, ಸಂಗೀತ, ತುಂಬಿಕೊಂಡಿದೆ. ಅತ್ಯಂತ ನಾಜೂಕಿನ ಆಡಂಬರದ ಕುಸುರಿ ಕೆತ್ತನೆಗಳನ್ನು, ಬಂಗಾರ ಕಾಪ್ಪದಲ್ಲಿ ಮೂಡಿಸಲು, ಭಕ್ತಿ ಭಾವದಿಂದ ಪೂಜಿಸುವ ಮೂರ್ತಿಗಳನ್ನು ಕೆತ್ತಲು, ವಾಸಿಸುವ ಮನೆಯನ್ನು ನಿರ್ಮಿಸಲು, ಧಾನ್ಯಗಳನ್ನು ಬೆಳೆಯಲು, ಭೂ ದೇವಿಯನ್ನು ಹಸನಗೊಳಿಸಲು ಬೇಕಾಗುವ ನೇಗಿಲನ್ನು ತಯಾರಿಸುವ ಕುಲ ನಮ್ಮದು. ಬೆಡಗು ಬಿನ್ನಾಣ ವೈಯಾರದ ಒಡವೆ ತಯಾರಿಕೆಯಿಂದ ಹೊಟ್ಟೆಪಾಡಿನ ವರೆಗೂ ನಮ್ಮ ವಂಶಜರ ಕುಲ ಕಸುಬುಗಳು ಇತರರಿಗೆ ಬೇಕೇ ಬೇಕು ಎಂದು ವಿಶ್ವಕರ್ಮರು ಮೇಲಿನ ಪದ್ಯದ ಮೂಲಕ ಹೇಳುತ್ತಾರೆ.

ಹೇಮತ್ವ ಉಳ್ಳವರು ಹೆಮ್ಮೆಯನ್ನು ಮೆರೆದರು
ಸುಮ್ಮನಿದ್ದವರು ಮೆರೆದರೆ ಧರ್ಮದ
ಕಮ್ಮಾರನಲಿ ಮೆರೆವೆನು ಬಸವಣ್ಣ

ತಿಂಥಣಿ ಮೌನೇಶ್ವರ ಪಂಚಾಳರ ಕುಲದಲ್ಲಿ ಹುಟ್ಟಿ ಬಸವಣ್ಣನ ಶಿಷ್ಯತ್ವ ಸ್ವೀಕರಿಸಿದ. ವೃತ್ತಿಯಲ್ಲಿ ಕಮ್ಮಾರನಾಗಿದ್ದ ಮೌನೇಶ್ವರ 'ಏಸೇನು ಜನ್ಮದಲ್ಲಿ ಕಶ್ಯಪನ ಮಗ ನಾನು' ಎಂದು ಹೇಳಿಕೊಂಡಿದ್ದಾನೆ. ತಿಂಥಣಿಯಲ್ಲಿ ಇಂದಿಗೂ ಕಂಡು ಬರುವ ಸುಟ್ಟ ಕಬ್ಬಿಣದ ಕಿಟ್ಟದ ರಾಶಿ ಮೌನೇಶ್ವರನ ಕಾಲದ್ದು ಎಂದು ಹೇಳುತ್ತಾರೆ. 'ಕಲ್ಲು ಬಂಡ್ಯಾಗ ತಿದಿ ಹೂಡಿ ಕಮ್ಮಾರಿಕೆ ಮಾಡಿದೆ' ಎಂಬ ಮಾತಿಗೆ ಸಾಕ್ಷಿ ನೀಡುತ್ತದೆ. ಮೌನೇಶ್ವರ ತನ್ನ ವಚನದಲ್ಲಿ ' ಐಶ್ವರ್ಯವಂತರು ಸಂಪತ್ತಿನ ಹೆಮ್ಮೆಯಿಂದ ಮೆರೆಯುತ್ತಾರೆ. ನನ್ನಲ್ಲಿರುವುದು ಕಬ್ಬಿಣ. ನಾನು ಬಡವ ನಾನು ಸುಮ್ಮನಿದ್ದು ಧರ್ಮ ಎಂಬ ಸಂಪತ್ತಿನಿಂದ ಮೆರೆಯುತ್ತೇನೆ' ಎಂದಿದ್ದಾನೆ.

ತಿಂಥಣಿ ಮೌನೇಶ್ವರ ತನ್ನ ವಚನಗಳಲ್ಲಿ ಕಾಳಮ್ಮನನ್ನು ಕುರಿತು ಈ ಕೆಳಗಿನಂತೆ ಹೇಳಿದ್ದಾನೆ.

"ಕಾಳಮ್ಮ ಎಂಬಾಕಿ ಲೋಕದ ಕರ್ತಿ
ಕೀಳು ಮಾದಿಗರ ಕಾಳ ಕಿವಿಯೊಳಗೆ ಅಡಗಿಹಳು
ಸಕಳಕಳವೆಲ್ಲ ಆಕೆಯ ಒಡಲೊಳಗೆ ಬಸವಣ್ಣ"

'ಕಾಯವೇ ಕಾಳಮ್ಮ ಜೀವವೇ ಪರಬ್ರಹ್ಮ
ದೇವಿ ದೇವನು ಒಡಗೂಡಿ ನಾನಾ
ಜೀವಜಂತುಗಳು ಪುಟ್ಟಿಸಿದರು ಬಸವಣ್ಣ'

'ಕತ್ತಲೇ ಕಾಳಮ್ಮ ಹೊತ್ತಾರೆ ಪರಬ್ರಹ್ಮ
ಪೃಥ್ವಿಯಲ್ಲಿ ಜನಿಸಿದಳು ಇದರೊಳಗಾದವ
ಕುಲವೆಂದು ಬದುಕಲಿ ಬಸವಣ್ಣ'

ತುಳು ನಾಡಿನಲ್ಲಿ ವಾಸಿಸುತ್ತಿರುವ ಕಮ್ಮಾರರಲ್ಲಿ ತುಳು ಬಳಕೆ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ತುಳು ಭಾಷೆಯಲ್ಲಿ ಅನೇಕ ಪ್ರಕಾರದ ಹಾಡುಗಳನ್ನು ಹೇಳುವುದುಂಟು.

ಮಹಾ ಕಾಳಿಯನ್ನು ಕುರಿತು ಆಚರಣೆ ಸಂದರ್ಭದಲ್ಲಿ ತುಳು ಹಾಡನ್ನು ಹಾಡುತ್ತಾರೆ. ಅದನ್ನು ಕನ್ನಡಕ್ಕೆ ಅನುವಾದಿಸಿದ ಪದ್ಯದ ಸಾರ

'ಸುತ್ತು ಬಾ ಮಾಂಕಾಳಿ। ಸುತ್ತು ಬಾ ಮಾಂಕಾಳಿ ಸುತ್ತು ಬಾ
ಬಲೀಂದ್ರ ದೇವರ ಮಾಂಕಾಳಿ। ಸುತ್ತು ಬಾ ಮಾಂಕಳಿ
ವರ್ಷಕ್ಕೊಮ್ಮೆ ಅವಳು ಬರುವಾಗ। ಬಂಟ ಕಂಬ ನೆಡೆಸಿದಳು
ಬಂಟ ಕಂಬ ನೆಡೆಸಿದಳು। ಭೂಮಿಗೆ ದೀಪ ಇಡಿಸಿದಳು
ಮಗುವಾಗಿ ಅರಳಿದಳು। ದುಂಬಿಯಾಗಿ ಝೇಂಕರಿಸಿದಳು
ಎಡಗೈಯಲ್ಲಿ ಮಗುವನ್ನೆತ್ತಿ। ಬಲಮೊಲೆಯುಡಿಸಿದಳು
ಮಾಂಕಾಳಿಗೆ ಕಣ್ಣಿಗೆ ಕನ್ನಡಿ। ಬೆನ್ನಿಗೆ ಬಣ್ಣದ ಪಾವಡೆ
ಕೋಟೆ ಪೇಟೆಯಲ್ಲಿ ಅವಳು ಬರುವಾಗ। ಗಂಗೆ ಗೌರಿ ಎನಿಸಿಕೊಂಡಳು
ಮಾಂಕಾಳಿ ಬುಸುಗುಟ್ಟುತ್ತಾ ಮುನ್ನೂರು ಗಾವುದ ಬಂದಳು
ನಾಲಿಗೆಯನ್ನು ಉದ್ದ ನೀಡಿ ಅರ್ಭಟಿಸುತ್ತ ನಾಲ್ಕುವರೆ ಗಾವುದು ಬಂದಳು
ಸೂಳೆಯನ್ನು ಕೊಂದು ನೆರಿಹಾಕಿ ಸೀರೆಯುಟ್ಟು ಕುಣಿದಳು
ಪಂಬದನನ್ನು ಕೊಂದು ಆತನ ಕರಂಡೆಯನ್ನು ಕೈಯಲ್ಲಿ ಧರಿಸಿಕೊಂಡಳು
ಬೇಡನನ್ನು ಕೊಂದು ಬೇಡನ ಕೋವಿಯನ್ನು ಹಿಡಿದುಕೊಂಡಳು
ಕರುಳು ಕಿತ್ತು ಅದನ್ನು ಜನಿವಾರವಾಗಿ ಹಾಕಿಕೊಂಡಳು
ಎಲುಬು ಕಿತ್ತು ಮಾಂಕಾಳಿಗೆ ಕೋಲಾಟಕ್ಕೆ ಬಳಸಿಕೊಂಡಳು
ಕಣ್ಣು ಕಿತ್ತು ಮಾಂಕಾಳಿ ಕವಡೆ ಮಾಲೆ ಧರಿಸಿಕೊಂಡಳು
ಮಂಜುನಾಥ ದೇವರ ಮಹಿಮೆಯನ್ನು ಒಂದು ನೋಟದಲ್ಲಿ ನೋಡಿ
ತೃಪ್ತಿಗೊಂಡಳು

ಕೋಟದ ಕೋಟಿಲಿಂಗೇಶ್ವರ ಧ್ವಜವನ್ನು ಒಂದು ನೋಟದಲ್ಲಿ ನೋಡಿ
ತೃಪ್ತಿಗೊಂಡಳು
ತುಳು ನಾಡಿಗೆ ಅವಳು ಬರುವಾಗ ಮಹಾಮಾಯ ನೂರಿಎಂಬ ಹೆಸರು
ಧರಿಸಿಕೊಂಡಳು
ವರ್ಷಕ್ಕೊಮ್ಮೆ ಅವಳು ಬರುವಾಗ ತೆಂಕುದಿಕ್ಕಿಗೆ ನಂದಾದೀಪ ಅರಳಿತು
ಪಡುಗಡೆಯ ಬಾಗಿಲಿನಿಂದ ಸುತ್ತು ಬಾ ಮಾಂಕಾಳಿ ಮೂಡಣದ ಬಾಗಿಲಲ್ಲಿ
ಸಂಪತ್ತು ತುಂಬಿಸಿ ಕೊಡು ಬಾ ತಾಯಿ'

ಹೀಗೆ ಮಹಾಕಾಳಿಯನ್ನು ಪದ್ಯದ ಮೂಲಕ ಸ್ಥುತಿಸುವುದನ್ನು ಕಾಣಿಸುತ್ತೇವೆ.

ದಕ್ಷಿಣ ಕನ್ನಡ ಉಡುಪಿ ಜಿಲ್ಲೆಯ ಅನೇಕ ಹಿರಿಯರಾದ ಕಮ್ಮಾರರು ಒಂದು ಕಾಲಕ್ಕೆ ಪಾಡ್ಡನಗಳನ್ನು ಹಾಡುತ್ತಿದ್ದರೆಂದು ತಿಳಿಯುತ್ತದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಪಾಡ್ಡನಗಳನ್ನು ಹಾಡುವವರು ಕಂಡುಬರಲಿಲ್ಲ. ಯಕ್ಷಗಾನ, ತಾಳ ಮದ್ದಳೆಗಳಲ್ಲಿ ಹಾಡುವ ಕಲಾವಿದರು ಅಲ್ಲಲ್ಲಿ ಕಂಡುಬರುತ್ತಾರೆ. ಸಾಮಾನ್ಯವಾಗಿ ಈ ಪ್ರದೇಶದ ಕಮ್ಮಾರರಲ್ಲಿ ಸೋಬಾನೆ ಹಾಡುಗಳು, ಮದುವೆ ಸಂಪ್ರದಾಯದ ಹಾಡುಗಳು ಇವು ತುಳು ಭಾಷೆಯಲ್ಲಿರುವುದು ಕಂಡು ಬರುತ್ತದೆ.

ಕೊಳ್ಳೆಗಾಲ ಪರಿಸರದ ಕಮ್ಮಾರರಲ್ಲಿ ಕೆಲವರು ಮಂಟೇಸ್ವಾಮಿ ಕಾವ್ಯವನ್ನು ಹಾಡುವುದನ್ನು ಕಾಣುತ್ತೇವೆ. ಅದರಲ್ಲಿಯೂ ಸಿದ್ದಪ್ಪಾಜಿಯ ಸಾಲನ್ನು ಪರಂಪರಾನುಗತವಾಗಿ ಮೌಖಿಕ ಸಂಪ್ರದಾಯದಲ್ಲಿ ಹಾಡುವುದನ್ನು ಕಾಣುತ್ತೇವೆ. ಶ್ರಾವಣ ಮಾಸದಲ್ಲಿ ಇಲ್ಲಿಯ ಕಮ್ಮಾರರು ಕಪ್ಪಡಿಗೆ ಸಿದ್ದಪ್ಪಾಜಿಗೆ ಪೂಜೆ ಸಲ್ಲಿಸಲು ಹೋಗುವಾಗ ಈ ಕಾವ್ಯವನ್ನು ಹಾಡುತ್ತಾರೆಂದು ತಿಮ್ಮರಜ್ಜಿಪುರದ ಕಾಳಾಚಾರಿ ಹೇಳುತ್ತಾರೆ.

ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯ ಕಮ್ಮಾರರು ಮದುವೆಯ ಸಂದರ್ಭದಲ್ಲಿ ತುಳು ಭಾಷೆಯಲ್ಲಿರುವ ಈ ಕೆಳಗಿನ ಪದ್ಯ ಹಾಡುವುದನ್ನು ಕಾಣುತ್ತೇವೆ.

'ಎಲ್ಯೊಂಜಿ ಪೊಣ್ಣುವ ಪಾತರೆ ಕೊರ್ಯೆರ್
ಎಂಕಲೆನ್ ಆಲೆಗ್ ಎಲ್ಯ ಬಂಜಿ ಅಣ್‌ಗೆ
ಮೋನೆದ ಕರ್ಪು ಆಪಿನೆ ಆತೆಗೆ
ಪಾತರೆ ಕೊರ್ಯೆರ್ ಮದ್ಮೆ ಸಾದಿ ಪತ್ಯೆರ್
ಆ ಪೊಣ್ಣುಲೆನ ತೊಯೆರೆ ಕಿನ್ನಿ ಮದಿಮೆಯೆ
ಪೊದುಲಾನೆ ಪತ್ಯೆರ್ ಕಿನ್ನಿ ಮದಿಮೆಯೆ
ಪೊಣ್ಣುಲೆಡ ಪೊಣ್ಣುಗೆ ಕಿನ್ನಿ ಮದಿಮೆಯೆ
ಪೊಲು ಬಿಟ್ಟಿರೆ ತಿಂದರೆ ಕಿನ್ನಿ ಮದಿಮೆಯೆ
ಪೊಣ್ಣುಲೆಡ ಪೊಣ್ಣುಗೆ ಕಿನ್ನಿ ಮದಿಮೆಯೆ

ಬಾರೊಡುಂದು ಬರಾನೆ ಕಿನ್ನಿ ಮದಿಮೆಯೆ
ಮದಿಮೆಗ್ ಆದಿಕುದಿ ಕಿನ್ನಿ ಮದಿಮೆಯೆ
ಆದಿಕುದಿ ದೀಯೆರ್ ಕಿನ್ನಿ ಮದಿಮೆಯೆ
ಬೊಳ್ಳಿಲಾನೆ ಮಾಡುದು ಕಿನ್ನಿ ಮದಿಮೆಯೆ
ನಿಕ್ಕ್ ಬೊಲುಪು ಲವದಾನಗ ಕಿನ್ನಿ ಮದಿಮೆಯೆ
ಆ ಮುತ್ತುಡುಲು ದೇಸೆ ಆವೊಡು ಕಿನ್ನಿ ಮದಿಮೆಯೆ
ಪಕಲೊಡು ಆರತಿ ಕಿನ್ನಿ ಮದಿಮೆಯೆ
ಗುರುವಾರ ಬರೊಡುಯ ಕಿನ್ನಿ ಮದಿಮೆಯೆ
ದಿಬ್ಬಣ ಬರಿಯರೆ ಕಿನ್ನಿ ಮದಿಮೆಯೆ
ದಿನಮಾನ ದೀತೆರಿಯ ಕಿನ್ನಿ ಮದಿಮೆಯೆ
ಬೊಳ್ಳಿ ಮೊಡ್ಡು ಬೊಳ್ಪು ವರನಗ ಕಿನ್ನಿ ಮದಿಮೆಯೆ
ಮಾಣಿಗ ಸೊರದನಿ ಕೊರುನಗ ಕಿನ್ನಿ ಮದಿಮೆಯೆ
ಮುತ್ತಾಡುಲ ದೇಸಿ ಕಿನ್ನಿ ಮದಿಮೆಯೆ
ಮೈ ಮುಟ್ಟು ದೇಸಿ ಕಿನ್ನಿ ಮದಿಮೆಯೆ
ಬೊಳ್ಗರೆ ಮಾನಿಗ ಸೊರದನಿ ಕೊರುಗನ ಕಿನ್ನಿ ಮದಿಮೆಯೆ
ಕೈ ಮುಟ್ಟು ಕೈ ದಾದರೆ ಕಿನ್ನಿ ಮದಿಮೆಯೆ
ದಿನ ಬಾರ ದೀಯಿನಿ ಕಿನ್ನಿ ಮದಿಮೆಯೆ
ಎಂಕುಲು ನನ ಮೊಪೆಂದರ್ ಕಿನ್ನಿ ಮದಿಮೆಯೆ

ಮದುವೆ ಸಂದರ್ಭದ ತುಳು ಭಾಷೆಯಲ್ಲಿರುವ ಹಾಡಿನ ಕನ್ನಡದ ಅನುವಾದ ನೀಡಲಾಗಿದೆ.

'ಗಟ್ಟದ ಮೇಲೆ ಮೇಲಿನ ರಾಜ್ಯದಲ್ಲಿ
ತಾಳಕಂಚಿ ತಾರಂದ ಬಳಿ
ಅಪ್ಪ ಎಂದರೆ ಇದ್ದಾರೆ ಒಡೆಯ
ಗುರುಸರ ಪಾಳಯ ನಾಯಕರು
ಅಮ್ಮ ಎಂದರೆ ಇದ್ದಾರೆ
ಸನ್ಯಾಸಿಯಂತೆ ಹೆಣ್ಣು ದೇವಿಯವರು
ಅವರಿಗೆ ಹುಟ್ಟಿದ ಮಕ್ಕಳಿದ್ದಾರೆ
ಏಳು ಜನ ಕನ್ಯೆಯರು
ಏಳು ಜನ ಕನ್ಯೆಯರಿಗೆ
ಒಬ್ಬಾತ ವಿಟ ಪುರುಷನು

ಕೈ ಕಾಲು ತೊಳೆದುಕೊಂಡರು
ಕೊಳೆ ಬಟ್ಟೆ ಬದಲಾಯಿಸಿಕೊಂಡರು
ಹೆಣ್ಣುಗಳು ಮಡಿ ಬಟ್ಟೆ ಉಟ್ಟುಕೊಂಡರು
ದಟ್ಟಿ ಸೀರೆ ಉಟ್ಟುಕೊಂಡರು
ಗಾಜಿನ ಬಣ್ಣದ ರವಿಕೆ ಧರಿಸಿಕೊಂಡರು
ಬೈತಲೆ ಹಾಕಿ ತಲೆ ಬಾಚಿ ಕಟ್ಟಿಕೊಂಡರು
ಕಣ್ಣಿಗೆ ಕಾಡಿಗೆ ಹಾಕಿಕೊಂಡರು
ಮುತ್ತು ಬೈತಲೆ ಮುಂದಲೆಗೆ ಬೊಟ್ಟು ಇಟ್ಟುಕೊಂಡರು
ಕಿವಿಯ ಓಲೆ ನಸು ಮಿಂಚುತ್ತಾ ಇದೆ
ಕಾಲಿಗೆ ಕಾಲ ಸರಪಳಿ ಬೆರಳಿಗೆ ನೆಲ್ಲಿಸರ
ಸೊಂಟಕ್ಕೆ ನೇವಳವಾಗಿದೆ
ಕೊರಳಿಗೆ ಬಂಧಿ ಇಟ್ಟಿದ್ದಾರೆ
ಕೈಗೆ ಬಂಗಾರದ ಬಳೆ ಇಟ್ಟಿದ್ದಾರೆ
ಬಲದ ಕೈಯಲ್ಲಿ ಪನೆ ಛತ್ರ ಹಿಡಿದಿದ್ದಾರೆ
ಓ ಹೆಣ್ಣುಗಳು ಶೃಂಗಾರವಾಗಿದ್ದಾರೆ '

ಕಮ್ಮಾರರು ವೃತ್ತಿಯಲ್ಲಿಯೇ ದೈವವನ್ನು ಕಂಡವರು. ಬೆರಳೆಣಿಕೆಯಷ್ಟು ಜನರು ಜನಪದ ಹಾಡುಗಳನ್ನು ಕೆಲಸದಲ್ಲಿ ಸಮಯದಲ್ಲಿ ಗುನುಗುತ್ತಿರುವುದನ್ನು ಕಾಣುತ್ತೇವೆ. ಕೆಲ ಹೆಣ್ಣು ಮಕ್ಕಳು ಸೋಬಾನೆ ಹಾಡು, ಭಕ್ತಿಯ ಹಾಡು, ಭಜನೆ, ಮದುವೆ ಹಾಡುಗಳನ್ನು ಹಾಡುತ್ತಾರೆ. ತುಳಸಿ ಪೂಜೆ ಮಾಡುತ್ತಿರುವ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಹಾಡುವ ಹಾಡು.

"ವರವು ಕೊಡೆ ತುಳಸಿ ದೇವಿ
ಶರಣು ಮಾಡುವೆ
ಸ್ಥಿರವಾದ ವರವನ್ನು ಬರದೆ ನೀ ಕೊಡೆ".....

ಕಾರ್ತಿಕ ಮಾಸದಲ್ಲಿ ಪ್ರತಿದಿನ ತುಳಸಿ ಪೂಜೆಯನ್ನು ಮಾಡಿ ಮೇಲಿನ ಈ ಹಾಡನ್ನು ಹಾಡುತ್ತಾರೆ.

'ಕಬ್ಬಣ ಮಾಡಾ ಹುಡುಗ ಕುಲುಮೆ ಈಚೆಗೆ ಬಾರೋ
ಬುತ್ತಿ ತಂದೀವ್ನಿ ಉಣಬಾರೊ, ನಿನಗಾಗಿ
ಕಬ್ಬ ತಂದಿವ್ನಿ ತಿನು ಬಾರೊ'
'ಕಬ್ಬಿಣ ಮಾಡೊ ಕೈ ಕಬ್ಬಿಣದಷ್ಟೇ ಗಟ್ಟಿ
ಮಗ್ಗಲಿಗೆ ಹಾಕಿ ಒತ್ತಿದರೆ, ನನಚಲುವ
ತಿದಿಯಾ ಒತ್ತಿದಂಗೆ ತಿಳಿ ಬಾರೆ' ೧೦

## ೬.೩ ಐತಿಹ್ಯಗಳು:

" ವ್ಯಕ್ತಿಗಳಿಗೆ, ಸ್ಥಳಗಳಿಗೆ, ಘಟನೆಗಳಿಗೆ ಸಂಬಂಧಿಸಿದಂತೆ ಯಾವುದೋ ನಿರ್ದಿಷ್ಟ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳನ್ನೇ ಐತಿಹ್ಯಗಳು ಎಂದು ಕರೆಯುವರು. ಇವುಗಳಲ್ಲಿ ಎರಡು ಪ್ರಕಾರಗಳು. ಸ್ಥಳೀಯ ಅಥವಾ ಪ್ರಾದೇಶಿಕ ಐತಿಹ್ಯ, ಪ್ರವಾಸಿ ಐತಿಹ್ಯ. ಸ್ಥಳೀಯ ಐತಿಹ್ಯ ಸ್ವರೂಪದಲ್ಲಿ ಸಣ್ಣದು. ಆಶಯಗಳು ಕಡಿಮೆ. ಅವು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಂಡಿರುತ್ತವೆ. ರಚನೆಗೆ ಸಂಬಂಧಿಸಿದಂತೆ ಅದು ಮುಖ್ಯವಾದ ಘಟನಾ ಪ್ರಧಾನವಾದ ಕಥೆ, ಕೆಲವೊಮ್ಮೆ ಬಹಿಷ್ಕೃತರಿಗೆ ಸಂಬಂಧಿಸಿದ ಕಥೆಗಳಲ್ಲಿ ವ್ಯಕ್ತಿ ಚಿತ್ರಕ್ಕೆ ಅವಕಾಶವುಂಟು. ಅವುಗಳಲ್ಲಿ ಭಾವತಿರೇಕವಿರಬಹುದಾದರೂ, ಅವು ಸುಖದಲ್ಲಿ ಕೊನೆಗೊಳ್ಳಲೇಬೇಕೆಂಬ ಕಡ್ಡಾಯವಿಲ್ಲ. ದುರಂತದ ಐತಿಹ್ಯಗಳೇ ಜಾಸ್ತಿ. ಬಲಿದಾನ ಮತ್ತು ಆಕಸ್ಮಿಕ ಮರಣಗಳು ಸಂಭವಿಸುತ್ತವೆ. ಇವುಗಳಲ್ಲಿ ನೀತಿಬೋಧೆಗೂ ಸ್ಥಾನವುಂಟು. ಅವು ಆಸುಪಾಸಿನ ಪ್ರದೇಶಗಳಲ್ಲಿ ಪರಂಪರಾನುತವಾಗಿ ಹಬ್ಬುತ್ತವೆ ಮತ್ತು ಬದುಕುತ್ತವೆ. ತಾವು ಹುಟ್ಟಿಕೊಂಡ ಜಾಗದ ಅಸಾಧಾರಣ ಲಕ್ಷಣವನ್ನು ವಿವರಿಸುವುದೇ ಅವುಗಳ ಗುರಿ. ಈ ದೃಷ್ಟಿಯಿಂದ ಅವು ಕಾರಣ ಸಂಬಂಧಿ ಕಥೆಗಳನ್ನು ಹೋಲುತ್ತವೆಂದಾಯಿತು. ಯಾವುದಾದರೂ ಕಾರಣಕ್ಕಾಗಿ ಆ ಲಕ್ಷಣಗಳು ಮರೆಯಾದರೆ, ಆ ಐತಿಹ್ಯ ಅಗೋಚರವಾಗುತ್ತಿದೆ."[೧೧]

ಕಮ್ಮಾರರ ಸಮುದಾಯದಲ್ಲಿ ಅನೇಕ ಐತಿಹ್ಯಗಳಿರುವುದು ಕಂಡುಬರುತ್ತವೆ.

೧. ನವಲುಗುಂದದ ನಾಗಲಿಂಗಸ್ವಾಮಿಗಳು ಸುಬ್ರಮಣ್ಯಕ್ಕೆ ಪೂಜೆ ಮಾಡಲು ಹೋದಾಗ ಸುಬ್ರಮಣ್ಯಸ್ವಾಮಿಯ ಬಿಲ್ವ ಪತ್ರಿಯ ರೂಪದಲ್ಲಿ ಮಂಗಳೂರಿನ ಕಾಳಿಕಾಂಬಾ ದೇವಸ್ಥಾನಕ್ಕೆ ಆಗಮಿಸುತ್ತಾನೆ ಮತ್ತು ಇಲ್ಲಿಯೇ ನೆಲೆಗೊಳ್ಳುತ್ತಾನೆಂಬ ಐತಿಹ್ಯವಿದೆ.

೨. ಮಂಗಳೂರಿನ ಕಾಳಿಕಾಂಬ ದೇವಸ್ಥಾನದಲ್ಲಿರುವ ನಾಗಬನದಲ್ಲಿರುವ ಒಂದು ಸಂಪಿಗೆ ಮರವು ವಿಸ್ಮಯಕಾರಿಯಾಗಿದ್ದು ಇದು ನಾಗರ ಹೆಡೆಯಂತಿದ್ದು ಈ ಹೆಡೆಯು ಆಕಾಶವನ್ನು ನೋಡುತ್ತದೆ. ಸುಬ್ರಮಣ್ಯನು ಈ ಗಿಡದ ರೂಪದಲ್ಲಿ ಇಲ್ಲಿ ಉಳಿದುಕೊಂಡಿದ್ದಾನೆ ಎಂದು ಹೇಳುತ್ತಾರೆ.

೩. ಕೋಟೆಕಾರು ಎಂಬ ಊರಿನಲ್ಲಿ ಕಾಳಮ್ಮ ಎಂಬ ಭಕ್ತೆ ಇದ್ದಳು. ಅವಳು ಕಾಳಿಕಾಂಬೆಗೆ ನಿತ್ಯವೂ ಆಯ್ದು ನೆಲ್ಲಿಗಳನ್ನು ಸಮರ್ಪಿಸಿ ಪೂಜಿಸುತ್ತಿದ್ದಳು. ದೇವಿಯ ಪ್ರೀತಿಗೆ ಪಾತ್ರಳಾದ ಇವಳು ಆರಾಧಿಸುತ್ತಿರುವ ನೆಲೆಯೇ ನೆಲ್ಲಿ ಸ್ಥಳವಾಯಿತೆಂಬ ಐತಿಹ್ಯವಿದೆ.

೪. ಕರಸ್ಥಳದ ಶ್ರೀ ನಾಗಲಿಂಗಸ್ವಾಮಿಯು ಮೂಡಬಿದ್ರೆಯ ಕಾಳಿಕಾಂಬ ದೇವಸ್ಥಾನಕ್ಕೆ ಬಂದು ಅಲ್ಲಿ ಅನೇಕ ಪವಾಡಗಳನ್ನು ಮಾಡಿ ಉಪ್ಪಳ್ಳಿ ದೇವಸ್ಥಾನಕ್ಕೆ ಬಂದು ವಿಭೂತಿ ಉಂಡೆಗಳನ್ನು ಬಿಟ್ಟು ಹೋದ ಎಂಬ ಐತಿಹ್ಯವಿದೆ. ಆ ವಿಭೂತಿ ಉಂಡೆಗಳನ್ನು ವಿಶ್ವಕರ್ಮನ ಪ್ರತಿರೂಪ ಎಂದು ತಿಳಿದು ಪೂಜಿಸುತ್ತಾರೆ. ಇಲ್ಲಿಯ ದೊಡ್ಡ ವಿಭೂತಿ ಉಂಡೆ ವರ್ಷದಿಂದ ವರ್ಷಕ್ಕೆ ದೊಡ್ಡದಾಗುತ್ತಾ ಹೋಗುತ್ತಿದೆ ಎಂದು ಹೇಳುತ್ತಾರೆ.

೫. ಉಪ್ರಳ್ಳಿ ದೇವಸ್ಥಾನದಲ್ಲಿರುವ ನಾಗಲಿಂಗಸ್ವಾಮಿಯ ವಿಭೂತಿ ಉಂಡೆಯ ಮೇಲೆ ಹಿಂಗಾರವನ್ನಿಟ್ಟು ಭವಿಷ್ಯ ಕೇಳುವ ಸಂಪ್ರದಾಯವಿದೆ. ಮದುವೆ ನಿಶ್ಚಯವಾಗುವುದಕ್ಕಿಂತ ಮೊದಲು ಇಲ್ಲಿ ದೇವರ ಹೆಸರಿನಲ್ಲಿ ಹಿಂಗಾರವನ್ನಿಟ್ಟು ಪೂಜಿಸಿ ಪ್ರಸಾದವನ್ನು ಕೇಳುವ ಕ್ರಮವಿದೆ.

೬. ಉಡುಪಿ ಹಾಗೂ ಮಂಗಳೂರು ಪ್ರದೇಶಗಳಲ್ಲಿ ಪ್ರಸಿದ್ಧವಾಗಿರುವ ಕಲ್ಕುಡ ಮತ್ತು ಕಲ್ಲುರ್ಟಿ ಭೂತಗಳು ಇವು ವಿಶ್ವಕರ್ಮ ಸಮುದಾಯದವರಾದ ಬೀರು ಕಲ್ಕುಡ ಮತ್ತು ಅವನ ತಂಗಿ ಕಾಳಮ್ಮ ಪ್ರಾಣತ್ಯಾಗ ಮಾಡಿ ಮಾಯದ ದೈವಗಳಾಗಿ ಪೂಜೆಗೊಳ್ಳುತ್ತಿವೆ ಎಂದೂ ಈ ಪ್ರದೇಶದಲ್ಲಿ ಅನೇಕ ಸ್ಥಳಗಳಲ್ಲಿ ಕಲ್ಕುಡ ಹಾಗೂ ಕಲ್ಲುರ್ಟಿ ಭೂತಗಳ ದೇವಸ್ಥಾನಗಳಿವೆ.(ಹೆಚ್ಚಿನ ವಿವರಗಳಿಗಾಗಿ ಅದೇ ಅಧ್ಯಾಯದ 'ಚರಿತ್ರೆ ಹೇಳುವ ಕಥೆ'ಯನ್ನು ಗಮನಿಸಿ)

೭. ಹಲಗೂರಿನಲ್ಲಿ ಸಿದ್ದಪ್ಪಾಜಿಯು ಕಮ್ಮಾರಿಕೆ ಮಾಡುತ್ತಿದ್ದನೆಂದು ಅವನು ಕಬ್ಬಿಣ ಸಂಸ್ಕರಿಸಿದ ಕಬ್ಬಿಣದ ಕಿಟ್ಟಗಳೆಂದು ಹಲಗೂರಿನಲ್ಲಿ ತೋರಿಸುತ್ತಾರೆ.

೮. ಸಿದ್ದಪ್ಪಾಜಿಯು ಹಲಗೂರಿನ ಕಮ್ಮಾರರ ಹತ್ತಿರ ಕಬ್ಬಿಣದ ಭಿಕ್ಷೆಯನ್ನು ಬೇಡಲು ಬಂದಾಗ ಕಮ್ಮಾರರು ಅವನಿಗೆ ಭಿಕ್ಷೆ ಕೊಡುವುದಿಲ್ಲ. ಅವನನ್ನು ಶಿಕ್ಷಿಸುವ ಸಲುವಾಗಿ ಹಲಗೂರಿನ ಕಾಳಮ್ಮನ ದೇವಸ್ಥಾನದಲ್ಲಿ ಬಂಧಿಸಿಡಲಾಗಿತ್ತು ಎಂದು ಹೇಳುತ್ತಾ ಸಿದ್ದಪ್ಪಾಜಿಯನ್ನು ಬಂಧನದಲ್ಲಿಟ್ಟ ಸ್ಥಳವನ್ನು ತೋರಿಸುತ್ತಾರೆ.

೯. ಹಲಗೂರಿನ ಕಮ್ಮಾರರು ಸಿದ್ದಪ್ಪಾಜಿಯನ್ನು ಕಬ್ಬಿಣದ ಗಟ್ಟಿಯ ಮೇಲೆ ಮಲಗಿಸಿ ಬೆಂಕಿಯನ್ನು ಹಾಕಿ ಸಿದ್ಧಪ್ಪಾಜಿಯನ್ನು ಸುಡಲು ಪ್ರಯತ್ನಿಸುತ್ತಾರೆ. ಆದರೆ ಸಿದ್ದಪ್ಪಾಜಿ ಅಲ್ಲಿ ಪವಾಡ ಮಾಡಿ ತಿದಿಯಲ್ಲಿದ್ದ ಕಬ್ಬಿಣದ ಗಟ್ಟಿ ನೀರಾಗಿ ಹಲಗೂರಿನ ತುಂಬೆಲ್ಲ ಹರಿಯಿತು ಎಂದು ಹೇಳುವ ಐತಿಹ್ಯ ಈ ಪ್ರದೇಶದಲ್ಲಿ ಪ್ರಚಲಿತದಲ್ಲಿದೆ.

ಹೀಗೆ ಅನೇಕ ಐತಿಹ್ಯಗಳು ಕಮ್ಮಾರರ ಸಮುದಾಯದಲ್ಲಿ ಪ್ರಚಲಿತದಲ್ಲಿರುವುದು ಕಂಡು ಬರುತ್ತದೆ.

**೬.೪. ಪುರಾಣ:**

ವಿಶ್ವದ ಸೃಷ್ಟಿ ಹೇಗಾಯಿತು? ಯಾರಿಂದಾಯಿತು? ಎಂದು ತಿಳಿಸುವ ಪುರಾಣಗಳು ಜಗತ್ತಿನ ಅನೇಕ ಸಮುದಾಯಗಳಲ್ಲಿವೆ 'ವಿಶ್ವವನ್ನು ಕುರಿತ ಪುರಾಣ (Cosmogonic)ಗಳಲ್ಲಿ ಸೃಷ್ಟಿ (Protological) ಮತ್ತು ಲಯ ಪುರಾಣ (Eschatological Myth) ಗಳೆಂದು ಎರಡು ವಿಧ. ವಿಶ್ವದ ಉಗಮವನ್ನು ಕುರಿತ ಕಥೆಗಳೇ ಸೃಷ್ಟಿ ಪುರಾಣ. ಅದರ ಅಂತ್ಯವನ್ನು ಕುರಿತ ಕಥೆಗಳೇ ಲಯ ಪುರಾಣ' [೨]

ಈ ಸೃಷ್ಟಿ ಪುರಾಣಗಳು ಮನುಷ್ಯ, ಮರಗಿಡ, ಪ್ರಾಣಿ, ಪಕ್ಷಿ, ಅಗ್ನಿ, ವಾಯು, ನೀರು, ಸೂರ್ಯ, ಚಂದ್ರ, ನಭೋಮಂಡಲದ ಇನ್ನೆಷ್ಟೋ ವಿವರಗಳಿಗೆ ಸಂಬಂಧಪಟ್ಟಂತೆ ಸಾವಿರಾರು ಪುರಾಣಗಳನ್ನು ನಾವು ನೋಡಬಹುದು.

ಪ್ರತಿಯೊಂದು ಸಮುದಾಯ ತಾನು ಆರಾಧಿಸುವ ದೈವ, ಆಚರಿಸುವ ಧರ್ಮ, ನಂಬಿದ ವೃತ್ತಿ ಹೀಗೆ ಪ್ರತಿಯೊಂದು ಕಾರ್ಯಕ್ಕೂ ಪ್ರಾಚೀನತೆಯನ್ನು ಹೇಳುವ ಪುರಾಣಗಳು ಅನೇಕ ಸಮುದಾಯಗಳಲ್ಲಿರುತ್ತವೆ. "ಮನುಷ್ಯನಿಗೆ ಮೂಲಭೂತವಾಗಿ ಅವಶ್ಯವಿರುವ ಎಲ್ಲ ವಸ್ತುಗಳ ಬಗೆಗೆ ಮತ್ತು ಅವನಿಗೆ ಚೈತನ್ಯ ನೀಡುವ ಅನೇಕಾನೇಕ ಪುರಾಣಗಳಿದ್ದು ಇವು ಎಲ್ಲಾ ಬಗೆಯ ಪುರಾಣಗಳಿಗಿಂತ ಹಳೆಯವು. ಅಂದರೆ ಆದಿ ಪುರಾಣಗಳು ಎಂದು ಕರೆಯಿಸಿಕೊಂಡಿವೆ. ಕಾಲ ಕಲ್ಪನೆಗಳನ್ನು ಪ್ರಮುಖವಾಗಿ ಒತ್ತಿ ಹೇಳುವ ಸ್ವರ್ಗ ನರಕಗಳೆಂಬ ಲೋಕಗಳನ್ನು ಸೃಷ್ಟಿಸಿಕೊಂಡು ಯಾವ ಯಾವ ಕಾಲಕ್ಕೆ ಮನುಷ್ಯ ಹೇಗಿರಬೇಕು, ಹಾಗಿರದಿದ್ದರೆ ಏನಾಗುತ್ತದೆ ಎಂಬ ಪರಕಾಯದ ಪುರಾಣಗಳಿವೆ ಮತ್ತು ಆಯಾ ಸಮುದಾಯಗಳ ನಾಯಕರು ಅರ್ಥಾತ ಸಾಂಸ್ಕೃತಿಕ ನಾಯಕ-ನಾಯಕಿಯರನ್ನು ಕುರಿತು ಪುರಾಣಗಳಿರುತ್ತವೆ'.[೧೩]

'ತನ್ನ ಲೌಕಿಕ ಅನುಭವವನ್ನು ಮೀರುವ ವಿಶ್ವದ ಸೃಷ್ಟಿಗೂ, ಲಯಕ್ಕೂ ಮಾನವ ಕಾರಣನಲ್ಲ. ಅನುಭವಾತೀತ ಸ್ಥಲ ಸ್ವರೂಪಿ ಮಹಾಶಕ್ತಿಯೊಂದು ವಿಶ್ವದ ಸೃಷ್ಟಿ ಲಯಗಳಿಗೆ ಕಾರಣವಾಗಿರಬೇಕು. ಸಮಷ್ಟಿ ಪ್ರಜ್ಞೆಯನ್ನು ಜಗತ್ತಿನ ಜನಪದ ಸಾಹಿತ್ಯದಲ್ಲಿ ನಾವು ಕಾಣಬಹುದಾಗಿದೆ. ಈ ಮಹಾ ಅದ್ಭುತ ಶಕ್ತಿಯನ್ನು ಕುರಿತು ವಿವರ ನೀಡಲು, ನಮ್ಮ ದೈನಂದಿನ ಸಾಮಾನ್ಯ ಸಂಪರ್ಕ ಭಾಷೆಗೆ ಶಕ್ತಿ ಸಾಲದು, ಪುರಾಣಗಳೇ ಇದಕ್ಕೆ ತಕ್ಕ ಅಭಿವ್ಯಕ್ತಿ ಸಾಧನೆ' ಎಂದು (New Man 515) ವ್ಯಕ್ತ ಪಡಿಸಿರುವುದನ್ನೇ ವಿಲಿಯಂ ಮಾಡ್ತ ಅವರು ಸೃಷ್ಟಿ ಪುರಾಣದಲ್ಲಿ ಹೇಳಿದ್ದಾರೆ.

ಒಂದು ಕಾಲಕ್ಕೆ ಪುರಾಣಗಳೆಂದರೆ ಅದು ಕಟ್ಟು ಕಥೆ, ಅದು ವಿಜ್ಞಾನ ಪೂರ್ವ ಯುಗದ ಪ್ರಾಗೈತಿಹಾಸಿಕ ಕಾಲದ ಅವಿದ್ಯಾವಂತ, ಅನಾಗರಿಕ ಜನ ಸಮುದಾಯಗಳ ಕಾಲ್ಪನಿಕ ಸೃಷ್ಟಿ ಎಂಬ ಅಭಿಪ್ರಾಯ ಇತ್ತು. ಇಂದು ಪ್ರತಿಯೊಂದು ಸಮುದಾಯದ ಅಧ್ಯಯನ ಮಾಡಬೇಕಾದರೆ ಆ ಸಮುದಾಯದಲ್ಲಿರುವ ಪುರಾಣಗಳ ಅಧ್ಯಯನ ಅತ್ಯಂತ ಅವಶ್ಯಕ ಎಂದು ವಿದ್ವಾಂಸರು ಮನಗಂಡಿದ್ದಾರೆ. ಪುರಾಣಗಳೆಂದರೆ ಅವು ಕಟ್ಟು ಕಥೆಗಳಲ್ಲ ಅಥವಾ ವಿಜ್ಞಾನ ಪೂರ್ವ ಯುಗದ ಪ್ರಾಗೈತಿಹಾಸಿಕ ಕಾಲದ ಅನಕ್ಷರಸ್ತ ಸಮುದಾಯಗಳ ಕಾಲ್ಪನಿಕ ಸೃಷ್ಟಿಯೂ ಅಲ್ಲ. ಒಂದು ಸಮುದಾಯದ ಸಂದೇಶ, ಘಟನೆ, ಇತಿಹಾಸ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಅಯಾ ಸಮುದಾಯಗಳ ಇತಿಹಾಸ, ಪರಂಪರೆ, ಸಂಸ್ಕೃತಿ ಸಮುದಾಯದಲ್ಲಿನ ವಿಶಿಷ್ಟ ನಂಬಿಕೆಗಳು ಮತ್ತು ಆ ನಂಬಿಕೆಯ ಪಾತಳಿಯಲ್ಲಿ ರೂಪಗೊಂಡ ಸೃಜನಶೀಲ ಸೃಷ್ಟಿಗಳು, ಸುತ್ತಲ ಜಗತ್ತನ್ನು ಕುರಿತು ಆ ಸಮುದಾಯ ಕಂಡುಕೊಂಡ ದರ್ಶನ ಅವರು ಕಾಪಾಡಿಕೊಂಡು ಬಂದ ಮೌಲ್ಯಗಳಿಗೆಲ್ಲ ಪುರಾಣಗಳೇ ಮೂಲ ಆಕಾರಗಳಾಗಿರುತ್ತವೆ ಎಂಬುದನ್ನು ಗಮನಿಸಬಹುದು. ಪುರಾಣಗಳನ್ನು ಕುರಿತು 'ಪುರಾಣವೆಂಬುದು ಕಟ್ಟು ಕಥೆಯಲ್ಲ ಕಥನವಲ್ಲ. ಅಲೌಕಿಕ ಅತಿಮಾನುಷ ವ್ಯಕ್ತಿಗಳ ಸಾಹಸವನ್ನು ನೈಸರ್ಗಿಕ ಘಟನೆಗಳ ಅಸಾಧಾರಣ ವಿಚಿತ್ರ ಪ್ರವೃತ್ತಿಯನ್ನೋ ಅಥವಾ ಐತಿಹಾಸಿಕ ಘಟನೆಯನ್ನೋ ಅದು ವರ್ಣಿಸುವುದಿಲ್ಲ. ಪುರಾಣಗಳ ಪ್ರಧಾನ ಉದ್ದೇಶವೆಂದರೆ

ಪ್ರಕೃತಿಯಲ್ಲೋ, ಸಮಾಜದಲ್ಲೋ ಸ್ಥಾಪಿತವಾದ ಕಟ್ಟು ಕಟ್ಟಳೆಗಳನ್ನು ಸ್ಥಿರಗೊಳಿಸುವುದು, ನಂಬಿಕೆಗಳನ್ನು ದೃಢಪಡಿಸುವುದು. ದೇವ ದೇವತೆಗಳ ಉಪಾಸನೆಯ ಸಮರ್ಪಕತೆ ಸಾರ್ಥಕತೆಯನ್ನು ಸಮರ್ಪಿಸುವುದು ಹಾಗೂ ಸಾಂಪ್ರದಾಯಿಕ ವ್ಯವಸ್ಥೆ ವರ್ತನೆಗಳನ್ನು ಅಲೌಕಿಕ ಆದರ್ಶ ಮತ್ತು ದಂಡನೆಗಳ ಮೂಲಕ ಸುಗಮವಾಗಿ ಕಾಪಾಡುವುದು.'

ಪ್ರತಿಯೊಂದು ಸಮುದಾಯದಲ್ಲಿರುವ ಪುರಾಣಗಳೆಲ್ಲ ಅಯಾ ಸಮುದಾಯವನ್ನು ಪ್ರತಿಯೊಂದು ಹಂತದಲ್ಲೂ ರೂಪಿಸುತ್ತಿರುತ್ತದೆ. ನಂಬಿಕೆ, ಆಚಾರ, ವಿಚಾರ, ಸಂಪ್ರದಾಯಗಳಿಗೆ ಪುರಾಣ ಸಮರ್ಥನೆ ನೀಡುತ್ತಿರುತ್ತದೆ. ಸಮುದಾಯಗಳಲ್ಲಿ ಪುರಾಣಗಳು ಎಲ್ಲಿಯವರೆಗೆ ಜೀವಂತವಾಗಿರುತ್ತವೆಯೋ ಅಲ್ಲಿಯವರೆಗೆ ತನ್ನ ಸಮಾಜ ಮತ್ತು ಸಂಘಟನೆಯನ್ನು ಉಂಟು ಮಾಡುತ್ತದೆ ಮತ್ತು ಸಮಾಜದ ಜನರಲ್ಲಿ ಏಕತೆಯನ್ನು ಉಂಟು ಮಾಡುತ್ತದೆ. ಈ ದೃಷ್ಟಿಯಿಂದ ಪುರಾಣಗಳು ಸಮುದಾಯದಲ್ಲಿ ಸಕ್ರೀಯವಾದ ಪಾತ್ರ ನಿರ್ವಹಿಸುತ್ತವೆ ಮತ್ತು ಜೀವಂತ ಶಕ್ತಿಯಾಗಿರುತ್ತವೆ.

ವಿಶ್ವಕರ್ಮರಲ್ಲಿ ಅನೇಕ ಪುರಾಣಗಳಿರುವುದು ಕಂಡು ಬರುತ್ತದೆ. ಈ ಸಮುದಾಯದಲ್ಲಿ ವಿಶ್ವದ ಸೃಷ್ಟಿ ಹೇಗಾಯಿತು. ವಿಶ್ವಕರ್ಮರು ಪಾರಂಪರಿಕವಾಗಿ ಮುಂದುವರಿಸಿಕೊಂಡು ಬಂದಿರುವ ವೃತ್ತಿಗಳು ಹೇಗೆ ಹುಟ್ಟಿಕೊಂಡವು, ಅವರಲ್ಲಿ ಗೋತ್ರಗಳು ಹೇಗೆ ಉದಯಿಸಿದವು ಮುಂತಾದ ವಿಷಯಗಳನ್ನು ಕುರಿತು ಸ್ಪಷ್ಟವಾದ ನಿಲುವನ್ನು ವ್ಯಕ್ತಪಡಿಸಲು ಅವರು ಅನೇಕ ಪುರಾಣಗಳನ್ನು ಉದಾಹರಿಸುತ್ತಾರೆ.

**ಕಮ್ಮಾರರಲ್ಲಿಯ ಸೃಷ್ಟಿ ಪುರಾಣ:**

ಸೂತ ಮಹರ್ಷಿಗಳು ತಮ್ಮ ಶಿಷ್ಯರಿಗೆ ಶ್ರೀ ಭಗವಾನ್ ವಿಶ್ವಕರ್ಮನ ಬಗ್ಗೆ ಹೇಳುವ ಕಥೆ. ವಿಶ್ವಕರ್ಮನ ಅವತಾರವಾದ ಶ್ರೀ ಮನ್ನಾರಾಯಣನು ಕ್ಷೀರ ಸಾಗರದಲ್ಲಿ ವಿಶ್ರಾಂತಿಯಲ್ಲಿರಲು ಯೋಗ ಮಾಯೆಯು ಆಂತರಿಕ ಪ್ರೇರಣೆಯಿಂದ ಹೊರಬಂದು ಕೈ ಜೋಡಿಸಿ ಎದುರಿಗೆ ನಿಂತು, ಪ್ರಭು ಕೃತ ಯುಗ ಪ್ರಾರಂಭವಾಗುವುದರಲ್ಲಿದೆ. ನನಗಾಗಿ ಆಜ್ಞೆ ಏನು? ಯೋಗಮಾಯೆಯ ನಿವೇದನೆಯನ್ನು ಕೇಳಿ, ನಾರಾಯಣನು ಮುಗುಳ್ನಗೆಯಿಂದ ತನ್ನ ಇಚ್ಚಾಶಕ್ತಿಯನ್ನು ಪ್ರೇರೇಪಿಸಿದನು. ನಾಭಿ ಪ್ರದೇಶದಿಂದ ಸಹಸ್ರದಳ ಕಮಲವನ್ನು ಉತ್ಪನ್ನ ಮಾಡುತ್ತಾನೆ. ಅದರಲ್ಲಿ ಬ್ರಹ್ಮನು ವಿರಾಜಮಾನನಾಗಿರುತ್ತಾನೆ. ನಾರಾಯಣ ರೂಪಿ ವಿಶ್ವಕರ್ಮನು ಯೋಗ ಮಾಯೆಗೆ ಈ ರೀತಿ ಹೇಳುತ್ತಾನೆ . ಸೃಷ್ಟಿ ರಚನೆಯ ಭಾರವನ್ನು ಈ ಬ್ರಹ್ಮನಿಗೆ ವಹಿಸಿಕೊಟ್ಟಿದ್ದೇನೆ. ಅವನ ಕಾರ್ಯದಲ್ಲಿ ನೀನು ಸಹಾಯಕಳಾಗಿರು ಎಂದು ಹೇಳಿದಾಗ ಭಗವಂತನ ಆಜ್ಞೆಯನ್ನು ಶಿರಸಾವಹಿಸಿ ಯೋಗ ಮಾಯೆಯು ಅಂತರ್ಧಾನಳಾಗುತ್ತಾಳೆ.

ಭಗವಂತನ ನಾಭಿಯಿಂದ ಉತ್ಪನ್ನವಾದ ಕಮಲದಲ್ಲಿ ಆಸೀನನಾದ ಬ್ರಹ್ಮನು ಯೋಗ ಮಾಯೆಯ ಶಕ್ತಿಯಿಂದ ಪ್ರೇರೇಪಿತನಾಗಿ ವಿಚಾರದಲ್ಲಿ ತೊಡಗುತ್ತಾನೆ. ನಾನು ಯಾರು? ಎಲ್ಲಿಂದ

ಬಂದೆ? ಯಾಕೆ ಬಂದೆ? ಈ ಪ್ರದೇಶದಲ್ಲಿ ನಾನೊಬ್ಬನೇ ಇರುವೆನೋ ಅಥವಾ ಮತ್ತೆ ಯಾರಾದರೂ ಇದ್ದಾರೆಯೋ? ಈ ಪ್ರಕಾರ ತುಂಬಾ ಸಮಯ ವಿಚಾರ ಮಾಡುತ್ತಿದ್ದರೂ ಯಾವುದೇ ಸಂತೋಷಕರ ಉತ್ತರ ಸಿಗದಿದ್ದುದರಿಂದ ಆತನ ವಿಚಾರಧಾರೆಯು ಬೇರೆ ಕಡೆಗೆ ತಿರುಗುತ್ತದೆ. ಈ ಕಮಲವು ಅನಾಧಿಕಾಲದಿಂದ ಇದ್ದುದಲ್ಲ. ಅಂದರೆ ನಮ್ಮನ್ನು ಯಾರೋ ಉತ್ಪತ್ತಿ ಮಾಡಿದ್ದಾರೆ. ಯಾರು ನಮ್ಮನ್ನು ಉತ್ಪತ್ತಿ ಮಾಡಿರಬಹುದು? ಈ ಕಮಲದ ಮೇಲೆ ನಾನು ಕುಳಿತಿದ್ದೇನೆ. ಈ ಕಮಲವು ಯಾವ ಆಧಾರದಿಂದ ನಿಂತಿದೆ? ಅದನ್ನು ನಾನು ಮೊದಲು ತಿಳಿಯಬೇಕು ಎಂದು ಬ್ರಹ್ಮನು ಕಮಲದ ದೇಟಿನ ಮುಖಾಂತರ ಒಳಗಿಳಿದು ದೀರ್ಘಕಾಲ ಹುಡುಕಿ ತಳಕಾಣದೆ ಮೇಲಕ್ಕೆ ಬಂದು ಕಮಲದ ಮಧ್ಯ ಕುಳಿತುಕೊಂಡು ವಿಚಾರ ಮಗ್ನನಾಗುತ್ತಾನೆ. ಆಗ ಆಕಾಶವಾಣಿಯು ಹೇಳುತ್ತದೆ. ಹೇ ಬ್ರಹ್ಮ " ನೀನು ತಪಸ್ಸಿನಲ್ಲಿ ನಿರತನಾಗು. ಆಗ ನಿನ್ನ ಪ್ರಶ್ನೆಗೆ ಉತ್ತರ ಸಿಗುತ್ತದೆ." ಆಗ ಬ್ರಹ್ಮನು ಆ ವಾಣಿಯು ಯಾವ ಕಡೆಯಿಂದ ಬರುತ್ತದೆ ಎಂದು ಪಕ್ಕಕ್ಕೆ ತಿರುಗಿ ನೋಡಲು ಅಲ್ಲಿ ಒಂದು ಮುಖ ಉತ್ಪತ್ತಿಯಾಗುತ್ತದೆ. ಮತ್ತೆ ಪಕ್ಕಕ್ಕೆ ತಿರುಗಲು ಮತ್ತೊಂದು ಮುಖ ಉತ್ಪತ್ತಿಯಾಗುತ್ತದೆ. ಹೀಗೆ ನಾಲ್ಕು ಕಡೆಗಳಿಗೆ ತಿರುಗಲು ನಾಲ್ಕು ಮುಖಗಳು ಉಂಟಾಗುತ್ತವೆ. ಹೀಗೆ ಪರಿವರ್ತನೆಗೊಂಡ ಬ್ರಹ್ಮದೇವನು ವಿಸ್ಮಿತನಾಗಿ ವಿಚಾರಮಾಡಲು ಆತನ ಮುಖದಿಂದ ಸರಸ್ವತಿಯು ಪ್ರಕಟವಾಗುತ್ತಾಳೆ. ಆತನ ನಾಭಿಯಿಂದ ನಾದಬ್ರಹ್ಮನು ಪ್ರಕಟವಾಗಿ "ಓಂಕಾರ" ರೂಪದಿಂದ ಹೊರಬಂದು ವಾಣಿಯ ರೂಪಧರಿಸಿ ಬ್ರಹ್ಮನ ನಾಲ್ಕು ಮುಖಗಳಿಂದ ನಾಲ್ಕು ವೇದಗಳು ಭಗವಂತನ ಸ್ತುತಿ ಮಾಡುತ್ತಿರುತ್ತವೆ. ಐದನೆಯ ಮುಖವು ಭಗವಂತನನ್ನು ನಿಂದನೆ ಮಾಡುತ್ತಿರುತ್ತದೆ. ಅದರಿಂದ ಕೋಪಗೊಂಡ ಬ್ರಹ್ಮನು ಆ ಐದನೆಯ ಮುಖವನ್ನು ನಾಶಗೊಳಿಸುತ್ತಾನೆ. ಈ ರೀತಿ ವೇದಗಳು ಉತ್ಪತ್ತಿಯಾದ ಬಳಿಕ ಬ್ರಹ್ಮನು ಯೋಗ ಮಾಯೆಯ ಸಹಾಯದಿಂದ ಸೃಷ್ಟಿರಚನಾ ಕಾರ್ಯದಲ್ಲಿ ಮಗ್ನನಾಗುತ್ತಾನೆ.

ಬ್ರಹ್ಮನಿಗೆ ಸೃಷ್ಟಿ ರಚನೆಗೆ ಆದೇಶ ಸಿಕ್ಕ ಬಳಿಕ ಆತನಿಗೆ ಸೃಷ್ಟಿ ರಚನೆಯನ್ನು ಹೇಗೆ ಆರಂಭಿಸಬೇಕು, ಎಲ್ಲಿಂದ ಪ್ರಾರಂಭಿಸಬೇಕು ಎಂಬುದು ತಿಳಿಯದೇ ಯೊಚನೆ ಮಾಡುತ್ತಿರಲು, ವಿಶ್ವಕರ್ಮನು ಆತನ ಚಿಂತೆಯನ್ನು ದೂರಮಾಡಲಿಕ್ಕಾಗಿ ಪ್ರಥ್ವಿಯನ್ನು ನಿರ್ಮಾಣ ಮಾಡುತ್ತಾನೆ. ಜೊತೆಗೆ ಶ್ರೀಗಂಧವನ್ನು ಸೃಷ್ಟಿ ಮಾಡುತ್ತಾನೆ. ಪ್ರಥ್ವಿಯ ಮೂಲಕ ಮೋಹಕ ಸುಗಂಧವು ಬ್ರಹ್ಮನ ಮೂಗಿಗೆ ತಲುಪುತ್ತದೆ. ಗಾಳಿಯು ಪ್ರಥ್ವಿ ಮತ್ತು ಆಕಾಶದ ಸಹಯೋಗದೊಂದಿಗೆ ಸೃಷ್ಟಿಯಾಯಿತು. ನಂತರ ಬ್ರಹ್ಮನ ಸೃಷ್ಟಿ ರಚನೆಗಾಗಿ ಪರಬ್ರಹ್ಮನ ಶಕ್ತಿಗಾಗಿ ಆಹ್ವಾನ ಮಾಡಿದನು. ಆಗ ಆತನಿಗೆ ಜಲ, ಪ್ರಥ್ವಿ, ವಾಯು, ಆಕಾಶ, ತೇಜ ಈ ಪಂಚ ತತ್ವಗಳು ಪ್ರಾಪ್ತವಾದವು. ಈ ಪಂಚತತ್ವ ಗಳಿಂದ ಪಂಚೇಂದ್ರಿಯಗಳ ಸಹಾಯೋಗದೊಂದಿಗೆ ಜಡ ಮತ್ತು ಚೇತನ ಎರಡೂ ರೀತಿಯ ಸೃಷ್ಟಿಯನ್ನು ಸಮಾವೇಶಗೊಳಿಸಿ ಸಂಪೂರ್ಣ ವಿಶ್ವ ನಿರ್ಮಾಣ ಮಾಡಿದನು. ಈ ಸೃಷ್ಟಿಯು ಸತ್ವಗುಣದಿಂದ ಕೂಡಿರುವಂತಹದ್ದು ಎಂದು ಹೇಳಲಾಗುತ್ತದೆ.

ಸೃಷ್ಟಿ ನಿರ್ಮಾಣವಾದ ಬಳಿಕ ಅದರ ಪಾಲನೆಯ ಪ್ರಶ್ನೆ ಉದ್ಭವಿಸಿತು. ಆಗ ವಿಶ್ವಕರ್ಮನು ಸೃಷ್ಟಿ ಪಾಲನೆಯ ನಿಮಿತ್ತ ತನ್ನ ರಜೋಗುಣದಿಂದ ವಿಷ್ಣುವಿನ ರೂಪದಲ್ಲಿ ಪ್ರಕಟವಾದನು. ಸೃಷ್ಟಿ ನಿರ್ಮಾಣ, ಪಾಲನೆ, ವ್ಯವಸ್ಥಿತವಾಗಿ ನಡೆಯುತ್ತಾ ಭೂ ಭಾರವು ಅಧಿಕವಾಗಲು, ವಿಶ್ವಕರ್ಮನು ತನ್ನ ತಮೋಗುಣದಿಂದ ಶಂಕರನನ್ನು ನಿರ್ಮಾಣಮಾಡಿ ಸೃಷ್ಟಿ ಸಂಹಾರ ಕಾರ್ಯಾವನ್ನು ಆತನಿಗೆ ವಹಿಸಿಕೊಟ್ಟನು. ಈ ರೀತಿಯಾಗಿ ಸ್ವತಗುಣ, ರಜೋಗುಣ, ತಮೋಗುಣಗಳ ಆಶ್ರಯದಿಂದ ಬ್ರಹ್ಮ, ವಿಷ್ಣು, ಶಿವ ಸೃಷ್ಟಿಯಾಗಿ ಸೃಷ್ಟಿ ನಿರ್ಮಾಣ ಪಾಲನೆ, ಸಂಹಾರ ಮುಂತಾದ ಕಾರ್ಯಗಳು ಕ್ರಮವಾಗಿ ನಡೆಯ ಹತ್ತಿದವು. ನಂತರ ವಿಶ್ವಕರ್ಮನು ಬ್ರಹ್ಮಾಂಡದ ಭಿನ್ನ ವಿಭಿನ್ನ ರೂಪಗಳಲ್ಲಿದ್ದುಕೊಂಡು ಎಲ್ಲವನ್ನೂ ಗಮನಿಸುತ್ತ ಕ್ಷೀರ ಸಾಗರದಲ್ಲಿ ಉಳಿದುಕೊಂಡನು.

**ವಿಶ್ವಕರ್ಮನಿಂದ ಐದು ಪುತ್ರರ ಸೃಷ್ಟಿ:**

ಒಂದು ಕಾಲದಲ್ಲಿ ವಿಶ್ವಕರ್ಮನು ವಾಸ್ತುದೇವನೊಂದಿಗೆ ಬದರಿಕಾಶ್ರಮದಲ್ಲಿ ವಿರಾಜಮಾನನಾಗಿದ್ದನು. ಭಗವಂತನು ಸರ್ವಸಧಾರಣಾ ಜನರು ಅನುಕರಣೆ ಮಾಡಲಿ ಎಂಬ ಕಾರಣದಿಂದ ತಾನೇ ಸಮಯಾಸ ಸಮಯದಲ್ಲಿ ಯೋಗ, ಸಮಾಧಿ ಮತ್ತು ವಿಭಿನ್ನ ತಪಸ್ಸುಗಳಲ್ಲಿ ನಿರತನಾಗುವನು. ಈ ಸಮಯದಲ್ಲಿ ಇಲಾಚಲನ ಧರ್ಮಪತ್ನಿ ಇಲಾದೇವಿಯು ವಿಶ್ವಕರ್ಮನು ಯೋಗ ಸಮಾಧಿಯಲ್ಲಿರುವುದನ್ನು ನೋಡುತ್ತಾಳೆ. ವಿಶ್ವಕರ್ಮನ ಸಮಾಧಿ ಸ್ಥಿತಿಯಲ್ಲಿರುವ ದೇಹವನ್ನು ಎಷ್ಟು ನೋಡಿದರೂ ತೃಪ್ತಿ ಕಾಣದೇ ಇಲಾದೇವಿಯು ಅನೇಕ ಪ್ರಕಾರಗಳಿಂದ ವಿಶ್ವಕರ್ಮನ ಪೂಜೆ ಮಾಡಿ ಸ್ತೋತ್ರ ಮಾಡುತ್ತಾಳೆ. ಆಗ ವಿಶ್ವಕರ್ಮನು ಯೊಗ ಸಮಾಧಿಯಿಂದ ಜಾಗ್ರತನಾಗಿ ಇಲಾದೇವಿಯ ಕಡೆಗೆ ನೋಡಲು ಆನಂದದಿಂದ ರೋಮಾಂಚಿತಳಾದ ಇಲಾದೇವಿಯು ಪುನಃ ಸ್ತೋತ್ರ ಮಾಡುತ್ತಾಳೆ.

ಆಗ ವಿಶ್ವಕರ್ಮನು ಹೇ ಪುತ್ರಿ ಹೇಳು, ನಿನ್ನ ಇಚ್ಛೆ ಏನಿದೆ ಹೇಳು. ನಾನು ಅವಶ್ಯವಾಗಿ ನಿನ್ನ ಇಚ್ಛೆಯನ್ನು ಪೂರ್ಣ ಮಾಡುವೆ ಎಂದು ವಿಶ್ವಕರ್ಮನು ವಚನ ಕೊಡಲು ಆಗ ಇಲಾದೇವಿಯು ಹೇ ಪರಮಪಿತನಾದ ವಿಶ್ವಕರ್ಮ ಪ್ರಭುವೆ ನಾನು ತಮ್ಮನ್ನು ಏನು ಕೇಳಲಿ. ತಾವು ನನಗೆ ಬೇಕಾಗಿರುವುದೆಲ್ಲವನ್ನೂ ಕೊಟ್ಟಿರುವಿರಿ. ಸದ್ಗುಣ, ಸುಂದರ ರೂಪ, ಸುಖಿ ಪರಿವಾರ, ಮಹಾನ್ ಪತಿ, ತಮ್ಮಲ್ಲಿ ಅಚಲ ಭಕ್ತಿ ಎಲ್ಲವನ್ನೂ ದಯಪಾಲಿಸಿರುವಿ ನಾನು ಕೇವಲ ನಿನ್ನ ಅನುಗ್ರಹವನ್ನು ಬೇಡುತ್ತಿದ್ದೆ. ಅದೂ ಕೂಡ ಇಂದು ದೊರಕಿದೆ. ಇದಕ್ಕೂ ಮೇಲಾಗಿ ತಾವು ಏನಾದರು ಕೊಡಬೇಕೆಂದು ಇಚ್ಛಿಸಿದರೆ ತಾವು ಇಲಾಚಲವನ್ನು ತಮ್ಮ ನಿವಾಸ ಸ್ಥಾನವನ್ನಾಗಿ ಮಾಡಿಕೊಂಡು ಅದನ್ನು ಪವಿತ್ರ ಮಾಡುವುದರ ಜೊತೆಗೆ ನನಗೆ ನಿರಂತರ ತಮ್ಮ ದರ್ಶನ ಹಾಗೂ ಸೇವಾ ಭಾಗ್ಯವನ್ನು ಕರುಣಿಸುವಂತಾಗಲಿ ಹಾಗೂ ಇದನ್ನು ಶಾಶ್ವತ ನಿವಾಸವನ್ನಾಗಿ ಸ್ವೀಕರಿಸುವಂತಾಗಲಿ ಎಂದು ಬೇಡಿಕೊಳ್ಳುತ್ತಾಳೆ.

ಅದಕ್ಕೆ ವಿಶ್ವಕರ್ಮನು "ತಥಾಸ್ತು" ಎಂದು ಹೇಳಿ ಪರಮ ಭಕ್ತಳಾದ ಇಲಾದೇವಿಯ ಅಪೇಕ್ಷೆಯನ್ನು ಸ್ವೀಕರಿಸುವನು. ಇಲಾದೇವಿಯು ಅತ್ಯಂತ ಆನಂದಭರಿತಳಾಗಿ ಪ್ರಭುವಿಗೆ ನಮಸ್ಕರಿಸಿ ನಿರ್ಗಮಿಸುವಳು. ನಂತರ ವಿಶ್ವಕರ್ಮನು ವಾಸ್ತುದೇವನನ್ನು ಕರೆದು ವಾಸ್ತುದೇವ ನಾನು ಇಲಾದೇವಿಗೆ ವಚನ ಕೊಟ್ಟಿರುವುದರ ಕಾರಣ ಅವಳ ಇಚ್ಚೆಯನ್ನು ಪೂರ್ಣ ಮಾಡಲಿಕ್ಕೆ ಇಲೋಲಗಢ (ಕೋಟೆ) ದಲ್ಲಿ ವಾಸ ಮಾಡೋಣ. ಈಗ ನೀನು ವಾಸಕ್ಕೆ ವ್ಯವಸ್ಥೆ ಮಾಡಬೇಕು. ನೀನು ಈ ಕ್ಷಣ ಇಲ್ಲಿಂದ ಹೊರಟು ಇಲೋಲಗಢ ಪೂರ್ವಕ್ಕೆ ಅರ್ಧಕೊಟೆಯನ್ನು ಹತ್ತಿ ಬಲ ಭಾಗಕ್ಕೆ ಅರ್ಧ ಮೈಲಿ ಕ್ರಮಿಸಿದರೆ ಅಲ್ಲಿ ಒಂದು ಗುಹೆ ಸಿಗುತ್ತದೆ. ಗುಹೆಯ ನಾಲ್ಕೂ ಬದಿಯಲ್ಲಿ ಹಣ್ಣು ಹೂವುಗಳಿಂದ ತುಂಬಿದ ವನವಿದೆ. ಆ ಗುಹೆಯಲ್ಲಿಯೇ ಇಲಾಚಲ ಮತ್ತು ಆತನ ಪತ್ನಿ ಇಲಾದೇವಿ ವಾಸವಾಗಿದ್ದಾರೆ. ಅವರು ನಿನ್ನ ಕಾರ್ಯದಲ್ಲಿ ಸಹಾಯ ಮಾಡುತ್ತಾರೆ. ಗುಹೆಯಿಂದ ಮುಂದೆ ಹೋದರೆ ಒಂದು ಗುಪ್ತ ಮಾರ್ಗ ಸಿಗುತ್ತದೆ. ಆ ಮಾರ್ಗದಲ್ಲಿಯೇ ಮುಂದೆ ಬಂದರೆ ಅಲ್ಲಿ ಒಂದು ಮನೋಹರವಾದ ಏಕಾಂತ ಸ್ಥಳ ಸಿಗುತ್ತದೆ. ಅದೇ ಸ್ಥಳದಲ್ಲಿ ನನಗಾಗಿ ನೀನು ವಾಸಕ್ಕೆ ವ್ಯವಸ್ಥೆ ಮಾಡಬೇಕು. ಆ ರಮ್ಯವಾದ ಸ್ಥಳದಲ್ಲಿ ಶೀತಲ ಮತ್ತು ನಿರ್ಮಲ ಜಲದಿಂದ ಕೂಡಿದ ಜಲಾಶಯವನ್ನು, ಪ್ರಶಾಂತವಾದ ಆಶ್ರಮವನ್ನು ನಿರ್ಮಿಸಬೇಕು. ಅಲ್ಲಿ ಯೋಗಸಾಧನೆ, ತಪಸ್ಸು ಮೊದಲಾದ ಆಚರಣೆಗಳನ್ನು ಆಚರಿಸಲು ಅನುಕೂಲವಾಗುವಂತಹ ಒಂದು ಕುಟೀರವನ್ನು ನಿರ್ಮಿಸಬೇಕು. ನಿರ್ಮಾಣ ಕಾರ್ಯ ಮುಗಿದ ಕೂಡಲೇ ನಾನು ಅಲ್ಲಿಗೆ ಬರುತ್ತೇನೆ. ಅಕಸ್ಮಾತ್ ನಿನ್ನ ಕಾರ್ಯದಲ್ಲಿ ಏನಾದರೂ ಅಡ್ಡಿಯುಂಟಾದರೆ ನನ್ನನ್ನು ಸ್ಮರಿಸು ಕೂಡಲೇ ಅದನ್ನು ನಾನು ನಿವಾರಿಸುತ್ತೇನೆ ಎಂದು ವಿಶ್ವಕರ್ಮನು ಹೇಳುತ್ತಾನೆ.

ವಿಶ್ವಕರ್ಮನ ಆಜ್ಞೆಯಂತೆ ವಾಸ್ತುದೇವನು ಇಲೋಲಗಢಕ್ಕೆ ಬಂದು ನಿರ್ಮಾಣ ಕಾರ್ಯ ಪ್ರಾರಂಭಿಸುತ್ತಾನೆ. ನಿರ್ಮಾಣ ಕಾರ್ಯವು ಸಂಪೂರ್ಣವಾಗಿ ಲೋಪದೋಷಗಳಿಲ್ಲದಂತಾಗಿದೆ ಎಂದು ಖಚಿತ ಪಡಿಸಿಕೊಂಡ ಮೇಲೆ ವಾಸ್ತುದೇವನು ಇಲಾಚಲ ಮತ್ತು ಇಲಾದೇವಿಯನ್ನು ಕರೆದುಕೊಂಡು ಬಂದು ಆಶ್ರಮ ಮತ್ತು ಜಲಾಶಯಗಳನ್ನು ತೋರಿಸುತ್ತಾನೆ. ಅವರು ಅದನ್ನು ನೋಡಿ ಸಂತೋಷಪಟ್ಟು ಆ ಸ್ಥಳಕ್ಕೆ ವಿಶ್ವಕರ್ಮನನ್ನು ಬರಲು ಪ್ರಾರ್ಥಿಸುವರು. ಭಕ್ತರ ಕರೆಗೆ ಓಗೊಟ್ಟು ವಿಶ್ವಕರ್ಮನು ಅಲ್ಲಿಯೇ ಪ್ರಕಟನಾಗುವನು. ಆತನನ್ನು ನೋಡಿ ಇಲಾಚಲ ಮತ್ತು ಇಲಾದೇವಿ ಹರ್ಷೋದ್ವೇಗದಿಂದ ಭಗವಂತನ ಸ್ತೋತ್ರ ಮಾಡುವರು. ಅವರಿಬ್ಬರಿಗೂ ರೋಮಾಂಚನಗೊಂಡು ಅವರ ಕಣ್ಣಗಳಿಂದ ಆನಂದ ಭಾಷ್ಪಗಳು ಒಂದೇ ಸಮನೆ ಸುರಿಯುತ್ತಿದ್ದವು. ವಿಶ್ವಕರ್ಮನನ್ನು ಇಬ್ಬರು ಅನನ್ಯ ಭಕ್ತಿಯಿಂದ ಪೂಜೆ ಮಾಡಿ ಆನಂದಗೊಂಡರು.

ವಿಶ್ವಕರ್ಮನು ಇಲೋಲಗಢಕ್ಕೆ ಬಂದೊಡನೆಯೇ ಅಲ್ಲಿಯ ವಾತಾವರಣವು ಏಕಾಏಕಿ ಬದಲಾಯಿತು. ವಸಂತ ಕಾಲದಂತೆ ಕಾಣತೊಡಗಿತು. ಸುತ್ತ ಮುತ್ತಲಿನ ಪ್ರದೇಶದಲ್ಲಿಯ ಮರ ಗಿಡಗಳಿಂದ ಫಲ ಪುಷ್ಪಗಳು ಸಮೃದ್ಧವಾಗಿ ಕಾಣತೊಡಗಿದವು. ಅಹ್ಲಾದಕರವಾದ ವಾಯುವಿನ

ಸ್ಪರ್ಷದಿಂದ ಅದ್ಭುತವಾದ ಸುಖ ಶಾಂತಿಗಳು ಮನಸ್ಸಿಗೆ ತೋರಹತ್ತಿದ್ದವು. ಋಷಿ ಮುನಿಗಳು, ಭಕ್ತ ಜನರು ಅಲ್ಲಿಗೆ ಬಂದು ವಾಸಿಸತೊಡಗಿದರು. ಅಲ್ಲಿಯ ವಾತಾವರಣವು ಶಾಂತವಾಗಿತ್ತು. ಪೂಜೆ, ತಪಸ್ಸು, ವೇದಾಧ್ಯಯನ ಮಾಡುವವರಿಗೆ ಇತರೆ ಯಾವುದೇ ಧ್ವನಿ ಕೇಳಿಸುತ್ತಿರಲಿಲ್ಲ. ಈ ವಾತಾವರಣದ ಶುದ್ಧತೆ ಹಾಗೂ ಪವಿತ್ರತೆಯನ್ನು ಕಾಪಾಡಿಕೊಳ್ಳಲು ಅಲ್ಲಿ ರೋಗ ಅಥವಾ ವ್ಯಾಧಿಗಳಿಗೆ ಪ್ರವೇಶವಿರಲಿಲ್ಲ. ಪರಿಹರಿಸಲಾಗದ ಅಸಾಧ್ಯವಾದ ರೋಗಿಗಳು ಅಲ್ಲಿಗೆ ಬಂದ ಕೂಡಲೇ ಶಾಶ್ವತವಾಗಿ ರೋಗಗಳಿಂದ ಮುಕ್ತರಾಗುತ್ತಿದ್ದರು. ಈ ಪ್ರದೇಶದ ಎಲ್ಲ ಕಡೆಯೂ ಸಾತ್ವಿಕ ವಾತಾವರಣವಿತ್ತು. ಎಲ್ಲಾ ಕಡೆಯಿಂದ ಮಂತ್ರೋಚ್ಚಾರಣೆಗಳು ಕೇಳಿ ಬರುತ್ತಿದ್ದವು. ವಿಶ್ವಕರ್ಮನು ಅಲ್ಲಿ ಬರುವವರೆಗೆ ಈ ಕ್ಷೇತ್ರದಲ್ಲಿ ರೋಗ, ಮಹಾಮಾರಿ ಮೃತ್ಯು ಮೊದಲಾದ ದುರ್ಘಟನೆಗಳು ಎಂದೂ ಇರಲಿಲ್ಲ. ಅಲ್ಲಿಯೇ ಕೆಲ ಕಾಲ ಇದ್ದುಕೊಂಡ ವಿಶ್ವಕರ್ಮನು ನಂತರ ವಾಸ್ತುಪುರುಷನಿಗೆ, ಮುನಿಗಳಿಗೆ, ಎಲ್ಲರಿಗೂ ತನ್ನ ಸ್ಥಳಕ್ಕೆ ಹೋಗಲು ನಿಶ್ಚಯಿಸಿರುವುದನ್ನು ಹೇಳುತ್ತಾನೆ. ವಿಶ್ವಕರ್ಮನ ಇಚ್ಛೆಯನ್ನು ತಿಳಿದ ಇಲೋಲಗಥದ ನಿವಾಸಿಗಳು ಹಾಗು ಋಷಿ ಮುನಿಗಳು ದುಃಖದಿಂದ ನೀರು ತುಂಬಿದ ಕಣ್ಣುಗಳಿಂದ ಪ್ರಾರ್ಥನೆ ಮಾಡತೊಡಗಿದರು. ವಿಶ್ವಕರ್ಮ ಪ್ರಭುವೇ ತಾವು ಇಲ್ಲಿ ವಾಸ ಮಾಡಿ ನಮಗೆಲ್ಲರಿಗೂ ನಿರ್ಭಯದಿಂದಲೂ, ನಿರೋಗದಿಂದಲೂ ಇರುವಂತೆ ಅನುಗ್ರಹ ಮಾಡಿದ್ದೀರಿ, ತಾವು ಹೊರಟು ಹೋದರೆ ನಾವೆಲ್ಲರು ಅನಾಥರಾಗುತ್ತೇವೆ. ಈ ಪ್ರದೇಶವು ಸಂಪೂರ್ಣವಾಗಿ ನಿರ್ಜನವಾಗುವುದು., ತಾವು ಈ ಸ್ಥಾನವನ್ನು ಖಾಯಂ ನಿವಾಸವನ್ನಾಗಿ ಮಾಡಿಕೊಂಡು ನಮ್ಮೆಲ್ಲರನ್ನು ಕೃಥಾರ್ತರನ್ನಾಗಿ ಮಾಡಿರಿ ಎಂದು ಎಲ್ಲರೂ ಕೈಮುಗಿದು ತಮ್ಮಲ್ಲಿ ಬೇಡಿ ಕೊಳ್ಳುತ್ತಿದ್ದೇವೆ. ಪ್ರಭು ನಮ್ಮನ್ನು ನಿರಾಶರನ್ನಾಗಿ ಮಾಡಬೇಡಿರಿ ಎಂದು ಬೇಡಿಕೊಳ್ಳುತ್ತಾರೆ.

ಋಷಿಮುನಿಗಳ ಪ್ರಾರ್ಥನೆಯನ್ನು ಕೇಳಿದ ಪ್ರಜಾವತ್ಸಲನಾದ ವಿಶ್ವಕರ್ಮನು ಅವರನ್ನು ಸಮಾಧಾನ ಪಡಿಸುತ್ತಾ ಭಕ್ತ ಜನರೇ ನಿಮ್ಮೆಲ್ಲರ ಕಷ್ಟಗಳನ್ನು ನಾನು ಅರಿತಿದ್ದೇನೆ. ನಾನು ಇಲ್ಲಿಗೆ ತಪಸ್ಸು ಮಾಡಲು ಬಂದಿದ್ದೇನೆ. ಅದರ ಅವಧಿಯು ಮುಗಿದಿದೆ. ಆದ್ದರಿಂದ ನಾನು ಸ್ವಸ್ಥಾನಕ್ಕೆ ಹೊಗಲೇಬೇಕಾಗಿದೆ. ಹೋಗುವ ಮೊದಲು ನಿಮಗೆಲ್ಲರಿಗೂ ಆಶ್ವಾಸನೆ ಕೊಡುತ್ತಿದ್ದೇನೆ. ಇಲ್ಲಿರುವ ನಿಮಗೆಲ್ಲ ಯಾವುದೇ ವಿಪತ್ತು ಬರುವುದಿಲ್ಲ. ಯಾವ ತರಹದ ಭಯವು ನಿಮ್ಮನ್ನು ಕಾಡಿಸಲಾರದು ಮತ್ತು ನಿಮ್ಮಲ್ಲಿ ಇನ್ನೂ ಯಾವುದಾದರು ಸಂಶಯವಿದ್ದರೆ ತಿಳಿಸಿ ನಿವಾರಣೆ ಮಾಡುತ್ತೇನೆ. ಏನಾದರೂ ಇಚ್ಛೆ ಇದ್ದರೆ ಸಂಕೋಚವಿಲ್ಲದೆ ಕೇಳಿರಿ. ಅದನ್ನು ಪೂರ್ಣ ಮಾಡುತ್ತೇನೆ ಎಂದು ವಿಶ್ವಕರ್ಮನು ಕೇಳುತ್ತಾನೆ.

ವಿಶ್ವಕರ್ಮನ ಅಮೃಥಮಯವಾದ ವಾಣಿಯನ್ನು ಕೇಳಿ ಅಲ್ಲಿ ಉಪಸ್ಥಿತರಿದ್ದ ಋಷಿಮುನಿಗಳು, ದೇವತೆಗಳು, ಇತರೆ ಜನರಿಗೆ ಸ್ವಲ್ಪ ಮಟ್ಟಿಗೆ ದು:ಖ ಕಡಿಮೆಯಾಗುತ್ತದೆ. ದಯಾನಿಧಿಯಾದ ವಿಶ್ವಕರ್ಮ ಪ್ರಭುವೇ ತಾವು ತಮ್ಮ ಸ್ವಸ್ಥಳಕ್ಕೆ ಹೋದ ಬಳಿಕ ಈ ಬ್ರಹ್ಮಾಂಡದಲ್ಲಿ ವಾಸ ಮಾಡುವ

ಜನರ ಪಾಲನೆ ಪೋಷಣೆ ಮಾಡುವವರು, ಅವರ ಸುಖಸಾಧನಗಳನ್ನು ನಿರ್ಮಾಣ ಮಾಡುವವರಾರು. ತಮ್ಮ ಅನುಪಸ್ಥಿತಿಯಲ್ಲಿ ಪ್ರಪಂಚದ ಕಾರ್ಯಗಳೆಲ್ಲವೂ ಅಡೆತಡೆ ಇಲ್ಲದೆ ಕಠಿಣತೆಯಿಲ್ಲದೆ ನಡೆಯುವಂತೆ ತಾವು ಏನಾದರು ಉಪಾಯ ಸೂಚಿಸಬೇಕೆಂದು ಎಲ್ಲರೂ ವಿಶ್ವಕರ್ಮನನ್ನು ಬೇಡಿಕೊಳ್ಳುತ್ತಾರೆ.

ಅವರೆಲ್ಲರ ಮಾತುಗಳನ್ನು ಕೇಳಿದ ವಿಶ್ವಕರ್ಮನು. ವಿಶ್ವಕಲ್ಯಾಣಕ್ಕಾಗಿ ತನ್ನ ಐದು ಮುಖಗಳಿಂದ ಐದು ಪುತ್ರರನ್ನು ಉತ್ಪತ್ತಿ ಮಾಡುತ್ತಾನೆ. ಸದ್ಯೋಜಾತ ನಾಮಕ ಪ್ರಥಮ ಮುಖದಿಂದ ಮನು ಅಥವಾ ಸಾನಗ, ವಾಮದೇವ ನಾಮಕ ದ್ವಿತೀಯ ಮುಖದಿಂದ ಮಯ ಅಥವಾ ಸನಾತನ, ಅಘೋರನಾಮಕ ತೃತೀಯ ಮುಖದಿಂದ ತ್ವಷ್ಟ ಅಥವಾ ಅಹಭೂವನ, ತತ್ಪುರುಷ ನಾಮಕ ಚತುರ್ಥ ಮುಖದಿಂದ ಪ್ರತ್ನ ಅಥವಾ ಶಿಲ್ಪ, ಈಶಾನ್ಯ ನಾಮಕ ಪಂಚಮ ಮುಖದಿಂದ ದೈವಜ್ಞ ಅಥವಾ ವಿಶ್ವಜ್ಞ ಅಥವಾ ಸಂಪೂರ್ಣ ಎಂಬ ಹೆಸರಿನಿಂದ ಐದು ಪುತ್ರರನ್ನು ಸೃಷ್ಟಿ ಮಾಡುತ್ತಾನೆ. ಈ ಐದು ಪುತ್ರರನ್ನು ಬ್ರಾಹ್ಮಣವರ್ಗದಲ್ಲಿ ಹೆಸರಿಸಿದ ವಿಶ್ವಕರ್ಮನು ಅವರನ್ನು ಶಿಲ್ಪಕಲೆಯಲ್ಲಿ ಪಾರಂಗತನಾಗಿ ಮಾಡುವನು. ಈ ಐದು ಮಂದಿ ಪುತ್ರರು ಬರುಬರುತ್ತಾ ಬ್ರಹ್ಮರ್ಷಿಗಳೆಂದು ಕರೆಯಲ್ಪಟ್ಟು ಅವರ ಸಂತಾನವೆಲ್ಲ ವಿಶ್ವಕ್ಕೆ ಮೊದಲ ಬ್ರಾಹ್ಮಣರಾಗಿದ್ದರಿಂದ "ವಿಶ್ವಬ್ರಾಹಣ" ರೆಂದು ಪ್ರಸಿದ್ಧಿಯಾದರು. ವಿಶ್ವದಲ್ಲಿ ಯಾವುದೇ ನಿರ್ಮಾಣ ಕಾರ್ಯವಿರಲಿ ಅದಕ್ಕೆ ಮೂಲದಲ್ಲಿ ಈ ಪಂಚಪುತ್ರರು ಇದ್ದೇ ಇರುವರು.

ಕಮ್ಮಾರರು ವಿಶ್ವಕರ್ಮನ ಸದ್ಯೋಜ್ಯಾತ ನಾಮಕ ಪ್ರಥಮ ಮುಖದಿಂದ ಮನು ಅಥವಾ ಸನಾಗ ಗೋತ್ರದವರಾಗಿದ್ದು ಇವರ ಮೂಲ ಕಸುಬು ಕಬ್ಬಿಣ ಕೆಲಸವಾಗಿರುತ್ತದೆ. ಕಬ್ಬಿಣದಿಂದಲೇ ಸೃಷ್ಟಿ ಎನ್ನುವುದು ಜಗತ್ತಿನ ನಿಯಮ. ಈ ನಿಯಮದ ಅನುಸಾರ ಕಮ್ಮಾರರು ಪ್ರಜೆಗಳಿಗೆ ಕೃಷಿ ಚಟುವಕೆಗಳಲ್ಲಿ ಬೇಕಾಗುವಂತಹ ಕಬ್ಬಿಣದ ವಸ್ತುಗಳನ್ನು ತಯಾರಿಸಿ ಕೊಡುವುದರ ಮೂಲಕ ನಾಗರಿಕತೆ ನಿರ್ಮಾಣ ಮಾಡುವುದರಲ್ಲಿ ಕಾರಣೀಭೂತರಾದರು.

ಪುರಾಣಗಳಿಗೂ ಆಯಾ ಸಮುದಾಯಗಳಿಗೂ ಅವಿನಾಭಾವ ಸಂಬಂಧವಿದೆ. ದೇವರ ಕಲ್ಪನೆ, ತತ್ವ ಮತ್ತು ಆಚಾರಗಳಷ್ಟೇ ಅಲ್ಲ ಅವುಗಳಿಗಿಂತ ಮಿಗಿಲಾದ ಮಹತ್ವ ಪುರಾಣಗಳಿಗುಂಟು. ಮತೀಯ ಕ್ಷೇತ್ರದಲ್ಲಿ ಪುರಾಣಗಳ ಕ್ಷೇತ್ರ ಬಹಳ ವ್ಯಾಪಕವಾದದು. ದೇವರನ್ನು ಸೃಷ್ಟಿಸಿದ್ದು, ತತ್ವಗಳನ್ನು ಕಲ್ಪಿಸಿದ್ದು, ಆಚಾರಗಳನ್ನು ಹೇಳಿದ್ದು, ವೃತ್ತಿಗಳನ್ನು ಸೃಷ್ಟಿಸಿದ್ದು, ವಿಶ್ವವನ್ನು ಸೃಷ್ಟಿಸಿದ್ದು, ಪಂಚ ಭೂತಗಳ ನಿರ್ಮಾಣ, ಮಾನವ ಸೃಷ್ಟಿ ಹೀಗೆ ಅನೇಕ ವಿಷಯಗಳನ್ನು ಪುರಾಣಗಳು ತೋರಿಸಿಕೊಡುತ್ತವೆ. ಇವು ಪುರಾಣದ ಆರಂಭದ ಭಾಗಗಳಾಗಿದ್ದವು. ಬರುಬರುತ್ತಾ ಪುರಾಣಗಳಲ್ಲಿ ಹಾಗು ತತ್ವಶಾಸ್ತ್ರ ಹಾಗೂ ದೈವಶಾಸ್ತ್ರಗಳು ಬೆಳೆದು ಪುರಾಣದ ಸಾರ್ವಭೌಮತ್ವದ ಶಾಂತಿ ಅಧಿಕವಾಗುತ್ತ ನಡೆಯಿತು. ಸಮುದಾಯಗಳು ಮುಂದುವರೆದಂತೆಲ್ಲ ಸಮುದಾಯಗಳಲ್ಲಿ ಪ್ರಚಲಿತವಿದ್ದ ಪುರಾಣಗಳು

ಮರುಸೃಷ್ಟಿಯಾಗಿರುವುದನ್ನು ಅನೇಕ ಸಮುದಾಯಗಳಲ್ಲಿ ಕಾಣುತ್ತೇವೆ. ಅನೇಕ ಸಮುದಾಯಗಳಲ್ಲಿಯ ಸಾಂಸ್ಕೃತಿಕ ನಾಯಕ-ನಾಯಕಿಯರನ್ನು ಪೌರಾಣಿಕ ವ್ಯಕ್ತಿಗಳನ್ನಾಗಿ ಚಿತ್ರಿಸಿರುವುದು ಕಂಡು ಬರುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಪೌರಾಣಿಕ ವ್ಯಕ್ತಿಗಳನ್ನು ಚಾರಿತ್ರಿಕ ವ್ಯಕ್ತಿಗಳನ್ನಾಗಿ ರೂಪಿಸುವ ಮತ್ತು ಚಾರಿತ್ರಿಕ ವ್ಯಕ್ತಿಗಳನ್ನು ಪೌರಾಣಿಕ ವ್ಯಕ್ತಿಗಳನ್ನಾಗಿಸಿರುವುದು ಕಂಡುಬರುತ್ತದೆ. ಪ್ರಬಲವಾದ ಸಮುದಾಯಗಳು ಪೌರಾಣಿಕ ವ್ಯಕ್ತಿಗಳನ್ನು ಚಾರಿತ್ರಿಕ ವ್ಯಕ್ತಿಗಳನ್ನಾಗಿ ರೂಪಿಸುತ್ತವೆ. ಇದಕ್ಕೆ ವಿರುದ್ಧವಾಗಿ ಬುಡಕಟ್ಟು ಮತ್ತು ಜನಪದ ಸಾಂಸ್ಕೃತಿಕ ನಾಯಕರನ್ನು, ವೀರರನ್ನು ಪೌರಾಣಿಕ ವ್ಯಕ್ತಿಗಳನ್ನಾಗಿಸಿ, ದೈವಗಳಾಗಿ ಚಿತ್ರಿಸಿರುವುದನ್ನು ಅವರಲ್ಲಿ ಪ್ರಚಲಿತದಲ್ಲಿರುವ ಪುರಾಣ ಹಾಗೂ ಕಾವ್ಯಗಳ ಮೂಲಕ ಕಾಣುತ್ತೇವೆ.

'ಯಾವ ಸಂಸ್ಕೃತಿ ಪ್ರಬಲವಾಗಿರುತ್ತದೊ, ಯಾವ ಧೋರಣೆಗಳು ಬದುಕನ್ನು ಮುಖ್ಯವಾಗಿ ರೂಪಿಸುತ್ತದೋ ಅದು ಪುರಾಣಗಳ ತಿರುಳನ್ನು ನಿರ್ಧರಿಸುತ್ತದೆ. ಬೇಟೆ ಅಥವಾ ಆಹಾರ ಸಂಗ್ರಹಣೆ ಹಾಗೂ ಬದುಕಿನಲ್ಲಿ ಅತೀ ಮುಖ್ಯವಾದ ವೃತ್ತಿಗಳ ಬಗೆಗೆ ಈ ಪುರಾಣಗಳು ಹೇಗೆ ಹುಟ್ಟಿದವು ಎಂಬುದರ ಬಗೆಗೆ ಪ್ರಾಮುಖ್ಯತೆಯನ್ನು ನೀಡುತ್ತವೆ. ಉದಾಹರಣೆಗೆ ವ್ಯವಸಾಯ ಮುಖ್ಯವಾದ ಸಮಾಜದ ಪುರಾಣಗಳಲ್ಲಿ ಬೇಸಾಯದ ಕೆಲಸಗಳಿಗೆ ಪ್ರಾಮುಖ್ಯತೆ ನೀಡುತ್ತವೆ. ಅಷ್ಟೇ ಅಲ್ಲ ಈ ಸಂಗತಿಯನ್ನು ಅತ್ಯಂತ ಪಾಚೀನ ಕಾಲದ ಆರಂಭದಿಂದ ಅಥವಾ ಅನಾದಿಯಿಂದ ಬೆಳೆದು ಬಂದಂತೆ ಚಿತ್ರಿಸುತ್ತವೆ."[೧೪]

ವಿಶ್ವಕರ್ಮರಲ್ಲಿರುವ ಐದು ವೃತ್ತಿಗಳು ಈ ಭೂಮಿಯ ಮೇಲೆ ಹುಟ್ಟಲಿಕ್ಕೆ ಯಾರು ಕಾರಣರಾದರು ಎಂಬುದನ್ನು ಪುರಾಣಗಳ ಮೂಲಕ ಸ್ಪಷ್ಟಪಡಿಸುತ್ತಾರೆ.

**೬.೫ ಗಾದೆ:**

'ಗಾದೆ ವೇದಕ್ಕೆ ಸಮಾನ' ಎಂಬ ಮಾತು ಜನಪದರಲ್ಲಿದೆ. ವೇದ ಸುಳ್ಳಾದರೂ ಆಗಬಹುದು ಆದರೆ 'ಗಾದೆ' ಸುಳ್ಳಾಗಲಾರದು ಎಂಬ ಲೋಕೊಕ್ತಿ ಇದೆ. ವೇದ ಕೆಲವರ ಸ್ವತ್ತಾಗಿದ್ದರೆ ಗಾದೆ ಸರ್ವರ ಸ್ವತ್ತಾಗಿದೆ. ಗಾದೆ ಮಾತುಗಳು ಜೀವನದ ಅನುಭವದಿಂದ ಹುಟ್ಟಿಕೊಂಡಿವೆ. ಹೀಗಾಗಿ ಸಮುದಾಯಗಳ ಮೌಖಿಕ ಸಾಹಿತ್ಯದಲ್ಲಿ ಗಾದೆಮಾತುಗಳು ಅತ್ಯಂತ ಜನಪ್ರಿಯವಾಗಿವೆ. ಜನಪದ ಸಮಾಜದಲ್ಲಿ ಗಾದೆ ಮಾತುಗಳು ವ್ಯಾಪಕವಾದ, ಪ್ರಭಾವಶಾಲಿಯಾದ, ಆಕರ್ಷಣೀಯವಾದ ಮತ್ತು ಪ್ರಯೋಜನಕಾರಿಯಾದ ಜನಪ್ರಿಯ ಮಾಧ್ಯಮವಾಗಿದೆ. ಗಾದೆ ಮಾತುಗಳು ಮಾನವನಿಗೆ ಬದುಕನ್ನು ರೂಪಿಸಿಕೊಳ್ಳಲು ಅನುಕೂಲ ಮಾಡಿಕೊಟ್ಟಿರುತ್ತವೆ.

'ಆಡು ಮುಟ್ಟದ ಸೊಪ್ಪಿಲ್ಲ ಗಾದೆ ಹೇಳದ ವಿಷಯವಿಲ್ಲ' ಎಂಬ ಮಾತು ಪ್ರಚಲಿತದಲ್ಲಿದೆ. ' ಕಳ್ಳ-ಬಳ್ಳಿ, ಜ್ಞಾನಿ-ಅಜ್ಞಾನಿ, ನಿರಕ್ಷರಿ-ಸಾಕ್ಷರ, ವೈದಿಕ-ಅವೈದಿಕ, ಸಾಮಾನ್ಯ-ಅಸಮಾನ್ಯ, ಕಾರ್ಮಿಕ-ಮಾಲಿಕ, ಕವಿ-ಪಂಡಿತ, ಬಡುವ-ಬಲ್ಲಿದ, ಆಳು-ಅರಸು, ಮೇಲು-ಕೀಳು, ಜಾತಿ, ಮತ, ವೃತ್ತಿ ಎಂಬ ತಾರತಮ್ಯವಿಲ್ಲದೆ ಅದು ಸರ್ವ ಮಾನವರ ಬಾಳನ್ನು ಪ್ರವೇಶಿಸುತ್ತದೆ .ಗೀತೆ, ಕಥೆ,

ಲಾವಣಿ, ಮೊದಲಾದವುಗಳ ವಾಸನೆಯ ಸೋಂಕೇ ಇಲ್ಲದ ಗ್ರಾಮೀಣ ಮುಗ್ಧರ ಸ್ಮೃತಿಕೋಶದಲ್ಲಿ ನೂರಾರು ಗಾದೆ ಮಾತುಗಳು ಸುರಕ್ಷಿತವಾಗಿರುತ್ತವೆ. ಅದೇ ಅವರ ಸಾರಸ್ವತ ಸಂಪತ್ತು. ಯಾವ ಅಂತಸ್ತಿನ ಜನರೇ ಇರಲಿ ಮಾತುಕತೆಗಳಲ್ಲಿ, ಉಪದೇಶಗಳಲ್ಲಿ, ಬೋಧನೆಯಲ್ಲಿ, ಚರ್ಚೆಗಳಲ್ಲಿ, ಬರಹಗಳಲ್ಲಿ, ಭಾಷಣಗಳಲ್ಲಿ, ಭಾಷೆ ಬಳಸುವೆಡೆಯಲ್ಲಿ ಗಾದೆ ಮಾತುಗಳು ಸಹಜವಾಗಿ ಸಂದರ್ಭಕ್ಕೆ ತಕ್ಕಂತೆ ಬಾಯಿಯಿಂದ ಪಟಪಟನೇ ಹೊರ ಬರುತ್ತಿರುತ್ತದೆ'.[೧೫]

ಗಾದೆ ಮಾತುಗಳು ಚಿಕ್ಕದಾಗಿ ಚೊಕ್ಕದಾಗಿರುತ್ತವೆ. ಗಾದೆಗಳಲ್ಲಿ ಮಾತು ಮಿತವಾಗಿರಬೇಕು, ಹಿತವಾಗಿರಬೇಕು, ಅರ್ಥಗರ್ಭಿತವಾಗಿರಬೇಕು ಮತ್ತು ಅನುಭವಗಳಿಂದ ಕೂಡಿದ ಮಾರ್ಗದರ್ಶಕನಂತಿರಬೇಕು. ಗಾದೆ ಮಾತು 'ಹಿಡಿದರೆ ಹಿಡಿತುಂಬ ಬಿಟ್ಟರೆ ಮನೆತುಂಬ' ಎಂಬ ಮಾತಿನಂತಿರಬೇಕು. ಗಾದೆಗಳನ್ನು ವಿಶ್ಲೇಷಿಸುತ್ತಾ ಹೋದರೆ ಅವುಗಳ ಹಿಂದೆ ವಿಶಾಲವಾದ ಅನುಭವ ಇರುತ್ತದೆ. ಸಾವಿರಾರು ಮಾತುಗಳುಳ್ಳ ಭಾಷಣ ಮಾಡುವುದಕ್ಕಿಂತ ನಾಲ್ಕೇ ಶಬ್ಧಗಳಿರುವ ಒಂದು ಮುತ್ತಿನಂತಾ ಮಾತನ್ನು ಹೇಳಬೇಕು ಎಂದು ಗ್ರಾಮೀಣ ಪ್ರದೇಶದ ಜನರು ಬಯಸುತ್ತಾರೆ.

ಇಂತಹ ಗಾದೆ ಮಾತುಗಳು ಹೆಚ್ಚಾಗಿ ಗ್ರಾಮೀಣ ಪ್ರದೇಶದ ಜನರಲ್ಲಿ ಬಳಸಲ್ಪಡುತ್ತಿರುವುದನ್ನು ಕಾಣುತ್ತೇವೆ. ಈ ಗಾದೆ ಮಾತುಗಳು ಒಂದು ಸಮುದಾಯಕ್ಕೆ, ಒಂದು ವೃತ್ತಿಗೆ, ಒಂದು ಪ್ರದೇಶಕ್ಕೆ ಸೀಮಿತವಾಗಿರುವುದಿಲ್ಲ. ಇವು ಸ್ವತಂತ್ರವಾಗಿರುವಂತಹವು. ಯಾರು ಬೇಕಾದರೂ ಸಮಯ ಸಂದರ್ಭಕ್ಕೆ ತಕ್ಕಂತೆ ಬಳಸಬಹುದು. ಇಂತಹ ಗಾದೆ ಮಾತುಗಳು ಕಮ್ಮಾರರ ಸಮುದಾಯದಲ್ಲಿಯೂ ಕಂಡು ಬರುತ್ತವೆ. ಇವು ಕೇವಲ ಕಮ್ಮಾರ ಸಮುದಾಯದಲ್ಲಿ ಮಾತ್ರ ಪ್ರಚಲಿತದಲ್ಲಿವೆ. ಎಂದು ತಿಳಿದುಕೊಳ್ಳಬಾರದು.

ಕಮ್ಮಾರರು ಸಾಮಾನ್ಯವಾಗಿ ಬಳಸುತ್ತಿರುವ ಗಾದೆ ಮಾತುಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧. ಹಾದಿನಲ್ಲಿ ಹಸಿ ಕಡಿಯಬಾರದು ಒಣಗಲು ಮುರಿಬಾರದು

೨. ಕೆಡ್ಡ ಸದೆ ದಿನಗಳಲ್ಲಿ ಭೂಮಿ ಅಲ್ಲಾಡಬಾರದೆಂಬ ನಂಬಿಕೆ

೩. ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ

೪. ಬೇಲಿ ಎದ್ದು ಹೊಲ ಮೇಯ್ದಂತೆ

೫. ಹಾಡಪ್ಪ ದಾಸಪ್ಪನ ಕರ್‍ಕೊಂಡು ಹೊದಂತೆ

೬. ಹುಟ್ಟ ಗುಣ ಸುಟ್ರು ಹೋಗೊದಿಲ್ಲ

೭. ಅಕ್ಕ ಸತ್ರೆ ಅಮವಾಸ್ಯೆ ನಿಲ್ಲುವುದಿಲ್ಲ

೮. ದಂಡಿಗೆ ಹೊಕ್ಕೇನಂತ್ಹೇಳಿ ಮೂರು ಕೋಳಿ ತಿಂದ

೯. ನೂರು ಇಲಿ ತಿಂದು ಬೆಕ್ಕು ಹಜ್‌ಗೆ ಹೋದಂತೆ

೧೦. ಬಡವರ ಮನೆ ಊಟ ಚಂದ, ಶ್ರೀಮಂತರ ಮನೆ ನೋಟ ಚಂದ

೧೧. ಓತಿಕಟ್ಟಕ್ಕೆ ಬೇಲಿ ಸಾಕ್ಷಿ

೧೨. ಮುನ್ನೋಡಿಯಿಂದ ಮುಕ್ಕಿ ತಕ್ಕೋ ಅಂದ್ರೆ ಜೋತಾಡುದೇನಂದ

೧೩. ಕೋತಿ ತಾನು ಕೆಡೋದು ಅಲ್ದ ವನವನ್ನೆಲ್ಲಾ ಕೆಡಿಸ್ತು

೧೪. ಎಡಗಣ್ಣಿಗೆ ಬಲಗಣ್ಣು ಹಗೆ

೧೫. ಹಾಲು ಅನ್ನ ತಿಂದು ಹಾಸಿಗ್ಯಾಗ ಇರು ಮಗಳೆ ಅಂದ್ರೆ ಊರ ಸುತ್ತಾಡ್ತೇನಿ ಅಂದ್ಳಂತೆ

೧೬. ಎತ್ತು ಏರಿಗೆ ಎಳದ್ರೆ ಕೋಣ ಕೆರೆಗೆ ಎಳೀತು

೧೭. ಪುರಾಣ ಹೇಳೊಕೆ ಚಂದ ಬದ್ನೆಕಾಯಿ ತನ್ನೊಕೆ ಚಂದ

೧೮. ಪಾಪಿ ಸಮುದ್ರಕ್ಕೆ ಹೋದರೂ ಮೊಣಕಾಲು ಕೆಳಗೆ ನೀರು

೧೯. ನೂಲಿನಂತೆ ಸೀರೆ, ತಾಯಿಯಂತೆ ಮಗಳು

೨೦. ಬಿದ್ದಕಲ್ಲು ಅಗಸಂದು, ಎದ್ದ ಕಲ್ಲು ಪೂಜಾರಿಯದ್ದು

೨೧. ಬಡವನ ಹೆಂಡ್ರು ಊರಿಗೆಲ್ಲಾ ಸೊಸೆ

೨೨. ಬೆತ್ಲೆ ಇರೊ ಊರಲ್ಲಿ ಬಟ್ಟೆ ತೊಟ್ಟೋರು ಹುಚ್ರು

೨೩. ಓದು ಒಕ್ಕಾಲು ಬುದ್ಧಿ ಮುಕ್ಕಾಲು

೨೪. ಹಳ್ಳಿ ಊರಾಗ ಹನುಮ ಚಂದ

೨೫. ಹಸಿದು ಹಲಸ್ನಣ್ಣು ತಿನ್ನು ಉಂಡು ಮಾವಿನ ಹಣ್ಣು ತಿನ್ನು

೨೬. "ಕಮ್ಮಾರಂದ್ರೆ ಮೂರು ಕಾಸಿನ ಕಬ್ಬಿಣಕ್ಕೆ ನಾಲಿಗೆ ಹಚ್ಚೋನು.

೨೭. ಕಮ್ಮಾರನ ಬುದ್ಧಿ ಕುಂಡಿಮ್ಯಾಗ ಮೂರು ಬರೆ

೨೮. ಇರಿವೇ ಬುದ್ಧಿ ಕಮ್ಮಾರಗ, ಗೊರವನ ಬುದ್ಧಿ ಮಡಿವಾಳಗ"[೧೬]

ಉಡುಪಿ, ಮಂಗಳೂರು, ಕೊಳ್ಳೆಗಾಲ ಪರಿಸರದಲ್ಲಿ ಪ್ರಚಲಿತವಿರುವ ಅನೇಕ ಗಾದೆ ಮಾತುಗಳನ್ನು ಕಮ್ಮಾರರು ಬಳಸುತ್ತಿರುವುದು ಕಂಡು ಬರುತ್ತದೆ.

**೬.೬. ಒಗಟುಗಳು:**

ಗ್ರಾಮೀಣ ಪ್ರದೇಶದ ಜನರಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚಾಗಿರಬಹುದು. ಆದರೆ ಅವರಲ್ಲಿರುವ ಬುದ್ಧಿ ಶಕ್ತಿಯನ್ನು ಅವರು ಕಟ್ಟಿರುವ ಒಗಟುಗಳ ಮೂಲಕ ಕಂಡುಕೊಳ್ಳಬಹುದಾಗಿದೆ.

ಜನಪದರು ಊಟ ಮಾಡಿ ವಿಶ್ರಾಂತಿ ಪಡೆಯುತ್ತಿರುವ ಸಂದರ್ಭದಲ್ಲಿ, ಕಟ್ಟೆಯ ಮೇಲೆ ಕುಳಿತು ಹರಟೆ ಹೊಡೆಯುತ್ತಿರುವಲ್ಲಿ ಒಗಟುಗಳನ್ನು ಹೇಳುವ ಪರಂಪರೆ ಒಂದು ಕಾಲಕ್ಕಿತ್ತು. ಒಬ್ಬ ವ್ಯಕ್ತಿ ಇನ್ನೊಬ್ಬನ ಬುದ್ಧಿಶಕ್ತಿಯನ್ನು ಅವನ ಯೊಚನಾಶಕ್ತಿಯನ್ನು ಪರೀಕ್ಷಿಸಲು ಒಗಟುಗಳನ್ನು ಹೇಳುತ್ತಿದ್ದರು. ಗೂಢಾರ್ಥಗಳನ್ನು ಹೊಂದಿದ ಒಗಟುಗಳನ್ನು ಬಿಡಿಸಲು ವಿವರಣೆ ನೀಡುತ್ತಿರುವಾಗ ಕೇಳುಗರಿಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ಒಗಟುಗಳಲ್ಲಿ ಕೆಲವು ಅಶ್ಲೀಲವೆನಿಸಿದರೂ ಅವುಗಳಲ್ಲಿ

ಅಡಗಿರುವ ಅರ್ಥವನ್ನು ತಿಳಿದುಕೊಂಡಾಗ ಜನಪದರ ಬುದ್ಧಿ ಶಕ್ತಿಯ ಅರಿವು ನಮಗಾಗುತ್ತವೆ. ಕೆಲ ಗ್ರಾಮೀಣ ಪ್ರದೇಶಗಳಲ್ಲಿ ಒಗಟುಗಳ ಸ್ಪರ್ಧೆಗಳೂ ಒಂದು ಕಾಲಕ್ಕೆ ಏರ್ಪಡುತ್ತಿದ್ದವು ಎಂದು ಕೇಳಿದ್ದೇದ್ದೇನೆ. ಇಂದು ಒಗಟುಗಳನ್ನು ಹೇಳುವರು ಕಡಿಮೆಯಾಗುತ್ತಿರುವುದು ಕಂಡುಬರುತ್ತದೆ.

"ಮೂಲೆ ಹಿಡಿದವ ಮಿಂಡನಲ್ಲ
ಕೈಯ ಹಿಡಿದವ ಗಂಡನಲ್ಲ"

ಹಾಗಾದರೆ ಅವರು ಯಾರು ಎಂದು ಕೇಳಿದಾಗ

ಈ ಒಗಟನ್ನು ಕೇಳಿದವರು ಕೆಲ ಕ್ಷಣ ತಬ್ಬಿಬ್ಬಾಗಬಹುದು. ಇಂತಹ ಒಗಟನ್ನು ಕೇಳಿದಾಗ ಅದರಲ್ಲಿರುವ ಗೂಢಾರ್ಥ ಏನಿರಬಹುದು ಎಂದು ಯೋಚಿಸಲಿಕ್ಕೆ ಹಚ್ಚುತ್ತದೆ. ಅದರ ಉತ್ತರ ಕೇಳಿದಾಗ ಆಶ್ಚರ್ಯವೂ ಆಗುತ್ತದೆ. ಈ ಮೇಲಿನ ಒಗಟಿನ ಉತ್ತರ ಮಗು ಮತ್ತು ಬಳೆಗಾರ.

ಒಗಟುಗಳನ್ನು ಪ್ರಾಚೀನ ಕಾಲದಿಂದಲೂ ಕವಿಗಳು ತಮ್ಮ ಕಾವ್ಯ, ಕಥೆ, ತ್ರಿಪದಿ, ವಚನ ಮುಂತಾದವುಗಳಲ್ಲಿ ಬಳಸುತ್ತಾ ಬಂದಿದ್ದಾರೆ. ಒಗಟು ಎಂಬ ಜಾನಪದ ಸಾಹಿತ್ಯ ಪ್ರಕಾರದ ಪರಿಚಯವಿರಲಿ ಎಂಬ ಉದ್ದೇಶಕಾಗಿ ಪ್ರಾಥಮಿಕ ಶಾಲೆಯ ಕನ್ನಡ ಪಠ್ಯ ಪುಸ್ತಕದಲ್ಲಿ ಅಳವಡಿಸಿದ್ದೂ ಉಂಟು.

ಸರ್ವಜ್ಞ ತನ್ನ ಒಂದು ತ್ರಿಪದಿಯಲ್ಲಿ

"ಕಲ್ಲರಳಿ ಹೂವಾಗಿ ಎಲ್ಲರಿಗೂ ಬೇಕಾಗಿ
ಮಲ್ಲಕಾರ್ಜುನನ ಶಿಖರಕ್ಕೆ ಬೆಳಕಾಗಿ
ಬಲ್ಲವರು ಪೇಳಿಸರ್ವಜ್ಞ" (ಉತ್ತರ ಸುಣ್ಣ)

ಇಂತಹ ಅನೇಕ ಒಗಟುಗಳನ್ನು ಸರ್ವಜ್ಞ ಬಳಸಿದ್ದಾನೆ. ವಚನಕಾರರು ಅನೇಕ ಒಗಟುಗಳನ್ನು ತಮ್ಮ ವಚನಗಳಲ್ಲಿ ಬಳಸಿದ್ದಾರೆ.

ಕಮ್ಮಾರರು ಅನೇಕ ಒಗಟುಗಳನ್ನು ಅಲ್ಲಲ್ಲಿ ಬಳಸುತ್ತಿರುವುದು ಕಂಡು ಬರುತ್ತದೆ.

೧. "ಹಚ್ಚೆನು ಹಕ್ಕಿ ಪುಚ್ಚ ತೆಗೆದು
ಕಲ್ಲು ಮೇಲಿಟ್ಟು ಕಾರ ಅರೆದರು" ಉತ್ತರ: ಕೊತ್ತಂಬರಿ ಸೊಪ್ಪು

೨. "ಹಳದಿ ಸೀರೆ ಕರಿಯ ತುರುಬು
ಮೈ ಮೇಲೆ ತುಂಬಾ ಕೂದಲು" ಉತ್ತರ: ಮಾವಿನ ಹಣ್ಣು

೩. "ಇಷ್ಟೇ ಇಷ್ಟು ಗದ್ದಿ
ಗದ್ದಿಗೆ ನೀರು
ನೀರುಗೆ ಬೇರು ಬೇರಿಗೆ ಬೆಂಕಿ" ಉತ್ತರ: ದೀಪ

೪. "ಎರಡು ಕಂಬ
ಕಂಬದ ಮೇಲೆ ಮನಿ

ಮನಿ ಮೇಲೆ ರೆಕ್ಕೆ, ರೆಕ್ಕೆ ಮೇಲೆ ಗುಡ್ಡ

ಗುಡ್ಡದ ಮೇಲೆ ಹುಲ್ಲು, ಹುಲ್ಲಿನ ಮೇಲೆ ದಾರಿ" ಉತ್ತರ: ಮನುಷ್ಯ

೫. "ಎರಡು ಹೆಣ

ನಾಲ್ಕು ಪರದೆ" ಉತ್ತರ ಕಣ್ಣು

೬. ಅಪ್ಪ ಆಕಾಶಕ್ಕೆ

ಅಬ್ಬೆ ಪಾತಾಳಕ್ಕೆ

ಮಗಳು ಮದುವೆಗೆ

ಮಗ ವ್ಯಾಪಾರಕ್ಕೆ " ಉತ್ತರ : ತೆಂಗಿನಮರದ ತುದಿ, ಬೇರು, ತೆಂಗಿನ ಗರಿ, ತೆಂಗಿನ ಕಾಯಿ

೭. "ಅವ್ವನಿಗೆ ಸೀರೆ ಉಟ್ಟುಕೊಳ್ಳಲು ಬರುವುದಿಲ್ಲ

ಅಪ್ಪನಿಗೆ ರೊಕ್ಕ ಎಣಿಸಿಲು ಬರುವುದಿಲ್ಲ" ಉತ್ತರ: ಆಕಾಶ, ನಕ್ಷತ್ರ

೮. "ಬೆಳ್ಳಿ ಚಡಿ ನೆಲಕ್ಕೆ ಬಡಿ" ಉತ್ತರ: ಸಿಂಬಳ

೯. "ಈಟ ಐತಿ ಚೋಟಾ ಐತಿ

ರಾಯರ ಕೂಡಾ ಊಟಾ ಮಾಡ್ತೈತಿ" ಉತ್ತರ: ನೊಣ

೧೦. "ಗಡಗಡ ಬಂದ ಅಂಗಿ ಬಿಚ್ಚಿ ಬಾವ್ಯಗ ಬಿದ್ದ" ಉತ್ತರ: ಬಾಳೇ ಹಣ್ಣು

**೬.೭ ರಂಗಭೂಮಿ:**

ಮಂಗಳೂರು ಹಾಗೂ ಉಡುಪಿ ಜಿಲ್ಲೆಯಲ್ಲಿರುವ ಜನಪದ ರಂಗಭೂಮಿಯ ಪ್ರಕಾರವಾದ ಯಕ್ಷಗಾನವು ಈ ಪ್ರದೇಶದ ಗಂಡು ಕಲೆಯಾಗಿದೆ. ಕಾಸರಗೋಡಿನಿಂದ ಉಡುಪಿಯವರೆಗೆ ಪ್ರದರ್ಶನಗೊಳ್ಳುವ ಯಕ್ಷಗಾನವನ್ನು 'ತೆಂಕು ತಿಟ್ಟು' ಎಂದೂ, ಉಡುಪಿಯಿಂದ ಕಾರವಾರದವರೆಗೆ ಪ್ರದರ್ಶನಗೊಳ್ಳುವ ಯಕ್ಷಗಾನವನ್ನು 'ಬಡಗು ತಿಟ್ಟು' ಎಂದೂ ಕರೆಯಲಾಗುತ್ತದೆ. ಬಡಗು ತಿಟ್ಟು ಹಾಗೂ ತೆಂಕು ತಿಟ್ಟು ಯಕ್ಷಗಾನದಲ್ಲಿ ಭಿನ್ನತೆಗಳಿರುವುದನ್ನು ಕಾಣುತ್ತೇವೆ. ಒಂದು ಕಾಲಕ್ಕೆ ಯಕ್ಷಗಾನವನ್ನು ಅನಕ್ಷರಸ್ತರು ಮಾತ್ರ ಅಭಿನಯಿಸುತ್ತಿದ್ದರು. ಇಂದು ಅಕ್ಷರಸ್ತರೂ ಅಭಿನಯಿಸುತ್ತಿದ್ದಾರೆ. ಶಿವರಾಮ ಕಾರಂತರು ಯಕ್ಷಗಾನವನ್ನು ಪ್ರವೇಶಿಸಿದ ಮೇಲೆ ಅದನ್ನು ಮರು ಸೃಷ್ಟಿ ಮಾಡಿದರು ಎಂದು ಹೇಳಿದರೆ ತಪ್ಪಾಗಲಾರದು.

ಶಿವರಾಮ ಕಾರಂತರು ಸ್ವತಃ ಗೆಜ್ಜೆ ಕಟ್ಟಿಕೊಂಡು ಕುಣಿದು ಯಕ್ಷಗಾನವನ್ನು ಭಾರತದ ಒಳಗೆ ಮತ್ತು ಹೊರಗೆ ಜನಪ್ರಿಯ ಗೊಳಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಅನೇಕ ಉದ್ಯೋಗಸ್ಥರು ಯಕ್ಷಗಾನ ಕ್ಷೇತ್ರವನ್ನು ಪ್ರವೇಶಿಸಿದ ಮೇಲೆ ಯಕ್ಷಗಾನ ಮೇಳಗಳು ಹೆಚ್ಚಿನ ಪ್ರಮಾಣದಲ್ಲಿ ತಲೆಎತ್ತದವು. ವೃತ್ತಿ ನಿರತ ತಂಡಗಳು, ಹವ್ಯಾಸಿ ತಂಡಗಳನ್ನು ಕಟ್ಟಿಕೊಂಡು ಯಕ್ಷಗಾನದ ಸವಿಯನ್ನು ಎಲ್ಲರಿಗೂ ಮುಟ್ಟಿಸಿದರು.

ವೃತ್ತಿನಿರತ ಯಕ್ಷಗಾನ ತಂಡಗಳು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಮುಂಬೈ ಹಾಗೂ ದೆಹಲಿಯಲ್ಲಿಯೂ ಪ್ರದರ್ಶನಗಳನ್ನು ನೀಡುತ್ತಿರುವುದು ಕಂಡು ಬರುತ್ತದೆ. ರಾಮಾಯಣ, ಮಹಾಭಾರತ ಹಾಗೂ ಭಾಗವತಗಳಿಂದ ಆಯ್ದ ಭಾಗಗಳನ್ನು ಆಯ್ಕೆ ಮಾಡಿಕೊಂಡು ಆಟ ಪ್ರದರ್ಶನ ನೀಡುತ್ತಾರೆ. ಇಂದು ಯಕ್ಷಗಾನವು ಮುಂದುವರೆದು ವಾಸ್ತವ ಬದುಕಿನಲ್ಲಿ ನಡೆಯುತ್ತಿರುವ ಘಟನೆಗಳನ್ನೇ ವಸ್ತುಗಳನ್ನಾಗಿಟ್ಟುಕೊಂಡು ಯಕ್ಷಗಾನ ಪ್ರದರ್ಶನ ನೀಡುತ್ತಿವೆ. ವರದಕ್ಷಿಣೆ, ನೈಸರ್ಗಿಕ ಸಂಪತ್ತು, ಕುಡಿತ, ರಾಜಕಾರಣ ಮುಂತಾದ ಅನೇಕ ವಿಷಯಗಳನ್ನು ಕುರಿತು ಆಟವಾಡುತ್ತಿರುವುದು ಕಂಡುಬರುತ್ತದೆ.

ಒಂದು ಹಂತದಲ್ಲಿ ಯಕ್ಷಗಾನವನ್ನು ಎಷ್ಟೇ ಕಷ್ಟಬಂದರು ಅದನ್ನು ಉಳಿಸಿಕೊಂಡು ಬಂದವರು ಅನಕ್ಷರಸ್ತರೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಹೊಲ ಊಳುವರು, ಗದ್ದೆ ಕೆಲಸ, ಕೂಲಿ, ಕಬ್ಬಿಣ, ಮರದ ಕೆಲಸ ಮಾಡುತಿದ್ದವರು ಯಕ್ಷಗಾನದಲ್ಲಿ ಭಾಗವಹಿಸುತ್ತಿದ್ದರು.

ಯಕ್ಷಗಾನದ ಹವ್ಯಾಸಿ ಹಾಗು ವೃತ್ತಿಗಳ ಮೇಳಗಳಲ್ಲಿ ಕನಿಷ್ಟ ಇಬ್ಬರಾದರು ವಿಶ್ವಕರ್ಮರು ಇರುವುದು ಕಂಡು ಬರುತ್ತದೆ. ಇವರಲ್ಲಿ ಕಮ್ಮಾರಿಕೆ ವೃತ್ತಿ ಮಾಡುವವರೂ ಇರುವುದು ಕಂಡು ಬರುತ್ತದೆ. ಕಮ್ಮಾರಿಕೆಯ ಬಿಡುವಿನ ವೇಳೆಯಲ್ಲಿ ಯಕ್ಷಗಾನದ ವೃತ್ತಿಯನ್ನು ಅಂಟಿಸಿಕೊಂಡಿರುವ ಅನೇಕ ಕಮ್ಮಾರರು ಯಕ್ಷಗಾನದಲ್ಲಿ ಭಾಗವತರಾಗಿ ಅರ್ಥಧಾರಿಗಳಾಗಿ, ವೇಷಧಾರಿಗಳಾಗಿ, ಹಾಸ್ಯಪಾತ್ರಧಾರಿಗಳಾಗಿರುವುದು ಕಂಡು ಬರುತ್ತದೆ.

ಮಂಗಳೂರು ಜಿಲ್ಲೆಯ ಅರ್ಕಳದ ಸುಬ್ರಾಯಾಚಾರ್ಯರು ಯಕ್ಷಗಾನ ಪ್ರಸಂಗಗಳನ್ನು ರಚಿಸುವುದು ಕಂಡು ಬರುತ್ತದೆ. ಅಮ್ಮುಲಪಾಡ್ಯದ ಕೆ.ಜಿ. ಕೃಷ್ಣ ಅವರು ಶ್ರೇಷ್ಟ ಭಾಗವತರಾಗಿ ಯಕ್ಷಗಾನದ ತಂಡವನ್ನು ಅಮೇರಿಕಾಕ್ಕೆ ತೆಗೆದುಕೊಂಡು ಹೋದವರು. ಇವರ ಸಹೋದರರಾದ ಕೆ.ಜಿ.ಗಣೇಶ ಹಾಗೂ ಸುಧೀಂದ್ರ ಇವರು ಸಹ ಯಕ್ಷಗಾನದ ಶ್ರೇಷ್ಠ ಕಲಾವಿದರಾಗಿ ದ್ದಾರೆ. ಮರಿಯಪ್ಪಾಚಾರ್ಯ (ಭಾಗವತರು), ಉದ್ಯಾವರದ ಮಾಧವಾಚಾರ್ಯರು ಯಕ್ಷಗಾನದ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ. ವೇಣೂರಿನ ಸುಂದರಾಚಾರ್ಯರು ಯಕ್ಷಗಾನದಲ್ಲಿ ಸ್ತ್ರೀ ಪಾತ್ರ ನಿರ್ವಹಿಸುವುದರಲ್ಲಿ ಶ್ರೇಷ್ಠ ಕಲಾವಿದರು ಎನಿಸಿಕೊಂಡವರು. ಮರವಂತೆಯ ವೇಣುಗೋಪಾಲಾಚಾರ್ಯ, ಕಾರ್ಕಳದ ವಸಂತಾಚಾರ್ಯ, ಹೇರೂರು ಅನಂತಾಚಾರ್ಯ ಮುಂತಾದವರು ಯಕ್ಷಗಾನದಲ್ಲಿ ಕಲಾವಿದರಾಗಿ, ಮದ್ದಳೆ ನುಡಿಸುವವರಾಗಿ, ಪಾತ್ರಧಾರಿಗಳಾಗಿರುವುದು ಕಂಡು ಬರುತ್ತದೆ. ಮೂಡಬಿದ್ರೆಯ ಗಣೇಶಾಚಾರ್ಯರು ಮೌನೇಶ್ವರ ಎಂಬ ಯಕ್ಷಗಾನ ಪ್ರಸಂಗವನ್ನು ರಚಿಸಿ ಮೂರ್‍ನಾಲ್ಕು ಪ್ರದರ್ಶನಗಳನ್ನು ನೀಡಿರುವ ಬಗ್ಗೆ ಮಾಹಿತಿ ದೊರೆಯುತ್ತದೆ.

ನಲ್ಕೆಯ ಗೋಪಾಲಕೃಷ್ಣಾಚಾರ್ಯರು ಯಕ್ಷಗಾನದಲ್ಲಿ ಅತ್ಯಂತ ಶ್ರೇಷ್ಠ ಕಲಾವಿದರಾಗಿ, ಭಾಗವತರಾಗಿ ಸೇವೆ ಸಲ್ಲಿಸಿ ಜನರ ಮನಸ್ಸನ್ನು ಗೆದ್ದವರು. ಹೀಗೆ ವಿಶ್ವಕರ್ಮರು ಅಥವಾ ಕಮ್ಮಾರರು ಯಕ್ಷಗಾನ ರಂಗಭೂಮಿಯಲ್ಲಿ ಅನೇಕ ರೀತಿಯಲ್ಲಿ ಸೇವೆ ಸಲ್ಲಿಸಿರುವುದು ಹಾಗೂ ಸಲ್ಲಿಸುತ್ತಿರುವುದು ಕಂಡು ಬರುತ್ತದೆ.

**ಅಡಿಟಿಪ್ಪಣಿಗಳು**

೧. ಆರ್.ಬಿ ಕುಮಾರ್, ೨೦೦೪, ಪು. ೧೭೮

೨. ಅದೇ, ಪು.೧೭೮

೩. ಅದೇ, ಪು.೧೭೯. ೧೮೦

೪. ಅದೇ, ಪು.೧೮೧, ೧೮೨

೫. ಅದೇ, ಪು.೧೮೨

೬. ಅದೇ, ಪು.೧೭೭

೭. ಅದೇ, ಪು.೧೭೮

೮. ಅದೇ, ಪು.೧೪೭

೯. ದೇ. ಜವರೇಗೌಡ, ೨೦೦೧, ಪು. ೩೨ .೩೩

೧೦ ಆರ್.ಬಿ ಕುಮಾರ್, ೨೦೦೪, ಪು. ೧೩೧

೧೧. ದೇ. ಜವರೇಗೌಡ, ೨೦೦೧, ಪು. ೧೮೧

೧೨. ವಿಲಿಯಂ ಮಾಡ್ರಾ, ೧೯೮೮, ಪು. ೪೫

೧೩. ಹಿ. ಚಿ. ಬೋರಲಿಂಗಯ್ಯ, ೨೦೦೦, ಪು. ೪೬, ೪೭

೧೪. ಓ ಎಲ್ ನಾಗಭೂಷಣಸ್ವಾಮಿ, ೧೯೯೩, ಪು. ೪

೧೫. ದೇ. ಜವರೇಗೌಡ, ೨೦೦೧, ಪು. ೧೩೭

೧೬. ಆರ್.ಬಿ ಕುಮಾರ್, ೨೦೦೪, ಪು. ೧೪೦

## ಸಮಾರೋಪ

ಆದಿ ಮಾನವ ಬೇಟೆಯಿಂದ ಆಹಾರ ಉತ್ಪಾದನೆಯನ್ನು ಕಂಡುಕೊಂಡ ಕಾಲಘಟ್ಟವನ್ನೇ ಅವನ ಬದುಕಿನ 'ಸುವರ್ಣ ಕಾಲ' ಎಂದು ಹೇಳಬೇಕಾಗುತ್ತದೆ. ಮೂಲಮಾನವ ಕೃಷಿ ಹಾಗೂ ಕಬ್ಬಿಣವನ್ನು ಕಂಡುಕೊಂಡ ಮೇಲೆ ಅವನಿಗೆ ಹೊಸದೊಂದು ಜಗತ್ತು ಸೃಷ್ಟಿಸಲು ಅನುಕೂಲವಾಯಿತು. ಬೆಂಕಿಯ ಮೂಲಕ ಕಬ್ಬಿಣದ ಅದಿರನ್ನು ಆದಿಮಾನವ ಸಂಸ್ಕರಿಸಿ ಅದರಿಂದ ಅನೇಕ ಆಯುಧ ಹಾಗೂ ಕೃಷಿ ಉಪಕರಣಗಳನ್ನು ಸಿದ್ಧಪಡಿಸಿ 'ಕ್ರಾಂತಿಯನ್ನೇ' ಮಾಡಿದ. ಪ್ರಾಗಿತಿಹಾಸ ಕಾಲದಲ್ಲಿಯೇ ಮಾನವ ಕಬ್ಬಿಣವನ್ನು ಸಂಸ್ಕರಿಸಿ ಅನೇಕ ವಸ್ತುಗಳನ್ನು ಸಿದ್ಧಪಡಿಸುವ ಕಲೆಯನ್ನು ಚನ್ನಾಗಿ ಕರಗತ ಮಾಡಿಕೊಂಡಿದ್ದ. ಕಬ್ಬಿಣವನ್ನು ಸಂಸ್ಕರಿಸಲು ಬೆಂಕಿ ಅತೀ ಮುಖ್ಯ ಹೀಗಾಗಿ ಬೆಂಕಿಯನ್ನೇ ಅವನು ತನ್ನ ಆರಾಧ್ಯ ದೈವವಾಗಿ ಪೂಜಿಸತೊಡಗಿದ. ಬೆಂಕಿಯ ಮೂಲಕ ಅಸ್ಥಿತ್ವವನ್ನು ಕಂಡು ಕೊಂಡ ಕಮ್ಮಾರರು ಬೆಂಕಿಯನ್ನೇ ಕಾಳಿ ಎಂದು ಪೂಜಿಸತೊಡಗಿದರು. ಕಮ್ಮಾರರು ಬೆಂಕಿ ಕಬ್ಬಿಣ ಮತ್ತು ಕುಲುಮೆಯನ್ನು ಕಾಳಿಯ ಪ್ರತಿರೂಪ ಎಂದೇ ಪೂಜಿಸುತ್ತಿದ್ದಾರೆ.

ಕ್ರಿ.ಶ. ಆರಂಭದಿಂದಲೇ ಕಮ್ಮಾರರು ಶಕ್ತಿಯ ಆರಾಧಕರಾಗಿದ್ದರು. ಇವರು ಬುಡಕಟ್ಟು ಸಮುದಾಯದವರೇ ಆಗಿದ್ದರು. ಕಬ್ಬಿಣದಿಂದ ವಿವಿಧ ವಸ್ತುಗಳನ್ನು ತಯಾರಿಸುವ ಕುಶಲ ಕರ್ಮಿಗಳಾದ ಇವರ ವೃತ್ತಿ ತಂತ್ರಗಳೆಲ್ಲವೂ ಒಂದೇ ಆಗಿದ್ದವು. ಉದಾಹರಣೆಗೆ ಚಿನ್ನ, ಕಂಚು ಹಾಗೂ ಕಬ್ಬಿಣವನ್ನು ಲೋಹದಿಂದ ಬೇರ್ಪಡಿಸುವ ತಂತ್ರಗಳು ಸಾಮಾನ್ಯವಾಗಿ ಒಂದೇ ಸ್ವರೂಪದಲ್ಲಿದ್ದವು. ಹೀಗಾಗಿ ಇವರೆಲ್ಲರೂ ಒಟ್ಟಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿದರು. ಈ ಲೋಹ ತಯಾರಿಕೆಯಲ್ಲಿ ಅವುಗಳ ಬಣ್ಣ ಬದಲಾಯಿಸಲು ಗಿಡ ಮೂಲಿಕೆಗಳನ್ನು ಉಪಯೋಗಿಸಲಾಗುತ್ತಿತ್ತು. ಅದರಲ್ಲಿ ತಜ್ಞರಾಗಿರುವ ಬಡಗಿ ಅವರೊಂದಿಗೆ ಕೂಡಿಕೊಂಡರೆ ಇವರು ತಯಾರಿಸುವ ಲೋಹದಿಂದ ವಿವಿಧ ವಸ್ತುಗಳನ್ನು ತಯಾರಿಸುತ್ತಿದ್ದ ಶಿಲ್ಪಿಯೂ ಕೂಡ ಈ ಗುಂಪಿನಲ್ಲಿ ಒಬ್ಬಾದ. ಈ ರೀತಿಯಲ್ಲಿ ಬೆಳೆದ ಐದು ವರ್ಗದವರು ಆರ್ಥಿಕವಾಗಿ ಪ್ರಭಲರಾಗುತ್ತಾ ಬಂದರು. ನಂತರ ರಾಜರ ಆಶ್ರಯ, ಜನರ ಮನ್ನಣೆ ದೊರೆತದ್ದರಿಂದ ಇವರು ಬುಡಕಟ್ಟು ಜನರಿಂದ ಪ್ರತ್ಯೇಕವಾಗಿ ಗುರುತಿಸಕೊಳ್ಳ ತೊಡಗಿದರು.

ಬೇಟೆ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಆದಿಮಾನವ ಕಾಲಿಟ್ಟಾಗ ಅಂದರೆ ಅಹಾರ ಉತ್ಪಾದನೆಯನ್ನು ಕಂಡುಕೊಂಡ ಮೇಲೆ ಆದಿ ಮಾನವ ಕಬ್ಬಿಣವನ್ನು ಕಂಡು ಕೊಂಡ. ಕಬ್ಬಿಣದ ಮೂಲಕ ಅನೇಕ ಕೃಷಿ ಉಪಕರಣಗಳನ್ನು ಸಿದ್ಧಪಡಿಸಿಕೊಂಡು ಆತ್ಮ ರಕ್ಷಣೆ ಮತ್ತು ಆಹಾರ ಉತ್ಪಾದನೆ ಮಾಡಿಕೊಳ್ಳತೊಡಗಿದ. ಆತ್ಮರಕ್ಷಣೆಗಾಗಿ, ಕೃಷಿಗಾಗಿ ಆಯುಧಗಳ, ಕೃಷಿ ಸಲಕರಣೆಗಳ ಬೇಡಿಕೆ ಹೆಚ್ಚಾದಂತೆ ಕಬ್ಬಿಣದಿಂದ ಆಯುಧ ಹಾಗೂ ಇತರೆ ಸಲಕರಣೆಗಳನ್ನು ತಯಾರಿಸಲಿಕ್ಕಂದೇ ಮೀಸಲಾದ ಕುಟುಂಬಗಳು ಬೆಳೆಯತೊಡಗಿದವು.

ಇತಿಹಾಸ ಕಾಲದಲ್ಲಿ ಕಮ್ಮಾರರ ಸ್ಥಿತಿಗತಿಗಳು, ಸಾಮಾಜಿಕ ಸ್ಥಾನಮಾನಗಳು ಉತ್ತಮವಾಗತೊಡಗಿದವು. ಇತಿಹಾಸ ಕಾಲದಲ್ಲಿ ದೊಡ್ಡ ದೊಡ್ಡ ಸಾಮ್ರಾಜ್ಯಗಳು ತಲೆಎತ್ತಿ ಅವುಗಳು ಅಳಿವು-ಉಳಿವು ಯುದ್ಧವನ್ನು ಅವಲಂಬಿಸಿದ್ದರೆ, ಯುದ್ಧದ ಸೋಲು ಗೆಲುವುಗಳು ಶಸ್ತ್ರಾಸ್ತ್ರಗಳನ್ನು ಅವಲಂಬಿಸಿತ್ತು. ಈ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುತ್ತಿದ್ದ ಕಮ್ಮಾರರ ಬೇಡಿಕೆ ಅಧಿಕ ವಾಯಿತು. ಸಾಮಾಜಿಕವಾಗಿ ಕೀಳಾಗಿ ಕಾಣುತ್ತಿದ್ದ ಕಮ್ಮಾರರ ಸಮುದಾಯಕ್ಕೆ ರಾಜ-ಮಹಾರಾಜರು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ನೀಡಿ ಅವರಿಂದ ಅನೇಕ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿಕೊಳ್ಳಲು ಅವರನ್ನು ಬಳಸಿಕೊಳ್ಳತೊಡಗಿದರು. ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುವುದಕ್ಕಾಗಿ ಕಾರ್ಯಾಗಾರಗಳನ್ನು ಹಾಗೂ ಅದರ ಸಂಪೂರ್ಣ ಜವಾಬ್ದಾರಿಯನ್ನು ಕಮ್ಮಾರರಿಗೆ ನೀಡಲಾಯಿತು. ಈ ಕಾಲಘಟ್ಟದಲ್ಲಿ ಕಮ್ಮಾರರು ಆರ್ಥಿಕವಾಗಿ ಪ್ರಬಲರಾಗಿದ್ದರು.

ವಿಶ್ವಕರ್ಮರಲ್ಲಿರುವ ಐದು ವೃತ್ತಿಗಳಲ್ಲಿ ಕಮ್ಮಾರಿಕೆ ಅತ್ಯಂತ ಪ್ರಾಚೀನವಾದ ವೃತ್ತಿಯಾಗಿದೆ. ರುದ್ರನೇ ಕಮ್ಮಾರಿಕೆಯ ಮೂಲ ದೈವ ಎಂಬ ಪರಿಕಲ್ಪನೆ ಕಮ್ಮಾರರಲ್ಲಿ ಅಥವಾ ವಿಶ್ವಕರ್ಮರಲ್ಲಿದೆ.

ರಾಷ್ಟ್ರಕೂಟರ ಕಾಲಕ್ಕೆ ಕಮ್ಮಾರರ ವಂಶಸ್ಥರು ತಪೋವನಾಧಿಕಾರಿಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರೆಂದು ತಿಳಿಯುತ್ತದೆ. ಕಮ್ಮಾರ, ಬಡಿಗ, ಶಿಲಾಶಿಲ್ಪಿ, ಕಂಚುಗಾರ ಹಾಗೂ ಸುವರ್ಣಶಿಲ್ಪಿಗಳು ಅಲ್ಲಿಯ ಧರ್ಮಕ್ಕೂ, ಗ್ರಾಮಕ್ಕೂ ಮುಖಂಡರಾಗಿದ್ದರು. ಇವರು ತಮ್ಮನ್ನು ಕಾರ್ತಿಕೇಯ ಪಾದಪದ್ಮೋಪಜೀವಿಗಳೆಂದು ಕರೆದುಕೊಂಡಿದ್ದಾರೆ. ಧಾರ್ಮಿಕ ಕಾರ್ಯ, ಧಾನ ದತ್ತಿ ಬಿಡುವುದು ಮತ್ತು ನ್ಯಾಯ ಬಗೆಹರಿಸುವುದು ಮುಂತಾದ ಕಾರ್ಯಗಳನ್ನು ಇವರು ನಿರ್ವಹಿಸುತ್ತಿದ್ದರೆಂದು ಕುಡುತಿನಿಯ ಶಾಸನವೊಂದು ತಿಳಿಸುತ್ತದೆ.

ಕಮ್ಮಾರ, ಕಮ್ಮಾರಿಕೆಯ ವೃತ್ತಿಗಳನ್ನು ಕುರಿತು ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ವಡ್ಡಾರಾಧನೆಯಿಂದ ದಾಸಸಾಹಿತ್ಯದವರೆಗೆ ಕಮ್ಮಾರರ ಮತ್ತು ಅವರ ವೃತ್ತಿಗೆ ಸಂಬಂಧಿಸಿದ ಮಾಹಿತಿಗಳನ್ನು ಪ್ರಾಚೀನ ಕವಿಗಳು ಬಳಸಿದ್ದಾರೆ. ಅನೇಕ ದೃಷ್ಟಾಂತ ಹಾಗೂ ಉಪಮೆಗಳ ಮೂಲಕ ಅಂದಿನ ಕಾಲದ ಕಮ್ಮಾರರನ್ನು ಪರಿಚಯಯಿಸಲೆತ್ನಿಸಿದ್ದಾರೆ.

ಮಂಟೇಸ್ವಾಮಿ ಕಾವ್ಯದ ಸಿದ್ದಪ್ಪಾಜಿ ಪ್ರಸಂಗವನ್ನು ಗಮನಿಸಿದಾಗ ಸಿದ್ದಪ್ಪಾಜಿ ಹಲಗೂರಿನ ಕಮ್ಮಾರರ ಹತ್ತಿರ ಕಬ್ಬಿಣ ಭಿಕ್ಷೆ ಬೇಡಲು ಬಂದಾಗ, ಹಲಗೂರಿನ ಕಮ್ಮಾರರು 'ಬಂಗಾರದ ಭಿಕ್ಷೆ ಬೇಕಾದರೂ ಕೊಡುತ್ತೇವೆ ಆದರೆ ಕಬ್ಬಿಣದ ಭಿಕ್ಷೆ ಕೊಡುವುದಿಲ್ಲ' ಎಂದು ಹೇಳುವ ಮಾತನ್ನು ಗಮನಿಸಿದರೆ ಆ ಕಾಲಕ್ಕೆ ಕಬ್ಬಿಣದ ಮಹತ್ವ ಮತ್ತು ಅಂದಿನ ಕಮ್ಮಾರರ ಆರ್ಥಿಕ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಒಂದು ಕಾಲಕ್ಕೆ ಹಲಗೂರಿನ ಹೆಸರು ಬಂದಿರುವುದೇ ಇಲ್ಲಿಯ ಕಮ್ಮಾರರ ವೃತ್ತಿಯಿಂದ. ಅಂದು ಅವರು ಆಯುಧಗಳನ್ನು, ಅದರ ಅಲಗುಗಳನ್ನು ತಯಾರಿಸುತ್ತಿದ್ದುದರಿಂದ ಈ ಹೆಸರು ಬಂದಿದೆ ಎಂದು ಅಭಿಪ್ರಾಯ ಪಡುತ್ತಾರೆ. ಮಂಟೇಸ್ವಾಮಿ ಕಾಲಕ್ಕೆ ಹಲಗೂರು ಪ್ರಸಿದ್ಧ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕೇಂದ್ರವಾಗಿತ್ತು ಎಂದು ತಿಳಿದು ಬರುತ್ತದೆ. ಸಿದ್ದಪ್ಪಾಜಿಯು ಸಹ ಕಮ್ಮಾರರ ಕುಟುಂಬದಲ್ಲಿ ಜನಿಸಿದವ.

ಪಾಶ್ಚಾತ್ಯರು ಭಾರತಕ್ಕೆ ಆಗಮಿಸಿ ಇಲ್ಲಿಯ ಕಮ್ಮಾರರು ಪರಂಪರಾನುಗತವಾಗಿ ಕಂಡುಕೊಂಡಿದ್ದ ಕಬ್ಬಿಣದ ಅದಿರು ಸಂಸ್ಕರಿಸುವ ತಂತ್ರಜ್ಞಾನವನ್ನೇ ಬಳಸಿಕೊಂಡು ಕಾರ್ಖಾನೆಗಳ ಮೂಲಕ ಕಬ್ಬಿಣವನ್ನು ಉತ್ಪಾದಿಸಿ ಅದರಿಂದ ಕೃಷಿ, ಆಯುಧ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಲು ಪ್ರಾರಂಭಿಸಿದ ಮೇಲೆ ಕಮ್ಮಾರರ ವೃತ್ತಿಗಳು ಹಂತ ಹಂತವಾಗಿ ಮೂಲೆಗುಂಪಾಗತೊಡಗಿದವು.

ಪಾಶ್ಚಾತ್ಯರು ತಯಾರಿಸುತ್ತಿದ್ದ ಕಬ್ಬಿಣ ಅತೀ ಕಡಿಮೆ ದರದಲ್ಲಿ ದೊರೆಯುತ್ತಿತ್ತು. ಹೀಗಾಗಿ ಕಾರ್ಖಾನೆಗಳಲ್ಲಿ ತಯಾರಿಸುತ್ತಿದ್ದ ಕಬ್ಬಿಣವನ್ನೇ ಜನರು ಖರೀದಿಸತೊಡಗಿದರು. ಹೀಗಾಗಿ ಕಮ್ಮಾರರು ಕಬ್ಬಿಣ ತಯಾರಿಸುವುದನ್ನು ಬಿಟ್ಟು ಕೇವಲ ಕಬ್ಬಿಣದಿಂದ ವಸ್ತುಗಳನ್ನು ತಯಾರಿಸುವ ವೃತ್ತಿಗೆ ಮಾತ್ರ ಉಳಿದುಕೊಂಡರು.

ಬೃಹತ್ ಕೈಗಾರಿಕೆಗಳು ಭಾರತದಲ್ಲಿ ಸ್ಥಾಪನೆಯಾಗತೊಡಗಿದಂತೆ ಮತ್ತು ಆ ಕಾರ್ಖಾನೆಗಳಲ್ಲಿ ಕೃಷಿ ಉಪಕರಣಗಳು ಸಿದ್ಧವಾಗಿ ಮಾರುಕಟ್ಟೆಗೆ ಮಾರಾಟಕ್ಕೆ ಬರಲು ಪ್ರಾರಂಭಿಸಿದ ಮೇಲೆ ಕಮ್ಮಾರರ ಕುಲುಮೆಗಳಲ್ಲಿ ಸಿದ್ಧವಾಗುವ ವಸ್ತುಗಳಿಗೆ ಬೆಲೆಯೇ ಇಲ್ಲದಂತಾಯಿತು. ಇದರಿಂದ ಕಮ್ಮಾರಿಕೆ ಹಾಗೂ ಕಮ್ಮಾರರ ಬದುಕು ಅತಂತ್ರವಾಗುತ್ತಾ ನಡೆಯಿತು. ಕಮ್ಮಾರಿಕೆಯ ವೃತ್ತಿಯ ಮೂಲಕ ಜೀವನ ನಡೆಸಲು ಸಾಧ್ಯವಿಲ್ಲವೆಂದು ಅರಿತ ಕಮ್ಮಾರರ ಯುವ ಪೀಳಿಗೆ ಇಂದು ವಿವಿಧ ವೃತ್ತಿಗಳನ್ನು ಆರಿಸಿಕೊಂಡು ನಗರಗಳಿಗೆ ವಲಸೆ ಹೋಗುತ್ತಿರುವುದು ಕಂಡು ಬರುತ್ತದೆ.

ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಅಕ್ಷರಸ್ತ ಕಮ್ಮಾರರಲ್ಲಿ ಕೆಲವರು ತಮ್ಮ ಕುಲಕಸುಬಿನಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಬಳಸಿಕೊಂಡು ವಿವಿಧ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸುತ್ತ ಆಧುನಿಕ ಬದುಕಿಗೆ ಮುಖಾಮುಖಿಯಾಗುತ್ತಿದ್ದಾರೆ.

ಗ್ರಾಮೀಣ ಪ್ರದೇಶದ ಅನಕ್ಷರಸ್ತ ಕಮ್ಮಾರರಿಗೆ ಪಾರಂಪರಿಕ ವೃತ್ತಿ ಮಾತ್ರ ಗೊತ್ತಿದೆ. ಆಧುನಿಕ ಯಂತ್ರಗಳ ಬಳಕೆ, ಕಮ್ಮಾರಿಕೆಯಲ್ಲಿ ಆಧುನಿಕತೆ ಅಳವಡಿಸಿಕೊಳ್ಳುವ ತಂತ್ರಜ್ಞಾನದ ಬಳಕೆ ಅವರಿಗೆ ಗೊತ್ತಿಲ್ಲದಿರುವುದು ಹಾಗೂ ಕಿತ್ತು ತಿನ್ನುವ ಬಡತನದಿಂದ ಈ ಪ್ರದೇಶದ ಕಮ್ಮಾರರ ವೃತ್ತಿಗಳು ಇಂದು ಕೇವಲ ಕೊಡಲಿ, ಕುಡುಗೋಲು, ರೆಂಟೆ, ಕುಳ ಮುಂತಾದವುಗಳನ್ನು ಹಣೆದು ಹರಿತಮಾಡಿ ಕೊಡುವ ಕೆಲಸಕ್ಕೆ ಮಾತ್ರ ಸೀಮಿತವಾಗಿದ್ದಾರೆ.

ವಯಸ್ಸಾದ ಕಮ್ಮಾರರು ಅನೇಕ ರೋಗಗಳಿಂದ ಬಳಲುತ್ತಿರುವುದು ಕಂಡು ಬರುತ್ತದೆ. ವಯಸ್ಸಾದ ಇವರನ್ನು ಅವರ ಮಕ್ಕಳು ಸರಿಯಾಗಿ ನೋಡಿಕೊಳ್ಳದೇ ಇರುವುದರಿಂದ ಇವರು ನಿರ್ಗತಿಕರಾಗಿದ್ದಾರೆ.

ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿದ್ದ ಕಮ್ಮಾರರ ಸಮುದಾಯವನ್ನು ಭಾರತ ಸರ್ಕಾರ ೧೯೫೬ ರಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿತು. ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕು, ಮಂಗಳೂರು ಹಾಗೂ ಉಡುಪಿ ಜಿಲ್ಲೆಯಲ್ಲಿ ವಾಸಿಸುತ್ತಿರುವ ಕಮ್ಮಾರರಿಗೆ ಮಾತ್ರ ಈ ಆದೇಶ ಅನ್ವಯವಾಗುತ್ತದೆ. ಆದರೆ ಈ ಪ್ರದೇಶದ ಬೆರಳೆಣಿಕೆಯ ಕಮ್ಮಾರರು ಪರಿಶಿಷ್ಟ ಪಂಗಡದ ಸೌಲಭ್ಯಗಳನ್ನು ಪಡೆದುಕೊಂಡಿದ್ದಾರೆ. ಈ ಪ್ರದೇಶದಲ್ಲಿ ವಾಸಿಸುತ್ತಿರುವ ಕಮ್ಮಾರರು ವಿಶ್ವಕರ್ಮರಲ್ಲಿಯ ಒಂದು ಪಂಗಡವಾಗಿದೆ. ಮಂಗಳೂರು ಹಾಗೂ ಉಡುಪಿ ಪ್ರದೇಶಗಳ ವಿಶ್ವಕರ್ಮರು ಇಂದು ವೈದಿಕ ಧರ್ಮದ ಸಂಪ್ರದಾಯವನ್ನು ಅನುಸರಿಸುತ್ತಿದ್ದಾರೆ. ವಿಶ್ವಕರ್ಮರಾದ ಕಮ್ಮಾರರು ಪರಿಶಿಷ್ಟ ಪಂಗಡದ ಪ್ರಮಾಣ ಪತ್ರ ಪಡೆದುಕೊಂಡರೆ ನಮ್ಮ ಸಾಮಾಜಿಕ ಸ್ಥಾನಮಾನಗಳಿಗೆ ದಕ್ಕೆ ಆಗುತ್ತದೆ ಎಂಬ ಕಾರಣದಿಂದ ಕಮ್ಮಾರರು ಪರಿಶಿಷ್ಟ ಪಂಗಡದ ಪತ್ರ ಹಾಗೂ ಸರಕಾರದ ಸೌಲಭ್ಯಗಳನ್ನು ಪಡೆಯಲಿಕ್ಕೆ ಪ್ರಯತ್ನಿಸುತ್ತಿಲ್ಲ ಹಾಗೂ ವಿಶ್ವಕರ್ಮರಲ್ಲಿಯ ಇತರೆ ಪಂಗಡದವರ ವಿರೋಧವಿದೆ. ಈ ಹಿನ್ನಲೆಯಲ್ಲಿ ಇಲ್ಲಿಯ ಕಮ್ಮಾರರು ಪರಿಶಿಷ್ಟ ಪಂಗಡದ ಯಾವ ಸೌಲಭ್ಯವನ್ನು ಪಡೆಯಲಿಕ್ಕೆ ಸಾಧ್ಯವಾಗಿಲ್ಲ ಎಂದು ಹೇಳಬೇಕಾಗುತ್ತದೆ. ಬಡತನದ ಬೇಗೆಯಲ್ಲಿ ಬೇಯುತ್ತಿರುವ ಅನೇಕ ಕಮ್ಮಾರರಲ್ಲಿ ಈ ಸೌಲಭ್ಯವನ್ನು ಪಡೆಯಬೇಕೆಂಬ ಆಸೆ ಇದ್ದರೂ ಸಾಮಾಜಿಕ ಸ್ಥಾನ-ಮಾನಗಳಿಗೆ ಅಂಜಿ ಅದನ್ನು ಪಡೆಯುತ್ತಿಲ್ಲ ಎಂದು ಕಂಡು ಬಂದಿವೆ. ಕೊಳ್ಳೆಗಾಲ ಪರಿಸರದ ಕಮ್ಮಾರರು ಪರಿಶಿಷ್ಟ ಪಂಗಡದ ಪ್ರಮಾಣ ಪತ್ರವನ್ನು ಪಡೆಯುವುದಕ್ಕಾಗಿ ತಹಸೀಲ್ದಾರ ಹಾಗೂ ಜಿಲ್ಲಾಧಿಕಾರಿಗಳ ಕಚೇರಿಗೆ ಅಲೆಯುತ್ತಲೇ ಇದ್ದಾರೆ. 'ಕರ್ನಾಟಕ ಸರ್ಕಾರದ ರೆವೆನ್ಯೂ ಅಧಿಕಾರಿಗಳು ನೀವು ವಿಶ್ವಕರ್ಮ ಕಮ್ಮಾರರಾಗಿದ್ದೀರಿ. ಅದಕ್ಕೆ ನಿಮಗೆ ಈ ಸೌಲಭ್ಯವಿಲ್ಲ' ಎಂದು ಹೇಳುತ್ತಿದ್ದಾರೆ. ಹೀಗಾಗಿ ಈ ಪ್ರದೇಶದ ಕಮ್ಮಾರರು ಸಹ ಪರಿಶಿಷ್ಟ ಪಂಗಡದ ಸವಲತ್ತಗಳನ್ನು ಪಡೆಯಲಿಕ್ಕಾಗಿಲ್ಲ.

ಕಮ್ಮಾರರ ಸಮುದಾಯದಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚಿನ ಪ್ರಮಾಣದಲ್ಲಿರುವುದು ಸಮೀಕ್ಷೆಯಿಂದ ತಿಳಿದು ಬಂದಿದೆ. ಕಮ್ಮಾರಿಕೆ ವೃತ್ತಿಯ ಮೇಲೆ ಆಧುನಿಕತೆಯ ಪ್ರಭಾವ ಬೀರುತ್ತಿರುವುದರಿಂದ ಹಾಗೂ ಅದರಿಂದ ಕುಲ ಕಸುಬುಗಳು ಮಾಯವಾಗುತ್ತಿರುವುದರಿಂದ

ಈಗ ಕಮ್ಮಾರರಿಗೆ ಅರಿವು ಮೂಡುತ್ತಿದೆ. ಇಂದು ಕಮ್ಮಾರರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ಕಾಳಜಿ ವಹಿಸುತ್ತಿದ್ದಾರೆ. ಬುದ್ಧಿವಂತರ, ಜಾಣರ, ಸುಶೀಕ್ಷಿತರ ಮತ್ತು ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ವೈಜ್ಞಾನಿಕವಾಗಿ ಮುಂದುವರೆದ ಜಿಲ್ಲೆಗಳು ಎಂದು ಹೇಳಿಕೊಳ್ಳುವ ಉಡುಪಿ ಮತ್ತು ಮಂಗಳೂರು ಪ್ರದೇಶದಲ್ಲಿ ವಾಸಿಸುತ್ತಿರುವ ಕಮ್ಮಾರರು ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ಕಮ್ಮಾರರು ಪ್ರಾಥಮಿಕ ಹಂತದ ಶಿಕ್ಷಣವನ್ನು ಮಾತ್ರ ಪೂರೈಸಿದವರು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ತಮ್ಮ ಮಕ್ಕಳಿಗೆ ಆಧುನಿಕ ಶಿಕ್ಷಣವನ್ನು ಕೊಡಿಸಬೇಕು ಎಂಬ ಹಂಬಲವಿದ್ದರೂ ಆರ್ಥಿಕವಾಗಿ ತೀರಾ ಬಡತನದಲ್ಲಿರುವುದರಿಂದ ಅದು ಅವರಿಗೆ ಸಾಧ್ಯವಾಗುತ್ತಿಲ್ಲ.

ಉಡುಪಿ ಮತ್ತು ಮಂಗಳೂರು ಪರಿಸರದ ವಿಶ್ವಕರ್ಮರು ಇಂದು ವೈದಿಕ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದಾರೆ ಹಾಗೂ ತಮ್ಮ ಪ್ರತಿಯೊಂದು ಆಚರಣೆಗಳನ್ನು ವೈದಿಕ ಧರ್ಮದ ಸಂಪ್ರದಾಯದಲ್ಲೇ ಆಚರಿಸುತ್ತಿರುವುದು ಕಂಡು ಬರುತ್ತದೆ. ಇದರ ಪ್ರಭಾವ ಕಮ್ಮಾರರ ಸಮುದಾಯದ ಮೇಲಾಗುತ್ತಿದೆ. ಅದರಲ್ಲೂ ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕಮ್ಮಾರರು ಇಂದು ಅನಿವಾರ್ಯವಾಗಿ ತಮ್ಮ ಆಚರಣೆಗಳಲ್ಲಿ ವೈದಿಕತೆಯನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ವೈದಿಕ ಸಂಪ್ರದಾಯದ ಪ್ರಭಾವದಿಂದ ಕಮ್ಮಾರರ ಆಚರಣೆ ಸಂಪ್ರದಾಯಗಳ ಮೇಲಾದ ಪರಿಣಾಮಗಳನ್ನು ವಿವರಿಸಲಾಗಿದೆ.

ಪ್ರಾರಂಭದಿಂದಲೂ ಕೃಷಿಕ ಸಮುದಾಯದ ಜೊತೆಗೆ ಒಡನಾಟ ಇಟ್ಟುಕೊಂಡಿರುವ ಕಮ್ಮಾರರು, ರಾಜಕೀಯ ಪ್ರಾತಿನಿಧ್ಯತೆ ಕೊಡುವಂತಹ ಯಾವ ಗುರುತರವಾದ ಕಾರ್ಯಗಳನ್ನು ಇವರು ನಿರ್ವಹಿಸಿಲ್ಲ. ಊರಿಗೆ ಒಂದು ಅಥವಾ ಎರಡು ಕುಟುಂಬಗಳನ್ನು ಹೊಂದಿರುವ ಇವರನ್ನು ರಾಜಕೀಯ ಪಕ್ಷಗಳು ನಿರ್ಣಾಯಕ ಮತದಾರರೆಂದು ಎಂದೂ ಪರಿಗಣಿಸಿಲ್ಲ. ಇವರಲ್ಲಿ ಸಂಘಟನೆಯ ಕೊರತೆಯೂ ಎದ್ದು ಕಾಣುತ್ತಿದೆ. ಆರ್ಥಿಕವಾಗಿಯೂ ದುರ್ಬಲರಾಗಿರುವುದರಿಂದ ಇವರು ರಾಜಕೀಯದಿಂದ ದೂರು ಉಳಿದಿದ್ದಾರೆ.

ಮಾತೃದೇವತಾ ಆರಾಧಕರಾದ ಇವರು ಕಾಳಿಯನ್ನು ಕುಲದೇವತೆಯಾಗಿ ವಿಶ್ವಕರ್ಮನನ್ನು ವೃತ್ತಿದೇವತೆಯಾಗಿ ಆರಾಧಿಸುತ್ತಾರೆ. ಸಮುದಾಯದ ಸಾಂಸ್ಕೃತಿಕ ನಾಯಕರಾಗಿ ದೈವವಾಗಿರುವ ತಿಂಥಣಿ ಮೌನೇಶ್ವರ, ನವಲಗುಂದ ನಾಗಲಿಂಗ ಸ್ವಾಮಿ, ಸಿದ್ಧಪ್ಪಾಜಿ, ಮಂಟೇಸ್ವಾಮಿ ಹಾಗೂ ಕಲ್ಕುಡ ಮತ್ತು ಕಲ್ಲುರ್ಟಿ ಭೂತಗಳನ್ನು ಆರಾಧಿಸುವುದುಂಟು. ಜಾತಿ, ಮತ ಭೇದ ಭಾವವಿಲ್ಲದೇ ಇತರೆ ಎಲ್ಲಾ ಸಮುದಾಯದವರು ಆರಾಧಿಸುವ ದೈವಗಳನ್ನು ಇವರು ಆರಾಧಿಸುವುದು ಕಂಡು ಬರುತ್ತದೆ.

ಕಮ್ಮಾರರಲ್ಲಿ ಯುಗಾದಿ ಅತ್ಯಂತ ವಿಶಿಷ್ಟವಾಗಿ ಆಚರಿಸಲ್ಪಡುವುದನ್ನು ಕಾಣುತ್ತೇವೆ. ಹಿಂದೂಗಳಲ್ಲಿ ಶಕ್ತಿದೇವಿಯ ಆರಾಧನೆಯನ್ನು ನವರಾತ್ರಿಯಲ್ಲಿ ವೈಭವದಿಂದ ಆರಾಧಿಸಿದರೆ

ಕಮ್ಮಾರರು ಆ ಶಕ್ತಿ ದೇವಿಯನ್ನು ಯುಗಾದಿಯಲ್ಲಿ ವಿಶೇಷವಾಗಿ ಪೂಜಿಸುತ್ತಿರುವುದು ಕಂಡು ಬರುತ್ತದೆ.

ಭಾರತ ಸರಕಾರದ ಜನಗಣತಿಯ ಅಂಕಿ ಅಂಶಗಳಲ್ಲಿ ಕಮ್ಮಾರರ ಜನಸಂಖ್ಯೆ ೧೯೮೧ ರಿಂದ ಕಡಿಮೆಯಾಗುತ್ತಲೇ ಬರುತ್ತಿದೆ. ಇದಕ್ಕೆ ಕಾರಣಗಳೇನು ಎಂದು ಈ ಅಧ್ಯಯನ ಸಂದರ್ಭದಲ್ಲಿ ಗಮನಿಸಿದಾಗ ಮಂಗಳೂರು, ಉಡುಪಿ ಹಾಗೂ ಕೊಳ್ಳೆಗಾಲದ ಕಮ್ಮಾರರು ಜನಗಣತಿಯ ಸಮಯದಲ್ಲಿ ಜಾತಿ ಕಾಲಂ ನಲ್ಲಿ ಕಮ್ಮಾರ ಎಂದು ಬರೆಯಿಸದೇ ವಿಶ್ವಕರ್ಮ, ಪಂಚಾಳ, ವಿಶ್ವಬ್ರಾಹ್ಮಣ ಮುಂತಾದ ಹೆಸರುಗಳನ್ನು ಬರೆಯಿಸುವುದರಿಂದ ಕಮ್ಮಾರರ ಜನಸಂಖ್ಯೆ ಪ್ರತಿ ಜನಗಣತಿಯಲ್ಲಿ ಕಡಿಮೆಯಾಗುತ್ತಿರುವುದು ಕಂಡು ಬರುತ್ತಿದೆ.

## ಗ್ರಂಥಸೂಚಿ


೦೧. ಅನಂತರಂಗಾಚಾರ್ ಎನ್, ೧೯೭೨, **ಕರ್ನಾಟಕದ ವಾಸ್ತುಶಿಲ್ಪ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೦೨. ಅರ್ಜುನಾಚಾರ್ಯ ತೆಂಗಳೀಕರ, ೧೯೮೬, **ದೈವತ್ವಾರ್ಜಿತ ಶಿಲ್ಪ ರೇಣ್ಯ ಋಭುಗಳು**, ವಾಚಸ್ಪತಿ ಪ್ರಕಾಶನ, ಗುಲ್ಬರ್ಗಾ.

೦೩. ಇಮ್ರಾಪುರ. ಜಿ.ಎಸ್.(ಸಂ) ೧೯೯೩, **ಜಾನಪದ ಸಾಹಿತ್ಯ ದರ್ಶನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೪. ಈರಣ್ಣ ಕೆ.ಪಿ., ೧೯೯೦, **ಕರ್ನಾಟಕ ವಿಶ್ವಕರ್ಮ ಮಹಾಪುರುಷರು**, ಶ್ರೀ ಭುವನೇಶ್ವರಿ ಸಾಹಿತ್ಯ ಪ್ರಕಾಶನ, ಶಿರಹಟ್ಟಿ

೦೫. ಕಲಬುರ್ಗಿ ಎಂ.ಎಂ.(ಸಂ), ೧೯೯೪, **ಕರ್ನಾಟಕದ ಕೃಷಿಯತ್ತುಗಳು**, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೦೬. ಕಲಾವೀರ ಮನ್ವಾಚಾರ್, ೧೯೯೫, **ಮಾತೃದೇವತಾ ಆರಾಧನೆ**, (ಎಂ.ಫಿಲ್. ಪ್ರಬಂಧ) ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೦೭. ಕುಮಾರ್ ಅರ್.ಬಿ, ೨೦೦೪, **ಮುದ್ದೆಕಂಬಾರರು**, ಸಾರಾ ಎಂಟರಪ್ರೈಜಿಸ್, ಮೈಸೂರು.

೦೮. ಕೋಟಗಾನಹಳ್ಳಿ ರಾಮಯ್ಯ, ೧೯೯೩, **ಸಿಂಧ್ ಮಾದಿಗರ ಸಂಸ್ಕೃತಿ**, ಸಾಹಿತ್ಯ ಅಕಾಡೆಮಿ, ಬೆಂಗಳೂರು.

೦೯. ಗಂಗಾಧರ ದೈವಜ್ಞ, ೨೦೦೨, **ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ** (ಆರಾಧನಾ ಪರಂಪರೆ) ಶ್ವೇತಾ, ಭಾಗೀರಥಿ, ಪ್ರಕಾಶನ, ಹೊಸಪೇಟೆ.

೧೦. ಗಂಗಾಧರ ದೈವಜ್ಞ, ೨೦೦೦, **ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಗುರುರಾಜ್ ಎಸ್ (ಅನು), ೧೯೯೪, **ಲೋಥಾಲ್ ಮತ್ತು ಸಿಂಧು ನಾಗರಿಕತೆ**, ಹರಿ ಪ್ರಕಾಶನ, ಧಾರವಾಡ.

೧೨. ಗುರುಲಿಂಗಾಚರ್ಯ ವಿ(ಮನುತನಯ), ೧೯೮೪, **ವಿಶ್ವಕರ್ಮ ಮಹಿಮೆ**, ಶ್ರೀಮದ್ ವಡ್ಡನಹಾಳ ಬೆಲಗೂರು ಸಂಸ್ಥಾನದ ವಿಶ್ವಕರ್ಮ ಸಮಾಜ(ರಿ) ವಡ್ಡನಾಳ, ಚನ್ನಗಿರಿ.

೧೩. ಗುರುಲಿಂಗಾಚಾರ್ಯ ವಿ, ೧೯೭೩, **ವಿಶ್ವಕರ್ಮ ಗುಣಗಾನ**, ವಿಶ್ವಕರ್ಮ ಪ್ರಕಾಶನ, ತುಮಕೂರು.

೧೪. ಗುರುಮೂರ್ತಿ ಕೆ.ಜಿ, ೧೯೭೯, **ಜಾನಪದ ಸಮಾಜ ಮತ್ತು ಸಂಸ್ಕೃತಿ**, ಕನ್ನಡ ಅಧ್ಯಯನ ಪೀಠ, ಕರ್ನಟಕ ವಿಶ್ವವಿದ್ಯಾಲಯ, ಧಾರವಾಡ.

೧೫. ಚಂದ್ರಶೇಖರ, ಟಿ.ಅರ್(ಅನು), ೨೦೦೦, ಮೂಲ ಜಾನ್ ಪೀಟರ್ ಶೌಟಿನ್, **ಅನುಭಾವಿಗಳ ಕ್ರಾಂತಿ**, ವೀರಶೈವ ಸಮಾಜಿಕತೆಯ ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ ಡಂಬಳ, ಗದಗ.

೧೬. ಚಂದ್ರಶೇಖರ ಆಚಾರ್ಯ, ಎ.ಬಿ, ೧೯೨೫, **ವಿಶ್ವಬ್ರಾಹ್ಮಣ ಧರ್ಮ**, ಜ್ಞಾನ ಭಂಡಾರ ಪ್ರಕಾಶನ, ಕೆ.ಜಿ.ಎಫ್.

೧೭. ಚಂದ್ರಶೇಖರ ಕಂಬಾರ(ಸಂ), ೧೯೮೫, **ಜಾನಪದ ವಿಶ್ವಕೋಶ ಭಾಗ ೧ ಮತ್ತು ೨**, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೧೮. ಚಂದ್ರಶೇಖರನ್ ಟಿ(ಸಂ), ೧೯೫೨, **ಕಾರ್ಕಳದ ಗೊಮ್ಮಟೇಶ್ವರ ಚರಿತೆ**, ಗವರ್ನಮೆಂಟ ಪ್ರೆಸ್, ಮದ್ರಾಸ್.

೧೯. ಚಿದಾನಂದ ಮೂರ್ತಿ ಎಂ, ೧೯೬೬, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೦. ಚಿದಾನಂದ ಮೂರ್ತಿ ಎಂ, ೧೯೭೭, **ಗ್ರಾಮೀಣ**, ಬಾಸ್ಕೋ ಪ್ರಕಾಶನ ಬೆಂಗಳೂರು.

೨೧. ಚೆನ್ನವೀರಪ್ಪ ಎಸ್.ಅರ್.(ಸಂ), ೨೦೦೦, **ನಾಗಲಿಂಗಸ್ವಾಮಿ ತತ್ವ ಪದಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಜವರೇಗೌಡ ದೇ, ೨೦೦೧, **ಜಾನಪದ ಅಧ್ಯಯನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೩. ಜೀವಣ್ಣ ಮಸಳಿ ೧೯೮೬, **ಶ್ರೀ ಮೌನೇಶ್ವರ ವಚನ ಸಂಗ್ರಹ**, ವಿಶ್ವದರ್ಶನ ಪ್ರಕಾಶನ, ಬಾಗಲಕೋಟೆ.

೨೪. ಜೀವಣ್ಣ ಮಸಳಿ(ಸಂ), ೧೯೫೭, **ಶ್ರೀ ಮೌನೇಶ್ವರ ವಚನ ಸಂಗ್ರಹ**, ವಚನ ಸಾಹಿತ್ಯ ಪ್ರಕಾಶನ ಮಂದಿರ, ಬಿಜಾಪುರ.

೨೫. ತಾಪಿ ಧರ್ಮರಾವ್ (ಮೂಲ) ರವಿ ಬೆಳಗೆರೆ (ಅನು) ೧೯೯೩, **ವಿವಾಹ ಅದರ ಹುಟ್ಟು ಮತ್ತು ಪೂರ್ವೋತ್ತರಗಳು**, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು

೨೬. ತಾಳಿಕೋಟೆ ಎ.ಎಂ, ೧೯೭೫, **ತಿಂಥಣಿ ಮೌನೇಶ್ವರ ಚರಿತ್ರ**, ಮಾನಪ್ಪ ಪುಸ್ತಕ ಪ್ರಕಾಶನ, ಗದಗ.

೨೭. ದೀಕ್ಷಿತ್ ವಿ.ಜಿ, ೧೯೭೫, **ಕರ್ನಾಟಕದಲ್ಲಿ ವಿಶ್ವ ಬ್ರಾಹ್ಮಣ ಧರ್ಮ ಮತ್ತು ಸಂಸ್ಕೃತಿ**, ವಿಶ್ವಕರ್ಮ ಗಾಯತ್ರಿ ಪ್ರಕಾಶನ, ಧಾರವಾಡ.

೨೮. ದೀಕ್ಷಿತ್ ವಿ.ಜಿ, ೧೯೯೧, **ಕರ್ನಾಟಕದ ಶಾಸನಗಳಲ್ಲಿ ವಿಶ್ವಬ್ರಾಹ್ಮಣರು**, ಮೂಲಸ್ಥಂಭ ಸಾಹಿತ್ಯ ಪ್ರಕಾಶನ, ಧಾರವಾಡ.

೨೯. ನನ್ನಿವಾಳ ಆಚಾರ್ಯ, ೧೯೯೮, **ಚಿತ್ತೂರು ಜಿಲ್ಲೆಯ ಅದಾಲತ್ ತೀರ್ಪು**, ಚಳ್ಳಕೆರೆ.

೩೦. ನಾಯಕ ಎನ್.ಆರ್. ೧೯೮೩, **ಕರ್ನಾಟಕದ ಶಕ್ತಿ ದೇವತೆಗಳು**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

೩೧. ನಾಗಭೂಷಣಸ್ವಾಮಿ. ಓ ಎಲ್, ೧೯೯೩, **ಪುರಾಣ**, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೨. ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳು, ೧೯೯೦, **ಹುಟ್ಟು ಸಾವುಗಳ ಮಧ್ಯೆ**, ತರಳಬಾಳು ಪ್ರಕಾಶನ, ಸಿರಿಗೆರೆ

೩೩. ಪ್ರಭಾಕರ್ ಎ.ಎಸ್.(ಸಂ), ೨೦೦೬, **ಆದಿವಾಸಿ ಆಖ್ಯಾನ**, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

೩೪. ಪಡಶೆಟ್ಟಿ ಎಂ.ಎಂ. ೧೯೯೨, **ತಿಂಥಣಿ ಮೋನಪ್ಪನ ಒಂದು ಅಧ್ಯಯನ**, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೊಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ.

೩೫. ಪತ್ತಾರ್ ಎನ್.ಅರ್. ೧೯೯೨, **ಶ್ರೀ ಕ್ಷೇತ್ರ ಶಿರಸಂಗಿ ಶ್ರೀ ಕಾಳಿಕಾದೇವಿ ಮಹಾತ್ಮೆ**, ಭುವನೇಶ್ವರಿ ಸಾಹಿತ್ಯ ಪ್ರಕಾಶನ, ಶಿರಹಟ್ಟಿ

೨೬. ಪರಮಶಿವಯ್ಯ ಜೀ.ಶಂ. ೧೯೭೩, **ಮಂಟೇಸ್ವಾಮಿ ಕಾವ್ಯ**, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

೩೭. ಪರಮಶಿವಯ್ಯ ಜೀ.ಶಂ. ೧೯೭೮, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೮. ಪರಮಶಿವಯ್ಯ ಜೀ.ಶಂ. ೧೯೮೧, ಕನ್ನಡ ವೃತ್ತಿಗಾಯಕರ ಕಾವ್ಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩೯. ಪುರುಷೋತ್ತಮ ಬಿಳಿಮಲೆ, ೧೯೯೭, ಕೂಡುಕಟ್ಟು, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ.

೪೦. ಪುಟ್ಟಯ್ಯ ಬಿ ಎಂ, ೧೯೯೯, ಕಾಲ್ನಡಿಗೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು

೪೧. ಬುದ್ದಪ್ಪ ಚಂದ್ರಪ್ಪ ಬೀಳಗಿ, ೧೯೮೪, ಶ್ರೀ ಮೌನೇಶ್ವರ ಚರಿತೆ ಮತ್ತು ವಚನಗಳು, ಪ್ರ: ಬುದ್ದಪ್ಪ ಚಂದ್ರಪ್ಪ ಬೀಳಗಿ, ಬಾಗಲಕೋಟೆ.

೪೨. ಬೋರಲಿಂಗಯ್ಯ ಹಿ.ಚಿ. ೧೯೯೧, ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು.

೪೩. ಬೋರಲಿಂಗಯ್ಯ ಹಿ.ಚಿ. ೧೯೯೫, ಕಾಡು ಕಾಂಕ್ರೀಟ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು.

೪೪. ಬೋರಲಿಂಗಯ್ಯ ಹಿ.ಚಿ. ೧೯೯೭, ಮಂಟೇಸ್ವಾಮಿ ಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ಬೋರಲಿಂಗಯ್ಯ ಹಿ.ಚಿ. ೧೯೯೬, ಕರ್ನಾಟಕ ಜಾನಪದ ಕಲೆಗಳ ಕೋಶ, ಕನ್ನಡ ವಿಶ್ವವಿದ್ಯಾಲಯ. ಹಂಪಿ

೪೬. ಬೋರಲಿಂಗಯ್ಯ ಹಿ.ಚಿ. ೨೦೦೦, ಒಂದು ಬುಡಕಟ್ಟಿನ ಲೋಕ ದೃಷ್ಟಿ,(ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ. ಹಂಪಿ

೪೭. ಮನುವಾಚಾರ್ಯ.ಬಿ.ಕೆ. ೧೯೯೩, ತಿಂಥಣಿ ಮೌನೇಶ್ವರ ಚರಿತ್ರೆ, ಮಲ್ಲಪ್ಪ ವಿರುಪಾಕ್ಷಪ್ಪ ಅರಳಿ ಪುಸ್ತಕ ವ್ಯಾಪಾರಿಗಳು, ಗದಗ

೪೮. ಮುತ್ತಾಚಾರ್ ಟಿ.ವಿ. ೧೯೬೮, ವಿಶ್ವಕರ್ಮವಂಶ ವಿಕಾಸ ಭಾಗ-೧, ವಿಶ್ವಕರ್ಮ ಧರ್ಮ ವರ್ಧಿನಿ ಸಂಘ, ತುಮಕೂರು.

೪೯. ಮೈತ್ರಿ ಕೆ.ಎಂ, ೨೦೦೨, ಬುಡಕಟ್ಟು ಕುಲಕಸುಬುಗಳು, ಕನ್ನಡ ವಿಶ್ವವಿದ್ಯಾಲಯ. ಹಂಪಿ

೫೦. ಮೊಗಳ್ಳಿ ಗಣೇಶ, ೧೯೯೯, ದಲಿತರು ಮತ್ತು ಜಾಗತೀಕರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೧. ರಹಮತ್ ತರಿಕೆರೆ, ೧೯೯೯, ಕರ್ನಾಟಕದ ಸೂಫಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೨. ಲಕ್ಕಪ್ಪಗೌಡ, ಎಚ್ ಜೆ, (ಪ್ರಸಂ), ೨೦೦೦, ಕರ್ನಾಟಕದ ಬುಡಕಟ್ಟುಗಳು, ಸಂ.೧ ಮತ್ತು ೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೫೩. ವಾಸುದೇವ ಬಡಿಗೇರ, ೧೯೯೯, ಸಂಡೂರಿನ ಕಾರ್ತಿಕೇಯ ತಪೋವನ, ಮಯ ಪ್ರಕಾಶನ, ಕಮಲಾಪುರ.

೫೪. ವಾಸುದೇವ ಬಡಿಗೇರ, ೨೦೦೨, ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ (ಚಾರಿತ್ರಿಕ ಪರಂಪರೆ) ಶ್ವೇತಾ, ಭಾಗೀರಥಿ ಪ್ರಕಾಶನ, ಹೊಸಪೇಟೆ.

೫೫. ವೀರೇಶ ಬಡಿಗೇರ ೧೯೯೮, ಅಡಿಗಲ್ಲು, ಮಯ ಪ್ರಕಾಶನ, ಕಮಲಾಪುರ.

೫೬. ವಿರುಪಾಕ್ಷ ಬಡಿಗೇರ, ೧೯೭೮, ವಿದ್ಯಾವಾಚಸ್ಪತಿ, ಶ್ರೀ ಎಸ್.ಎಂ. ಹೊಂಬಳ, ಗದಗ.

೫೭ ವಿರುಪಾಕ್ಷ ಬಡಿಗೇರ, ೧೯೯೮, ಶಿರಸಂಗಿ ಸಂಸ್ಥಾನ; ಒಂದು ಅಧ್ಯಯನ, ಲಿಂಗರಾಜ ವಿವಿಧೋದ್ದೇಶ ಸಂಸ್ಥೆ, ಧಾರವಾಡ.

೫೮. ವಿರುಪಾಕ್ಷ ಬಡಿಗೇರ(ಪ್ರ.ಸಂ) ೧೯೭೩, ನಾಗಲಿಂಗಾನುಭವ, ಅಭಿನವ ಪರಮ ಪೂಜ್ಯ ಜಗದ್ಗುರು ಅಜಾತ ಶ್ರೀನಾಗಲಿಂಗ ಮಹಾಸ್ವಾಮಿಗಳು, ನವಲಗುಂದ.

೫೯. ವೀರಣ್ಣ ಕೆ.ಪಿ. ೧೯೯೦, ಬಾಲ ವಿಶ್ವಕರ್ಮ, ಶ್ರೀ ಭುವನೇಶ್ವರಿ ಸಾಹಿತ್ಯ ಪ್ರಕಾಶನ, ಶಿರಹಟ್ಟಿ

೬೦. ಶಂಭಾ ಸಂಪುಟಗಳು, ೬, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೬೧. ಸತ್ಯನಾಥ್ ಟಿ ಎಸ್, ಕನ್ನಡ ಜಾನಪದ ಕೆಲವು ಮುಖಗಳು, ಶಾರದ ಪ್ರಕಾಶನ, ಗಾಂಧೀನಗರ, ಬೆಂಗಳೂರು

೬೨. ಸ.ಚಿ. ರಮೇಶ(ಸಂ) ೨೦೦೩, ಮಾಟ , ಮಂತ್ರ, ಮೋಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೩. ಸ.ಚಿ. ರಮೇಶ(ಸಂ) ೨೦೦೫, ಅಲೆಮಾರಿಗಳ ಸ್ಥಿತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೪. ಸಿದ್ದಲಿಂಗಯ್ಯ, ೧೯೯೭, ಗ್ರಾಮದೇವತೆಗಳು, ಮೂಲ ಭಾರತಿ ಪ್ರಕಾಶನ, ಬೆಂಗಳೂರು.

೬೫. ಸುಂಕಾಪುರ ಎಂ.ಎಸ್.(ಸಂ) ೧೯೯೦, ಜಾನಪದ ಸಾಹಿತ್ಯದರ್ಶನ–೮, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೬. ಜ್ಞಾನಾನಂದ ಜಿ(ಸಂ), ೧೯೭೮, ಶ್ರೀ ವಿಶ್ವಕರ್ಮಾನ್ವಯ ಪ್ರದೀಪಿಕಾ,(ವರಾಹನರಸಿಂಹಾಚಾರ್ಯ ) ಜ್ಞಾನ ಭಂಡಾರ, ಬಿ.ಇ.ಎಂ.ಎಲ್. ನಗರ, ಕೆ.ಜಿ.ಎಫ್.

೬೭ ಜ್ಞಾನಾನಂದ ಜಿ, ೧೯೭೭, ಭಾರತೀಯ ಸಂಸ್ಕೃತಿಗೆ ವಿಶ್ವಕರ್ಮರ ಕೊಡುಗೆ, ಜ್ಞಾನಭಂಡಾರ ಬಿ.ಇ.ಎಂ.ಎಲ್.ನಗರ, ಕೆ.ಜಿ.ಎಫ್.

೬೮. ಜ್ಞಾನಾನಂದ ಜಿ, ೨೦೦೮, ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು ,ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೬೯. ಜ್ಞಾನಾನಂದ ಜಿ, ೧೯೮೯, ವಿಶ್ವಕರ್ಮ ಸೂಕ್ತಿ: ಒಂದು ಅಧ್ಯಯನ, ,ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೭೦. ಜ್ಞಾನಾನಂದ ಜಿ, ೧೯೯೦, ಗುಂಟೂರು ಜಿಲ್ಲಾ ಕೋರ್ಟು ತೀರ್ಪು, ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೭೧. ಜ್ಞಾನಾನಂದ ಜಿ, ೧೯೯೦, ವಿಶ್ವಕರ್ಮೋಪಾಖ್ಯಾನ, ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೭೨. ಜ್ಞಾನಾನಂದ ಜಿ, ೨೦೦೭, ಕನ್ನಡ ಮಹಾಭಾರತಗಳಲ್ಲಿ ಶಿಲ್ಪ ಮತ್ತು ಶಿಲ್ಪಿ, ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೭೩. ಜ್ಞಾನಾನಂದ ಜಿ, ೨೦೦೫, ಪಾರಂಪರಿಕ ಶಿಲ್ಪ: ನಿನ್ನೆ–ನಾಳೆ, ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು೬೫. ಜ್ಞಾನಾನಂದ ಜಿ, ೨೦೦೮, ವಿಶ್ವಕರ್ಮ ದರ್ಶನ (ಸಂಪುಟ ೧ ), ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೭೪. ಜ್ಞಾನಾನಂದ ಜಿ, ೧೯೮೧, ಶ್ರೀ ವಿಶ್ವಕರ್ಮಾನ್ವಯ ಭೂಷಣಂ, ಸಂಕೃತಿ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

**ಸ್ಮರಣ ಸಂಚಿಕೆಗಳು:**

೧. ವಿಶ್ವಕರ್ಮ ಸ್ಮರಣ ಸಂಚಿಕೆ, ೧೯೬೯, ಗುರುನಾಥ ಸ್ವಾಮಿ ಗ್ರಂಥ ಪ್ರಕಾಶನ, ಗುಲಬರ್ಗ.

೨. ವಿಶ್ವಕರ್ಮ ಸ್ಮರಣ ಸಂಚಿಕೆ, ೧೯೭೩, ವಿಶ್ವಕರ್ಮ ಅಧಿವೇಶನ, ಬೆಂಗಳೂರು.

೩. ಉಪಾಸನೆ ಸ್ಮರಣೆ ಸಂಚಿಕೆ, ೨೦೦೩, ಕಾಳಿಕಾಂಬ ದೇವಸ್ಥಾನ, ಕಾರ್ಕಳ.

## ಲೇಖನಸೂಚಿ:


೧. ಅಂಬಳಿಕೆ ಹಿರಿಯಣ್ಣ, ಬುಡಕಟ್ಟು ಸಮೂಹಗಳ ಬದಲಾಗುತ್ತಿರುವ ಆರ್ಥಿಕ ಜೀವನ, ಜಾನಪದ ಗಂಗೋತ್ರಿ, ಸಂ-೬, ಸಂ-೨,ಸೆಪ್ಟಂಬರ್-೧೯೯೩

೨. ಉಷಾ ಎಂ, ಮಹಿಳಾ ಸಾಹಿತ್ಯದಲ್ಲಿ ಯಜಮಾನ್ಯ ಮತ್ತು ಪ್ರತಿರೋಧ ನೆಲೆಗಳು, ಮಹಿಳಾ ಅಧ್ಯಯನ ಸಂ-೨, ಸಂ-೧, ಜನೆವರಿ ೨೦೦೦, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಖಂಡೋಬಾ, ಪಿ.ಕೆ, ಬುಡಕಟ್ಟುಗಳ ಸಾಂಸ್ಕೃತಿಕ ಅಧ್ಯಯನ ಸೂತ್ರಗಳು, ಜಾನಪದ-೧೯೯೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೪. ಭಾನುಮತಿ ವೈ. ಸಿ ಮಹಿಳೆ-ಫಲವಂತಿಕೆ, ಮಹಿಳಾ ಅಧ್ಯಯನ ಸಂ-೨, ಸಂ-೧, ಜನೆವರಿ ೨೦೦೦, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಲಕ್ಕಪ್ಪಗೌಡ ಎಚ್ ಜೆ,(ಪ್ರ.ಸಂ) ಶವ ಸಂಸ್ಕಾರ ಪದ್ಧತಿಗಳು, (ವಿಶೇಷ ಸಂಚಿಕೆ)ಜಾನಪದ ಗಂಗೋತ್ರಿ, ಸಂ-೯, ಸಂ-೩, ಸಪ್ಪಂಬರ್೧೯೯೭ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೬. ವಿಲಿಯಂ ಮಾಡ್ತ, ಸೃಷ್ಟಿ ಪುರಾಣಗಳು : ವೈಜ್ಞಾನಿಕ ಅನಾವರಣ, ಜಾನಪದ ಗಂಗೋತ್ರಿ, ಸಂ-೯, ಸಂ-೩, ಸಪ್ಪಂಬರ್ ೧೯೯೭, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೭ ಹರಿಲಾಲ ಪವಾರ, **ಶೋಕಾಚರಣೆ : ಒಂದು ಟಿಪ್ಪಣಿ**, (ಶವ ಸಂಸ್ಕಾರ ಪದ್ಧತಿಗಳು,ವಿಶೇಷ ಸಂಚಿಕೆ)ಜಾನಪದ ಗಂಗೋತ್ರಿ, ಸಂ-೯, ಸಂ-೩, ಸಪ್ಪಂಬರ್೧೯೯೭ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

## English Books


1. Abishankar K, 1975 , **Karnatka state Gazzetter**
2. Acharya K.V. 1977, **Vishwakarma Information Bureau**.
3. **Ancient India vol.4** Archaeological Survey of India
4. Ananda K. Koomara Swamy, 1913, **Arts and Crafts of India, Ceyion:** London.T.N. Foulis.
5. Anand K. Koomarswamy, 1914, **Vishwakarma (Series),** Luihak, London and Thara Purala, Bombay.
6 Anand K.Koomaraswamy, **Arts and Crafts of India**
7. Anantha Krishna Iyer. K, **The Mysore Tribes and Castes (5 vol)**, Mittal publications, Delhi.
8. Bhattchaya N.N., 1977, **The Indian Mother Godesses,** New Delhi.
9. Buchanan.F.A, 1807, A **Jouney from Madras, through the countries of Mysore**.
10. David N Lorenjen, 1972, **Kapalikas and Kalamukhas,** Thamson perss Delhi.
11. Dubois Abbe, 1978, **Hindu Manuers, Customs and Cermonies,**Oxford university press.
12. Dubois Abbe, **Eisenschmiede and Damonen,**Oxford university press
13. Dumont Lovies, 1986, **A South Indian Sub-castes,** Oxford university Perss.
14. Edgar Thurston & Rangachar K, 1987, **Cast and Tribes of South India** ,Asian Educational Services, Delhi.
15. Enthoven R E, **The Tribes and Caste of Bombay**
16. Ghurge G.S. 1990, **Cast and Race in India,** Popular Prakashana, Bombay.
17. Hayavadna Rao, 1988, **India Caste System - A Study**, Asain Educational Seruices, New Delhi.

18. Hawanoor L.G. 1975, **Karnataka Backward Classes Commission Report**. Bangaloru.

19. Inden R.B. & Nicholos R.W. 1977, **Kin Ship in Bangate Culture**, Chicago, The University of Chicago press.

20. Jan Brouwer 1995, **The Makers of The World,** Oxford University Press.

21. Kosambi D.D. 1982, **The Culture and Civilization of Ancient India in Historical out line,** Vikas Publication House Ltd, Delhi.

22. Laxman T.K., 1966, **Cottage and Small Industries in Mysore**.

23. Mujamdar G.G and Rajaguru, S N, 1966, Ashamound Excavations at Koppal

24. Maekenzie, 1938, Ash Mound at Budikanam, Madras Journal of Literature and Science Volumes

25. Mudhol M S, 1989, A Technical Study of Matal Object from South India Megaliths, PhD.Thesis M.S University,Baroda

26. Russell and Hiralal, **The Tribes and Caste of The Central Provines of India**

27. Sherring M.A. 1987, **Hindu Tribes and Casts (vol 3),** Casmo Publication, Delhi.

28. Suryanath Kamath, **Mysore Gazeteer,** Govt press.



ಅಡಿಗಲ್ಲು ಮತ್ತು ಸುತ್ತಿಗೆಗಳು



ಕುಲುಮೆಯ ಪಕ್ಕದಲ್ಲಿ ಅಡುಗೆ ತಯಾರಿಸಿಕೊಂಡಿರುವುದು



ಕಮ್ಮಾರರು ತಯಾರಿಸಿದ ಚಕ್ಕಡಿ ಗಾಲಿಯ ಗುಮ್ಮ (ಮುಖ್ಯ ಗಡ್ಡೆ)



ಬಿಸಿ ಕಬ್ಬಿಣ ಹಿಡಿಯುವ ಇಕ್ಕಳಗಳು



ಕಮ್ಮಾರಿಕೆಯಲ್ಲಿ ಬಳಸುವ ಸಾಮಗ್ರಿಗಳು



ಕಮ್ಮಾರರು ತಯಾರಿಸಿದ ಕಬ್ಬಿಣದ ನೇಗಿಲುಗಳು



ರೋಣಗಲ್ಲಿಗೆ ಕಬ್ಬಿಣದ ಸಬ್ಬಲ್ ತಯಾರಿಸಿ ಮಾಡಿ ಸೀಸ ಹಾಕಿ ಅದನ್ನು ಕಲ್ಲಿಗೆ ಜೋಡಿಸಿರುವುದು



ಕಬ್ಬಿಣದ ಸಬ್ಬಲ್ ಜೋಡಿಸದ ರೋಣಗಲ್ಲು



ಕೆಲಸದಲ್ಲಿ ನಿರತನಾದ ಕಮ್ಮಾರ



ದೀಪಾವಳಿಯ ಆಯುಧ ಪೂಜೆ ಮಾಡುತ್ತಿರುವುದು



ಕುಲುಮೆಯ ಒಳನೋಟ



ಆಧುನಿಕ ವೈಸ್ ಅಳವಡಿಸಿಕೊಂಡಿರುವುದು


ಕುಲುಮೆ ಕೆಲಸದಲ್ಲಿ ನಿರತನಾದ ಕಮ್ಮಾರ


ಕತ್ತಿ ತಯಾರಿಸಲು ತಂದಂತಹ ಕಬ್ಬಿಣದ ಕಚ್ಚಾ ವಸ್ತುಗಳು


ದೀಪಾವಳಿಯಂದು ಆಯುಧ ಪೂಜೆಯಲ್ಲಿ ನಿರತನಾಗಿರುವ ಕಮ್ಮಾರ



ಹಳಿ ಕಟ್ಟಿದ ಚಕ್ಕಡಿ ಗಾಲಿ



ಕಮ್ಮಾರರು ತಯಾರಿಸಿದ ನೇಗಿಲು



ಕೀಲು ಹಾಕಿ ನಿಲ್ಲಿಸಿದ ಬಂಡಿ ಗಾಲಿ



ಕಮ್ಮಾರರ ಕುಟುಂಬ



ಕತ್ತಿಯ ಬಾಯಿ ಶಾರ್ಪ ಮಾಡಲು ಬಳಸುವ ಆಧುನಿಕ ಗ್ರೈಂಡರ್



ಉಳಿ ತಯಾರಿಕೆಯಲ್ಲಿ ಮಗ್ನನಾದ ಕಮ್ಮಾರ



ಕಮ್ಮಾರ ಕುಟುಂಬ



ಕತ್ತಿಯನ್ನು ತಯಾರು ಮಾಡುತ್ತಿರುವ ಕಮ್ಮಾರ



ಅಗ್ಗಿಷ್ಟಿಗೆ ದೃಶ್ಯ



ಚರ್ಮದಿಂದ ತಯಾರಿಸಿದ ತಿದಿ



ಆಧುನಿಕ ಬ್ಲೋವರ್



ಹದ ಇಡಲು ಬಳಸು ನೀರಿನ ಬಾನಿ



ಕಮ್ಮಾರರು



ಕುಲುಮೆ ಕೆಲಸದಲ್ಲಿ ನಿರತನಾದ ಕಮ್ಮಾರ (ಬಿಸಿಯಾದ ಕಬ್ಬಿಣವನ್ನು ಸೀಳುತ್ತಿರುವುದು)



ಅರ್ಧಂಬರ್ಧ ತಯಾರಾಗಿರುವ ಕತ್ತಿಗಳು



ಕಾರ್ಕಳದ ಶ್ರೀ ಕಾಳಿಕಾಂಬಾ ದೇವಸ್ಥಾನದಲ್ಲಿರುವ ಪಂಜುರ್ಲಿ ದೈವ




ಮಂಗಳೂರಿನ ಶ್ರೀ ಕಾಳಿಕಾಂಬಾ ದೇವಸ್ಥಾನ



ಬಾರ್ಕೂರಿನ ಕಾಳಿಕಾಂಬಾ



ಕಾಳಿಕಾಂಬಾ ದೇವಾಲಯ, ಉಪ್ಪಳ್ಳಿ



ಬರ್ಕೂರು ಕಾಳಿಕಾಂಬಾ ದೇವಸ್ಥಾನದಲ್ಲಿರುವ ಕಲ್ಕುಡ ದೈವದ ಮೂರ್ತಿ ಮತ್ತು ಮಂಚ



ಕಲ್ಕುಡ ಮತ್ತು ಪಂಜುರ್ಲಿ ದೈವಗಳ ಆರಾಧನೆ (ಕೋಲ)



ಕಮ್ಮಾರ ವಟುಗಳಿಗೆ ಬ್ರಹ್ಮೋಪದೇಶ ನೀಡುತ್ತಿರುವುದು






ಕಾಳಿಕಾಂಬಾ ದೇವಸ್ಥಾನ, ಬಾರ್ಕೂರು



ಕಾರ್ಕಳದ ಕಾಳಿಕಾಂಬಾ ದೇವಸ್ಥಾನದಲ್ಲಿರುವ ರಕ್ತೇಶ್ವರಿ, ಕಲ್ಕುಡ, ಪಂಜುರ್ಲಿ ಭೂತ



ಕಾರ್ಕಳದ ಕಾಳಿಕಾಂಬಾ ದೇವಸ್ಥಾನದಲ್ಲಿರುವ ಕಲ್ಕುಡ ಭೂತದ ಮೂರ್ತಿ ಮತ್ತು ಮಂಚ



ಕಮ್ಮಾರಿಕೆಯಲ್ಲಿ ಬಳಸುವ ವಿವಿಧ ಬಗೆಯ ಅರಗಳು





ಬ್ರಹ್ಮೋಪದೇಶ ಸಂದರ್ಭದಲ್ಲಿ ಮರುಹುಟ್ಟು ಪಡೆಯುವ ಶಾಸ್ತ್ರ



ಯಜ್ಞೋಪವೀತ ಧಾರಣೆಯ ನಂತರ ಸೂರ್ಯದೇವರಿಗೆ ನೋಡುತ್ತಿರುವುದು



ಮದುವೆಗೆ ಮೊದಲು ವಧು ವರರ ತಂದೆ ಪರಸ್ಪರ ಹಾರ ಬದಲಾಯಿಸಿಕೊಳ್ಳುತ್ತಿರುವುದು



ಮದುವೆ ಸಂದರ್ಭದಲ್ಲಿ ವಧುವಿಗೆ ನೀಡುತ್ತಿರುವ ಆಭರಣಗಳು



ವಧುವನ್ನು ವರನಿಗೆ ಕನ್ಯಾದಾನ ಮಾಡಿ ಧಾರೆ ಎರೆದು ಕೊಡುವ ದೃಶ್ಯ



ಮದುವೆಯ ಶಾಸ್ತ್ರದಲ್ಲಿಯ ಪವಿತ್ರ ಬಂಧನ



ಸಾಮೂಹಿಕ ಉಪನಯನದ ಸಮಾರಂಭ



ಸಾಮೂಹಿಕ ಮುಂಜುವೆಯಲ್ಲಿ ಬ್ರಹ್ಮೋಪದೇಶ ಮಾಡುತ್ತಿರುವುದು

## ಸಮುದಾಯದ ಮಾಹಿತಿದಾರರ ವಿವರಗಳು

| ಕ್ರ.ಸಂ. | ಹೆಸರು | ವಯಸ್ಸು | ಊರು | ತಾಲೂಕು | ಜಿಲ್ಲೆ |
|---|---|---|---|---|---|
| ೧. | ಬಿ.ಎಂ. ಶೇಖರ ಆಚಾರ್ಯ | ೪೫ | ಹೆಬ್ರಿ | ಕಾರ್ಕಳ | ಉಡುಪಿ |
| ೨. | ಗೋಪಾಲ ಆಚಾರ್ಯ | ೪೨ | ಕಂಡ್ಲೂರು | ಕುಂದಾಪುರ | ಉಡುಪಿ |
| ೩. | ಶ್ರೀನಿವಾಸ ಆಚಾರ್ಯ | ೪೭ | ಹೆಬ್ರಿ | ಕಾರ್ಕಳ | ಉಡುಪಿ |
| ೪. | ಪದ್ಮನಾಭ ಆಚಾರ್ಯ | ೫೦ | ಹೆಬ್ರಿ | ಕಾರ್ಕಳ | ಉಡುಪಿ |
| ೫. | ಕಿಟ್ಟು ಆಚಾರ್ಯ | ೮೩ | ಹೆಬ್ರಿ | ಕಾರ್ಕಳ | ಉಡುಪಿ |
| ೬. | ಅಚ್ಯುತ ಆಚಾರ್ಯ | ೪೦ | ಹೆಬ್ರಿ | ಕಾರ್ಕಳ | ಉಡುಪಿ |
| ೭. | ಎಸ್. ಕೇಶವ ಆಚಾರ್ಯ | ೫೭ | ಸಾಣೂರು | ಕಾರ್ಕಳ | ಉಡುಪಿ |
| ೮. | ಅಣ್ಣಿ ಆಚಾರ್ಯ | ೫೭ | ಸಾಣೂರು | ಕಾರ್ಕಳ | ಉಡುಪಿ |
| ೯. | ಮುತ್ತಯ್ಯ ಆಚಾರ್ಯ | ೬೭ | ನಾಯಕವಾಡಿ | ಕುಂದಾಪುರ | ಉಡುಪಿ |
| ೧೦. | ನಾರಾಯಣ | ೫೧ | ತ್ರಾಸಿ | ಕುಂದಾಪುರ | ಉಡುಪಿ |
| ೧೧. | ಅಣ್ಣಪ್ಪಯ್ಯ ಆಚಾರ್ಯ | ೬೫ | ಹೆಮ್ಮುಂಜೆ | ಕುಂದಾಪುರ | ಉಡುಪಿ |
| ೧೨. | ಶ್ರೀನಿವಾಸ ಆಚಾರ್ಯ | ೫೩ | ಟಂಕ್ ಬೈಲು(ನಾಡ) | ಕುಂದಾಪುರ | ಉಡುಪಿ |
| ೧೩. | ಪ್ರಭಾಕರ ಆಚಾರ್ಯ | ೫೦ | ಅರಿಮುಂಜೇಶ್ವರ | ಕುಂದಾಪುರ | ಉಡುಪಿ |
| ೧೪. | ಸುಬ್ರಾಯ ಆಚಾರ್ಯ | ೫೫ | ಮರವಂತೆ | ಕುಂದಾಪುರ | ಉಡುಪಿ |
| ೧೫. | ಆನಂದ | ೫೦ | ಕುಂದಬಾರಂದಡಿ | ಕುಂದಾಪುರ | ಉಡುಪಿ |
| ೧೬. | ಶ್ರೀನಿವಾಸ ಆಚಾರ್ಯ | ೪೫ | ಪಡುಕೋಣೆ | ಕುಂದಾಪುರ | ಉಡುಪಿ |
| ೧೭. | ನರಸಿಂಹ ಆಚಾರ್ಯ | ೫೫ | ಕುಂದಬಾರಂದಡಿ | ಕುಂದಾಪುರ | ಉಡುಪಿ |
| ೧೮. | ಮಹಾಬಲಾ ಆಚಾರ್ಯ | ೫೫ | ಬಡಾಕೇರಿ | ಕುಂದಾಪುರ | ಉಡುಪಿ |
| ೧೯. | ಗಣಪಯ್ಯ ಆಚಾರ್ಯ | ೬೦ | ಪಡುಕೋಣೆ | ಕುಂದಾಪುರ | ಉಡುಪಿ |
| ೨೦. | ಪುಟ್ಟಯ್ಯ ಆಚಾರ್ಯ | ೬೫ | ಆಲೂರು | ಕುಂದಾಪುರ | ಉಡುಪಿ |
| ೨೧. | ಪದ್ಮನಾಭ ಆಚಾರ್ಯ | ೬೫ | ತೆಕ್ಕಟ್ಟೆ | ಕುಂದಾಪುರ | ಉಡುಪಿ |
| ೨೨. | ಪುಟ್ಟಯ್ಯ ಆಚಾರ್ಯ | ೬೦ | ಆಲೂರು | ಕುಂದಾಪುರ | ಉಡುಪಿ |
| ೨೩. | ಲಕ್ಷ್ಮೀ ನಾರಾಯಣ | ೫೬ | ಗೋಪಾಡಿ | ಕುಂದಾಪುರ | ಉಡುಪಿ |
| ೨೪. | ಗಣೇಶ ಆಚಾರ್ಯ | ೩೪ | ಗೋಪಾಡಿ | ಕುಂದಾಪುರ | ಉಡುಪಿ |
| ೨೫. | ವಾಸುದೇವ ಆಚಾರ್ಯ | ೫೮ | ಬಿಜಾಡಿ | ಕುಂದಾಪುರ | ಉಡುಪಿ |
| ೨೬. | ರಾಮಕೃಷ್ಣ ಆಚಾರ್ಯ | ೪೮ | ಗೋಪಾಡಿ | ಕುಂದಾಪುರ | ಉಡುಪಿ |
| ೨೭. | ಚಂದ್ರಶೇಖರ | ೪೦ | ಕೊಟೇಶ್ವರ | ಕುಂದಾಪುರ | ಉಡುಪಿ |

| | | | | | |
|---|---|---|---|---|---|
| ೨೮. | ಚಂದ್ರಶೇಖರ ಆಚಾರ್ಯ | ೪೨ | ಕೋಟೇಶ್ವರ | ಕುಂದಾಪುರ | ಉಡುಪಿ |
| ೨೯. | ಬಾಬು ಆಚಾರ್ಯ | ೫೨ | ತ್ರಾಸಿ | ಕುಂದಾಪುರ | ಉಡುಪಿ |
| ೩೦. | ಗುರುರಾಜ | ೫೬ | ತಲ್ಲೂರು | ಕುಂದಾಪುರ | ಉಡುಪಿ |
| ೩೧. | ಚಂದ್ರಯ್ಯ ಆಚಾರ್ಯ | ೬೪ | ಅರಾಟೆ | ಕುಂದಾಪುರ | ಉಡುಪಿ |
| ೩೨. | ಸದಾಶಿವ ಆಚಾರ್ಯ | ೪೦ | ಶಿವಪುರ | ಕಾರ್ಕಳ | ಉಡುಪಿ |
| ೩೩. | ಶ್ರೀಕರ ಆಚಾರ್ಯ | ೪೨ | ಮಾವಿನ ಕಟ್ಟೆ | ಕಾರ್ಕಳ | ಉಡುಪಿ |
| ೩೪. | ವಿಠಲ ಆಚಾರ್ಯ | ೫೦ | ಶಿವಪುರ | ಕಾರ್ಕಳ | ಉಡುಪಿ |
| ೩೫. | ಮುತ್ತಯ್ಯ ಆಚಾರ್ಯ | ೪೦ | ಆಲೂರು | ಕುಂದಾಪುರ | ಉಡುಪಿ |
| ೩೬. | ಮಹಾಬಲ | ೪೫ | ನಾಯಕ ವಾಡಿ | ಕುಂದಾಪುರ | ಉಡುಪಿ |
| ೩೭. | ಗಣಪತಿ ಆಚಾರ್ಯ | ೪೫ | ಹಕ್ಲಾಡಿ | ಕುಂದಾಪುರ | ಉಡುಪಿ |
| ೩೮. | ಕಮಲಾಕರ ಆಚಾರ್ಯ | ೫೦ | ಕೋಣಿ | ಕುಂದಾಪುರ | ಉಡುಪಿ |
| ೩೯. | ಕೃಷ್ಣಯ್ಯ ಆಚಾರ್ಯ | ೬೦ | ಉಳ್ಳೂರು | ಕುಂದಾಪುರ | ಉಡುಪಿ |
| ೪೦. | ವಾಸುದೇವ ಆಚಾರ್ಯ | ೪೮ | ಪಡುಕೋಣೆ | ಕುಂದಾಪುರ | ಉಡುಪಿ |
| ೪೧. | ನಾರಾಯಣ ಆಚಾರ್ಯ | ೫೯ | ಹೆಬ್ರಿ | ಕಾರ್ಕಳ | ಉಡುಪಿ |
| ೪೨. | ಜನಾರ್ಧನ ಆಚಾರ್ಯ | ೫೫ | ಹೆಬ್ರಿ | ಕಾರ್ಕಳ | ಉಡುಪಿ |
| ೪೩. | ಸೀನ ಆಚಾರ್ಯ | ೪೩ | ಎಳ್ಳಾರೆ | ಕಾರ್ಕಳ | ಉಡುಪಿ |
| ೪೪. | ಪ್ರಕಾಶ ಆಚಾರ್ಯ | ೩೮ | ಶಿವಪುರ | ಕಾರ್ಕಳ | ಉಡುಪಿ |
| ೪೫. | ಪುಟ್ಟಯ್ಯ ಆಚಾರ್ಯ | ೬೦ | ಬೀಜಾಡಿ | ಕುಂದಾಪುರ | ಉಡುಪಿ |
| ೪೬. | ನಾರಾಯಣ ಆಚಾರ್ಯ | ೫೦ | ಹೊನ್ನೆಕಟ್ಟೆ | ಕಾರ್ಕಳ | ಉಡುಪಿ |
| ೪೭. | ಕರುಣಾಕರ | ೩೫ | ನಿಡಿಗಲ್ಲು,ಮುಂಡಾಜೆ | ಬೆಳ್ತಂಗಡಿ | ಉಡುಪಿ |
| ೪೮. | ದಿನೇಶ ಆಚಾರ್ಯ | ೨೩ | ಉಜಿರೆ | ಬೆಳ್ತಂಗಡಿ | ಉಡುಪಿ |
| ೪೯. | ಕೃಷ್ಣಯ್ಯ ಆಚಾರ್ಯ | ೪೫ | ಉಜಿರೆ | ಬೆಳ್ತಂಗಡಿ | ಉಡುಪಿ |
| ೫೦. | ಜನಾರ್ಧನ ಆಚಾರ್ಯ | ೪೫ | ಕುಕುಂದ ಸುಬ್ರಮಣ್ಯ | ಸುಳ್ಯ | ಉಡುಪಿ |
| ೫೧. | ಗಿರೀಶ ಆಚಾರ್ಯ | ೩೩ | ಸುಬ್ರಮಣ್ಯ | ಸುಳ್ಯ | ಉಡುಪಿ |
| ೫೨. | ರಾಮಣ್ಣ ಆಚಾರ್ಯ | ೫೬ | ಕುಕ್ಕುಂದೂರು | ಸುಳ್ಯ | ಉಡುಪಿ |
| ೫೩. | ಸದಾಶಿವ | ೪೫ | ಕುಕ್ಕುಂದೂರು | ಸುಳ್ಯ | ಉಡುಪಿ |
| ೫೪. | ಲಿಂಗಪ್ಪ ಆಚಾರ್ಯ | ೭೫ | ಕೊಕ್ಕಡ | ಪುತ್ತೂರು | ಉಡುಪಿ |
| ೫೫. | ವಾಸುದೇವ ಆಚಾರ್ಯ | ೪೯ | ಕುಂಟ್ಯಾನ | ಪುತ್ತೂರು | ಉಡುಪಿ |
| ೫೬. | ಶ್ರೀಧರ | ೩೧ | ಈಶ್ವರ | ಪುತ್ತುರು | ಮಂಗಳೂರು |
| ೫೭. | ನಾರಾಯಣ ಆಚಾರ್ಯ | ೬೦ | ಕೆಮ್ಮಾಯಿ | ಪುತ್ತೂರು | ಉಡುಪಿ |

| | | | | | |
|---|---|---|---|---|---|
| ೫೮. | ಜನಾರ್ಧನ ಆಚಾರ್ಯ | ೬೦ | ಕುಂಟ್ಯಾನ | ಪುತ್ತೂರು | ಉಡುಪಿ |
| ೫೯. | ಗೋಪಯ್ಯ ಆಚಾರ್ಯ | ೭೦ | ಶೇಡಿಯಾಪು | ಪುತ್ತೂರು | ಉಡುಪಿ |
| ೬೦. | ಹರೀಶ | ೨೫ | ನಿಡ್ಯ | ಪುತ್ತೂರು | ಉಡುಪಿ |
| ೬೧. | ಸುಂದರ ಆಚಾರ್ಯ | ೫೮ | ದೇವರ ಗದ್ದೆ | ಸುಳ್ಯ | ಉಡುಪಿ |
| ೬೨. | ಅಶೋಖ ಆಚಾರ್ಯ | ೨೫ | ಶಿರೂರು | ಕುಂದಾಪುರ | ಉಡುಪಿ |
| ೬೩. | ಗೋಪಾಲ ಆಚಾರ್ಯ | ೫೫ | ಕಲಮಶಿಲೆ | ಕುಂದಾಪುರ | ಉಡುಪಿ |
| ೬೪. | ಆನಂದ | ೪೮ | ಬಸ್ರೂರು | ಕುಂದಾಪುರ | ಉಡುಪಿ |
| ೬೫. | ರಘುರಾಮ ಆಚಾರ್ಯ | ೬೫ | ಪಾರ್ಕಳಿ | ಉಡುಪಿ | ಉಡುಪಿ |
| ೬೬ | ಮಂಜುನಾಥ ಆಚಾರ್ಯ | ೪೫ | ಎರ್ಮಾಳು | ಉಡುಪಿ | ಉಡುಪಿ |
| ೬೭. | ಉಮೇಶ | ೨೦ | ಹೆಜಮಾಡಿ | ಉಡುಪಿ | ಉಡುಪಿ |
| ೬೮ | ಸೀತಾರಾಮ ಆಚಾರ್ಯ | ೫೫ | ಕೋಟಿ(ಸೂರಿಂಜೆ) | ಮಂಗಳೂರು | ಉಡುಪಿ |
| ೬೯. | ಜನಾರ್ಧನ ಆಚಾರ್ಯ | ೬೦ | ಅದಮಾರು | ಉಡುಪಿ. | ಉಡುಪಿ |
| ೭೦. | ಸಂತೋಷ್ | ೨೫ | ಪಡುಬಿದ್ರಿ | ಉಡುಪಿ | ಉಡುಪಿ |
| ೭೧. | ವಿಠಲ ಆಚಾರ್ಯ | ೩೦ | ಅದಮಾರು | ಉಡುಪಿ | ಉಡುಪಿ |
| ೭೨. | ಲಕ್ಷ್ಮಣ ಆಚಾರ್ಯ | ೪೫ | ಅದಮಾರು | ಉಡುಪಿ | ಉಡುಪಿ |
| ೭೩. | ಗಣಪತಿ ಆಚಾರ್ಯ | ೫೦ | ಅದಮಾರು | ಉಡುಪಿ | ಉಡುಪಿ |
| ೭೪. | ಜಯರಾಮ ಆಚಾರ್ಯ | ೪೨ | ಹೆಜಮಾಡಿ | ಉಡುಪಿ | ಉಡುಪಿ |
| ೭೫. | ದೇವಿದಾಸ ಆಚಾರ್ಯ | ೪೫ | ತೊಕ್ಕೊಟ್ಟು | ಮಂಗಳೂರು | ಉಡುಪಿ |
| ೭೬ | ಶಿವರಾಮ ಆಚಾರ್ಯ | ೫೨ | ಕಾರ್ನಾಡು | ಮಂಗಳೂರು | ಉಡುಪಿ |
| ೭೭ | ಜೆ. ಜಗದೀಶ | ೪೪ | ಕಾರ್ನಾಡು | ಮಂಗಳೂರು | ಉಡುಪಿ |
| ೭೮. | ಸುಬ್ರಯ್ಯ ಆಚಾರ್ಯ | ೫೦ | ಬೈಂದೂರು | ಕುಂದಾಪುರ | ಉಡುಪಿ |
| ೭೯. | ಬಾಬು ಆಚಾರ್ಯ | ೫೬ | ಪಡುವರಿ | ಕುಂದಾಪುರ | ಉಡುಪಿ |
| ೮೦. | ಕೃಷ್ಣ ಆಚಾರ್ಯ | ೪೬ | ಶಿರೂರು | ಕುಂದಾಪುರ | ಉಡುಪಿ |
| ೮೧. | ಬಾಬು ಆಚಾರ್ಯ | ೫೫ | ಹೆಮ್ಮಂಜೆ | ಕುಂದಾಪುರ | ಉಡುಪಿ |
| ೮೨. | ಅಣ್ಣಯ್ಯ ಆಚಾರ್ಯ | ೬೨ | ಹೆಮ್ಮಂಜೆ | ಕುಂದಾಪುರ | ಉಡುಪಿ |
| ೮೩. | ಅನಂತಯ್ಯ ಆಚಾರ್ಯ | ೭೫ | ನಾಡ | ಕುಂದಾಪುರ | ಉಡುಪಿ |
| ೮೪. | ಸೀತಾರಾಮ | ೪೦ | ಸೇನಾಪುರ | ಕುಂದಾಪುರ | ಉಡುಪಿ |
| ೮೫. | ಮಂಜುನಾಥ ಆಚಾರ್ಯ | ೩೫ | ಸೇನಾಪುರ | ಕುಂದಾಪುರ | ಉಡುಪಿ |
| ೮೬ | ಮಹಲಿಂಗ ಆಚಾರ್ಯ | ೪೫ | ಗುಡ್ಡೆಅಂಗಡಿ | ಕುಂದಾಪುರ | ಉಡುಪಿ |
| ೮೭. | ಸೀನಾ ಆಚಾರ್ಯ | ೫೫ | ಕಂಡ್ಲೂರು | ಕುಂದಾಪುರ | ಉಡುಪಿ |

| | | | | | |
|---|---|---|---|---|---|
| ೮೮. | ಶೇಷಗಿರಿ ಆಚಾರ್ಯ | ೬೮ | ಬಸ್ರೂರು | ಕುಂದಾಪುರ | ಉಡುಪಿ |
| ೮೯. | ದಿನಕರ ಆಚಾರ್ಯ | ೨೮ | ಕಂಡ್ಲೂರು | ಕುಂದಾಪುರ | ಉಡುಪಿ |
| ೯೦. | ಸೀನಾ ಆಚಾರ್ಯ | ೬೮ | ಕಂಡ್ಲೂರು | ಕುಂದಾಪುರ | ಉಡುಪಿ |
| ೯೧. | ನಾರಾಯಣ ಆಚಾರ್ಯ | ೫೩ | ಚಾತ್ರಮಕ್ಕಿ | ಕುಂದಾಪುರ | ಉಡುಪಿ |
| ೯೨. | ನೀಲಪ್ಪ ಆಚಾರ್ಯ | ೬೮ | ಚಾತ್ರಮಕ್ಕಿ | ಕುಂದಾಪುರ | ಉಡುಪಿ |
| ೯೩. | ಆನಂದ ಆಚಾರ್ಯ | ೪೨ | ಶಂಕರನಾರಾಯಣ | ಕುಂದಾಪುರ | ಉಡುಪಿ |
| ೯೪. | ಗೋವಿಂದ ಆಚಾರ್ಯ | ೩೫ | ಜನಶಾಲೆ | ಕುಂದಾಪುರ | ಉಡುಪಿ |
| ೯೫. | ಉಮೇಶ ಆಚಾರ್ಯ | ೨೫ | ಶಂಕರನಾರಾಯಣ | ಕುಂದಾಪುರ | ಉಡುಪಿ |
| ೯೬. | ವಾಸುದೇವ ಆಚಾರ್ಯ | ೪೦ | ಹಾಲಾಡಿ | ಕುಂದಾಪುರ | ಉಡುಪಿ |
| ೯೭. | ಮಹಾಬಲ ಆಚಾರ್ಯ | ೫೦ | ನಾಯಕ ವಾಡಿ | ಕುಂದಾಪುರ | ಉಡುಪಿ |
| ೯೮. | ಮುತ್ತಯ್ಯ ಆಚಾರ್ಯ | ೬೯ | ಗುಜ್ಜಾ | ಕುಂದಾಪುರ | ಉಡುಪಿ |
| ೯೯. | ಸೀನ ಆಚಾರ್ಯ | ೬೦ | ಕಂಡ್ಲೂರು | ಕುಂದಾಪುರ | ಉಡುಪಿ |
| ೧೦೦. | ಸುಬ್ರಯ್ಯ ಆಚಾರ್ಯ | ೫೦ | ನಡುಬೆಟ್ಟು | ಕುಂದಾಪುರ | ಉಡುಪಿ |
| ೧೦೧. | ಸುದಾಖರ | ೨೪ | ನಡುಬೆಟ್ಟು | ಕುಂದಾಪುರ | ಉಡುಪಿ |
| ೧೦೨. | ಪುಟ್ಟಯ್ಯ ಆಚಾರ್ಯ | ೫೬ | ನಾಯಕವಾಡಿ | ಕುಂದಾಪುರ | ಉಡುಪಿ |
| ೧೦೩. | ಪ್ರಭಾಕರ ಆಚಾರ್ಯ | ೪೫ | ವಡೆಯರ ಹೊಬಳಿ | ಕುಂದಾಪುರ | ಉಡುಪಿ |
| ೧೦೪. | ಕೆ.ಎಸ್. ಪ್ರಕಾಶ | ೩೫ | ವಡೆಯರ ಹೊಬಳಿ | ಕುಂದಾಪುರ | ಉಡುಪಿ |
| ೧೦೫. | ರುದ್ರಯ್ಯ ಆಚಾರ್ಯ | ೭೫ | ಸಾಲವಾಡಿ | ಕುಂದಾಪುರ | ಉಡುಪಿ |
| ೧೦೬. | ಸೀತಾರಾಮ ಆಚಾರ್ಯ | ೨೬ | ಹುಣಿಸೆಮಕ್ಕಿ | ಕುಂದಾಪುರ | ಉಡುಪಿ |
| ೧೦೭. | ರುದ್ರಯ್ಯ ಆಚಾರ್ಯ | ೬೦ | ಗುಡ್ಡಯಂಗಡಿ | ಕುಂದಾಪುರ | ಉಡುಪಿ |
| ೧೦೮. | ನರಸಿಂಹ ಆಚಾರ್ಯ | ೫೨ | ಬಿದ್ಕಲ್ ಕಟ್ಟೆ | ಕುಂದಾಪುರ | ಉಡುಪಿ |
| ೧೦೯. | ಶಂಕರ ಆಚಾರ್ಯ | ೪೮ | ಸಾಲ್ವಡಿ | ಕುಂದಾಪುರ | ಉಡುಪಿ |
| ೧೧೦. | ಪದ್ಮನಾಬ ಆಚಾರ್ಯ | ೫೮ | ನೇರಂಬಂಳ್ಳಿ | ಕುಂದಾಪುರ | ಉಡುಪಿ |
| ೧೧೧. | ಪ್ರಕಾಶ ಆಚಾರ್ಯ | ೩೮ | ನೇರಂಬಂಳ್ಳಿ | ಕುಂದಾಪುರ | ಉಡುಪಿ |
| ೧೧೨. | ಗಂಗಾಧರ | ೪೪ | ಕೋಣೆ | ಕುಂದಾಪುರ | ಉಡುಪಿ |
| ೧೧೩. | ಶಿವರಾಮ ಆಚಾರ್ಯ | ೬೫ | ಕೊಟ್ರೇಶ್ವರ | ಕುಂದಾಪುರ | ಉಡುಪಿ |
| ೧೧೪. | ಬಾಬು ಆಚಾರ್ಯ | ೫೪ | ನಡುಬೆಟ್ಟು | ಕುಂದಾಪುರ | ಉಡುಪಿ |
| ೧೧೫. | ಸತೀಶ ಆಚಾರ್ಯ | ೫೦ | ನಾಗೂರು | ಕುಂದಾಪುರ | ಉಡುಪಿ |
| ೧೧೬. | ಬಾಬು ಆಚಾರ್ಯ | ೪೫ | ತ್ರಾಸಿ | ಕುಂದಾಪುರ | ಉಡುಪಿ |
| ೧೧೭. | ಮಂಜುನಾಥ | ೪೬ | ಮರವಂತೆ | ಕುಂದಾಪುರ | ಉಡುಪಿ |

| | | | | | |
|---|---|---|---|---|---|
| ೧೧೮. | ವಿಠಲ ಆಚಾರ್ಯ | ೫೨ | ಸಂತೆಕಟ್ಟೆ | ಉಡುಪಿ | ಉಡುಪಿ |
| ೧೨೦. | ಕೃಷ್ಣಯ್ಯ ಆಚಾರ್ಯ | ೫೪ | ಹಳುವಳ್ಳಿ ಕರ್ಜೆ | ಉಡುಪಿ | ಉಡುಪಿ |
| ೧೨೧. | ಗಣಪತಿ | ೩೮ | ಬಜಗೋಳಿ | ಕಾರ್ಕಳ | ಉಡುಪಿ |
| ೧೨೨. | ಅಚ್ಯುತ ಆಚಾರ್ಯ | ೬೦ | ನಲ್ಲೂರು | ಕಾರ್ಕಳ | ಉಡುಪಿ |
| ೧೨೩. | ಗಣಪತಿ ಆಚಾರ್ಯ | ೬೦ | ಅತ್ತೂರು | ಕಾರ್ಕಳ | ಉಡುಪಿ |
| ೧೨೪. | ನಾರಾಯಣ ಆಚಾರ್ಯ | ೬೦ | ಬೊಬ್ಬಾಳ | ಕಾರ್ಕಳ | ಉಡುಪಿ |
| ೧೨೫. | ದಾಮೋದರ ಆಚಾರ್ಯ | ೫೫ | ಮೀಯಾರು | ಕಾರ್ಕಳ | ಉಡುಪಿ |
| ೧೨೬. | ಗೋಪಾಲ ಆಚಾರ್ಯ | ೪೫ | ಕೊಳ್ಳೆಗಾಲ | ಕೊಳ್ಳೆಗಾಲ | ಚಾಮರಾಜನಗರ |
| ೧೨೭. | ಶ್ರೀನಿವಾಸ ಆಚಾರ್ಯ | ೪೮ | ಬಾಪೂಜಿನಗರ | ಕೊಳ್ಳೆಗಾಲ | ಚಾಮರಾಜನಗರ |
| ೧೨೮. | ಗಣಪ್ಪಯ್ಯ ಆಚಾರ್ಯ | ೫೦ | ಹಾನಾಪೂರ | ಕೊಳ್ಳೆಗಾಲ | ಚಾಮರಾಜನಗರ |
| ೧೨೯. | ಕೇಶವ ಆಚಾರ್ಯ | ೩೬ | ಹಾನಾಪೂರ | ಕೊಳ್ಳೆಗಾಲ | ಚಾಮರಾಜನಗರ |
| ೧೩೦. | ವೆಂಕಟರಂಣ ಆಚಾರ್ಯ | ೫೦ | ಶಿವಾಪುರ | ಕೊಳ್ಳೆಗಾಲ | ಚಾಮರಾಜನಗರ |
| ೧೩೧. | ರುದ್ರಾಚಾರಿ | ೩೭ | ಕಣ್ಣೂರು | ಕೊಳ್ಳೆಗಾಲ | ಚಾಮರಾಜನಗರ |
| ೧೩೨. | ಕೆ. ರಘುನಂದನ | ೬೭ | ಹಣಗಳ್ಳಿ | ಕೊಳ್ಳೆಗಾಲ | ಚಾಮರಾಜನಗರ |
| ೧೩೩. | ನೀಲಕಂಟಾಚಾರಿ | ೫೧ | ಪಾಳ್ಯ | ಕೊಳ್ಳೆಗಾಲ | ಚಾಮರಾಜನಗರ |
| ೧೪೪. | ಕೆ. ರಾಮಾಚಾರಿ | ೩೫ | ಹಿಂದವಾಡಿ | ಕೊಳ್ಳೆಗಾಲ | ಚಾಮರಾಜನಗರ |
| ೧೪೫. | ಮಂಟೇಲಿಂಗಾಚಾರಿ | ೫೭ | ಹಲಗೂರು | ಕೊಳ್ಳೆಗಾಲ | ಚಾಮರಾಜನಗರ |
| ೧೪೬. | ಕೆಂಪಾಚಾರಿ | ೪೭ | ಹಲಗೂರು | ಕೊಳ್ಳೆಗಾಲ | ಚಾಮರಾಜನಗರ |
| ೧೪೭. | ಸಿದ್ದಪ್ಪಾಚಾರಿ | ೩೩ | ಕಾಮಗೆರೆ | ಕೊಳ್ಳೆಗಾಲ | ಚಾಮರಾಜನಗರ |
| ೧೪೮. | ಮಂಟೇಲಿಂಗಪ್ಪ | ೬೨ | ದೊಡ್ಡ ಆರ್ ಎಸ್ | ಕೊಳ್ಳೆಗಾಲ | ಚಾಮರಾಜನಗರ |
| ೧೫೦ | ಕೆ ರುದ್ರಮ್ಮ | ೪೯ | ಸತ್ಯಗಾಲ | ಕೊಳ್ಳೆಗಾಲ | ಚಾಮರಾಜನಗರ |

